# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಸಂಕೇತ್, ಶ್ರೀಹರಿ, ಕಮಲಂ ಅರಸು, ರಾಂಚಂದ್ರ ಕೊಪ್ಪಲು,
ಜಿ. ಎಂ. ಬೊಮ್ನಳ್ಳಿ

ಮುಖಚಿತ್ರ : ಅಣ್ಣಾ ಹಜಾರೆ ಒಳಚಿತ್ರ : ರಾಮ್ ಶರಣ್ ಶರ್ಮ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಖ್ಯಾತ ಇತಿಹಾಸಕಾರ ಡಾ|| ಆರ್. ಎಸ್. ಶರ್ಮ ತೀರಿಕೊಂಡಿದ್ದಾರೆ. ಅವರನ್ನು ಕುರಿತ ಒಂದು ಬರಹ ಈ ಸಂಚಿಕೆಯಲ್ಲಿ ಪ್ರಕಟವಾಗಿದೆ. ಅವರು ಕೇವಲ ವಿದ್ವತ್ತಿಗೆ ಹೆಸರಾದವರಲ್ಲ, ದೇಶದ ಕೋಮುವಾದ ವಿರೋಧಿ ಹೋರಾಟದಲ್ಲಿ ಮತ್ತು ಬೇರೆ ಅನೇಕ ಜನಪರ ಹೋರಾಟಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದವರು. ''ಪ್ರಾಚೀನ ಭಾರತ'' ಎಂಬ ಅವರ ಇತಿಹಾಸ ಪಠ್ಯಪುಸ್ತಕ ಪ್ರಕಟವಾದ ತರುವಾಯದಲ್ಲಿ ಅದರ ಸರಳ ಆವೃತ್ತಿಯನ್ನು ಎನ್.ಸಿ.ಇ.ಆರ್.ಟಿ. ಪ್ರಕಾಶಪಡಿಸಿತು. ಅದನ್ನು ಕೇಂದ್ರೀಯ ಶಾಲೆಗಳಲ್ಲಿ ಪಠ್ಯಪುಸ್ತಕವನ್ನಾಗಿ ಆಯ್ಕೆಮಾಡಲಾಗಿತ್ತು. ಆಗ್ಗೆ ಮೊರಾರ್ಜಿ ದೇಸಾಯಿ ಸರ್ಕಾರ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದಿತ್ತು. ಅಡ್ವಾನಿಯವರ ನೇತೃತ್ವದಲ್ಲಿ ಶರ್ಮರ ಪುಸ್ತಕದ ವಿರುದ್ಧ ದಾಂಧಲೆಗಳು ನಡೆದವು, ''ಪ್ರಾಚೀನ ಭಾರತ'' ಪುಸ್ತಕದ ಪ್ರತಿಗಳನ್ನಲ್ಲದೆ ಶರ್ಮರ ಬೇರೆ ಕೆಲವು ಮಹತ್ವದ ಗ್ರಂಥಗಳಿಗೂ ಬೆಂಕಿ ಹಚ್ಚಲಾಯಿತು. ಶರ್ಮರು ದೆಹಲಿ ವಿಶ್ವವಿದ್ಯಾನಿಲಯದ ಇತಿಹಾಸ ವಿಭಾಗದ ಮುಖ್ಯಸ್ಥರಾಗಿದ್ದರು. ಅಡ್ವಾನಿ ವಿದ್ಯಾರ್ಥಿ ಸೇನೆಯು ವಿಭಾಗಕ್ಕೆ ಧಾಳಿಯಿಟ್ಟು ಬೇಕಾದಷ್ಟು ಧ್ವಂಸಕಾರ್ಯ ನಡೆಸಿತು. ಇತಿಹಾಸ ತಜ್ಞರು ಕೆಲವರು ''ಪ್ರಾಚೀನ ಭಾರತ'' ಕೃತಿಯ ಬಗ್ಗೆ ಎತ್ತಿದ್ದ ಆಕ್ಷೇಪಗಳನ್ನು ಗಣನೆಗೆ ತೆಗೆದುಕೊಂಡು ಶರ್ಮರು ''ಪ್ರಾಚೀನ ಭಾರತ ಕೃತಿಯ ಸಮರ್ಥನೆ'' ಎಂಬ ಕಿರುಹೊತ್ತಿಗೆಯನ್ನು ಹೊರತಂದಿದ್ದರು. ಅಡ್ವಾನಿಯವರಿಗೆ ಚರ್ಚೆ ಬೇಕಿರಲಿಲ್ಲ, ಅವರದ್ದು ಒಂದೇ ಪಟ್ಟು, ಪುಸ್ತಕವನ್ನು ಪಠ್ಯದಲ್ಲಿ ಸೇರಿಸಕೂಡದು, ಎಂದು. ಆ ಕ್ಷಣಕ್ಕೆ ಗೆದ್ದಿದ್ದು ಅವರೇ, ಆದರೆ ಶರ್ಮರ ಪುಸ್ತಕದ ಮೌಲಿಕತೆ ಚಿರಂತನವಾಗಿ ಉಳಿದಿದೆ. ಇದೇ ಅಡ್ವಾನಿ ಬಣದ ವಿದ್ವಾಂಸರು ನಂತರದ ಕಾಲದಲ್ಲಿ ಆರ್ಯರು ಭಾರತದ ಮೂಲನಿವಾಸಿಗಳೆಂಬ ಪ್ರತೀತಿಗೆ ಪ್ರಚಾರ ಕೊಟ್ಟರು. ಅವರ ಪ್ರಕಾರ ಸಿಂಧು ನಾಗರಿಕತೆಯ ಮತ್ತು ವೇದಗಳ ಕರ್ತೃಗಳು ಒಬ್ಬರೇ. ಇದು ಸರ್ವಥಾ ಅನಂಗೀಕಾರಾರ್ಹವಾದುದು. ಆದರೆ ಹಾಗೆಂದರೆ ಅಡ್ವಾನಿ ವಿದ್ವಾಂಸರು ಸಿಟ್ಟಿಗೇಳುತ್ತಾರೆ. ಅವರಲ್ಲಿ ಕೆಲವರು ಎಂತಹ ಚಾಣಾಕ್ಷ ಪಂಡಿತರಿದ್ದಾರೆಂದರೆ ಅಗತ್ಯಕ್ಕೆ ತಕ್ಕ ಹಾಗೆ ದಾಖಲೆಗಳನ್ನು ಸಹ ನಿರ್ಮಿಸಿಬಿಡುತ್ತಾರೆ. ಉದಾಹರಣೆಗೆ, ಋಗ್ವೇದದಲ್ಲಿ ಕುದುರೆಗಳ ಪ್ರಸ್ತಾಪ ಬೇಕಾದಷ್ಟಿದೆ. ಕುದುರೆ ಮಾಂಸ ಬೇಯಿಸುವಾಗಿನ ಘಮಘಮ ಪರಿಮಳವು ಎಷ್ಟು ಆಕರ್ಷಣೀಯವೆಂಬುದು ಒಂದು ಇಡೀ ಸೂಕ್ತದ ವಿಷಯ. ಆದರೆ ಸಿಂಧು ನಾಗರಿಕತೆಗೆ ಕುದುರೆ ಪರಿಚಯವಿಲ್ಲ, ಉತ್ಖನನಗಳಲ್ಲಿ ಎಲ್ಲೂ ಕುದುರೆಯ ಮೂಳೆ ದೊರೆತಿಲ್ಲ, ಮೊಹರುಗಳಲ್ಲೆಲ್ಲೂ ಕುದುರೆಯ ಚಿಹ್ನೆಯಿಲ್ಲ, ಆದ್ದರಿಂದ ವೇದದ ಕರ್ತೃಗಳು ಬೇರೆ, ಸಿಂಧು ನಾಗರಿಕತೆ ಬೇರೆ. ಗಣಕಶಾಸ್ತ್ರಪರಿಣತರಾದ ಎನ್. ಎಸ್. ರಾಜಾರಾಂ ಎಂಬ ವಿದ್ವಾಂಸರು ಸಿಂಧು ಮೊಹರೊಂದರಲ್ಲಿ ಕುದುರೆಯ ಅರ್ಧ ಭಾಗವಿದೆಯೆಂದು ಹೇಳಿ, ಇನ್ನರ್ಧ ಭಾಗವನ್ನು ಗಣಕಯಂತ್ರದಿಂದ ನಿರ್ಮಿಸಿ ತೋರಿಸಿದರು. ಅದೆಷ್ಟು ನಗೆಪಾಟಲಿಗೆ ಈಡಾಯಿತೆಂಬುದು ಇಲ್ಲಿ ಅಪ್ರಸ್ತುತ. ಪಾಂಡಿತ್ಯವನ್ನು ಸಮಕಾಲೀನ ಕೋಮು ರಾಜಕೀಯಕ್ಕೆ ಒತ್ತೆಯಿಟ್ಟು ಕೆಲಸ ಮಾಡುವ ವಿಧಾನಕ್ಕೆ ನಮ್ಮಲ್ಲಿ ಕೊರತೆಯಿಲ್ಲ, ಇತಿಹಾಸಕಾರರಲ್ಲಿ ಇದು ವಿಶೇಷ. ಆದರೆ ಉತ್ಖನನದಲ್ಲಿ ದೊರೆತಿರುವ ಮಡಕೆಗಳು, ಅವುಗಳ ಬಣ್ಣ, ಚಿತ್ತಾರ, ಮುಂತಾದುವನ್ನಾಧರಿಸಿ ಆರ್. ಎಸ್. ಶರ್ಮ ಪ್ರಾಚೀನ ಭಾರತದ ಇತಿಹಾಸದ ವಿವಿಧ ಮಜಲುಗಳನ್ನು ನಿರ್ದಿಷ್ಟವಾಗಿ ಗುರುತಿಸಿದರು. ''ಆರ್ಯರಿಗಾಗಿ ಹುಡುಕಾಟ'' ಎಂಬ ಅವರ ಚಿಕ್ಕ ಗ್ರಂಥ ಈ ದೃಷ್ಟಿಯಿಂದ ಪ್ರಮುಖವಾದುದು. ನಮ್ಮ ಇಂದಿನ ರಾಜಕೀಯ ಸನ್ನಿವೇಶದಲ್ಲಿ ಎಷ್ಟೋ ವಿಷಯಗಳು ಅನವಶ್ಯಕವಾಗಿ ಮುಖ್ಯವಾಗಿಬಿಡುತ್ತಿವೆ. ಯಾರು ಯಾವ ಆಹಾರ ತಿನ್ನಬೇಕು, ಯಾರು ಯಾವ ಗೋತ್ರದವರು, ಯಾವ ಧರ್ಮೀಯರೊಡನೆ ಯಾರು ಮಾತನಾಡಬಾರದು, ಮುಂತಾದ ವಿಷಯಗಳು ಪರಿಸ್ಥಿತಿಯನ್ನು ಬಿಗಡಾಯಿಸುವಂತೆ ಮಾಡುತ್ತವೆ. ಇಂತಹ ಸಂಗತಿಗಳಿಗೆಲ್ಲಾ ಚಾರಿತ್ರಿಕ ದಾಖಲೆಗಳ ಸಮೇತ ವಾದ ಮಂಡಿಸುವುದು ಆರ್. ಎಸ್. ಶರ್ಮರ ವೈಶಿಷ್ಟ್ಯ. ಭಾರತದಲ್ಲಿ ಯಾವ ಬದಲಾವಣೆಯೂ ಹೋರಾಟಗಳಿಲ್ಲದೆ ಘಟಿಸಿಲ್ಲ; ಉದಾಹರಣೆಗೆ, ಶೂದ್ರರ ಸ್ಥಾನ ಕ್ರಿ.ಪೂ. ಮೂರನೆಯ ಶತಮಾನದಲ್ಲಿ ಅತಿಕೀಳಾಗಿದ್ದುದು ಕ್ರಿ.ಶ. ಮೂರನೆಯ ಶತಮಾನದ ವೇಳೆಗೆ ಸ್ವಲ್ಪ ಸುಧಾರಿಸಿತ್ತು. ಅದು ಆಳುವ ವರ್ಗದ ದೇಣಿಗೆಯೇನೂ ಅಲ್ಲ, ಸ್ವತಃ ಶೂದ್ರರೇ

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೩ ಸಂಚಿಕೆ - ೩ ಅಕ್ಟೋಬರ್ ೨೦೧೧

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@gmail.com
hosathu@gmail.com
URL : www.navakarnataka.com
http://navakarnataka.blogspot.com
http://hosathu.blogspot.com


## ಸಂಪಾದಕೀಯ

# ಭಂಡ ಸರ್ಕಾರ – ಭಂಡ ಹೋರಾಟ

ನಮ್ಮ ದೇಶದಲ್ಲಿರುವ ಭ್ರಷ್ಟಾಚಾರ ಇಂದು ನಿನ್ನೆಯದಲ್ಲ. ಇದಕ್ಕೂ ಒಂದು ದೀರ್ಘ ಚರಿತ್ರೆಯಿದೆ. ಭಯಂಕರ ಸಾಂಕ್ರಾಮಿಕ ರೋಗದಂತೆ ದೇಶ ದೇಶಗಳಿಗೆ ಹಬ್ಬಿ ಕಾಡುತ್ತಿದೆ. ಈ ಪಿಡುಗಿನ ನಿಗ್ರಹಕ್ಕೆ ಕಾನೂನಿನ ಮದ್ದುಗಳನ್ನು ಆವಿಷ್ಕರಿಸಲಾಗಿದೆ. ಭಾರತದಲ್ಲೂ ಈ ನಿಟ್ಟಿನಲ್ಲಿ ಕಾನೂನುಗಳನ್ನು ರಚಿಸಲಾಗಿದೆ. ಉದಾಹರಣೆಗೆ: ೧೯೪೭ರ ಭ್ರಷ್ಟಾಚಾರ ತಡೆಗಟ್ಟುವ ಕಾಯ್ದೆ ಮತ್ತು ಇದು ೧೯೮೮ರಲ್ಲಿ ಹೊಸ ರೂಪ ಪಡೆದ ಕಾಯ್ದೆ. ಸಮಾಜದ ಅವಶ್ಯಕತೆಗೆ ತಕ್ಕಂತಹ ಕಾನೂನುಗಳನ್ನು ತರುವುದು ಸರ್ಕಾರದ ಒಂದು ಕರ್ತವ್ಯವಾದರೆ ಅವುಗಳನ್ನು ಅನುಷ್ಠಾನಗೊಳಿಸಿ ಆ ಕಾನೂನುಗಳ ಉದ್ದೇಶಗಳನ್ನು ಸಾಫಲ್ಯಗೊಳಿಸುವುದೂ ಕೂಡ ಅದರ ಇನ್ನೊಂದು ಜವಾಬ್ದಾರಿ. ಕಾನೂನುಗಳು ಕೇವಲ ಕಾಗದದ ಮೇಲೆ ಅಚ್ಚು ಹಾಕಿದ ಅಕ್ಷರಗಳಾಗದೆ ಅವುಗಳ ಉದ್ದೇಶ ಸಾಧನೆಯ ಆಯುಧಗಳಾಗಬೇಕು. ಹಾಗಾಗಿ ಕಾನೂನುಗಳ ಉದ್ದೇಶ ಸಾಧನೆ ಎಷ್ಟರಮಟ್ಟಿಗೆ ಆಗಿದೆ ಎಂಬುದು ಗಂಭೀರವಾಗಿ ಪರಿಗಣಿಸಬೇಕಾದ ವಿಷಯ. ಸಮರ್ಥ ಕಾನೂನುಗಳ ರಚನೆಗೆ ಮತ್ತು ಚಾಲನೆಗೆ ಸಮರ್ಥ ಸರ್ಕಾರ ಬೇಕು. ಇಲ್ಲದಿದ್ದಲ್ಲಿ ಕಾನೂನುಗಳು ಎಷ್ಟೇ ಸಮರ್ಥವಾಗಿದ್ದರೂ ನಿಷ್ಕ್ರಿಯವಾಗುತ್ತವೆ. ಭಾರತದ ದುರಂತ ಇದೇ. ಸಮರ್ಥ ಸರ್ಕಾರ ಮತ್ತು ಸಮರ್ಥ ಕಾನೂನಿನ ಅಭಾವವೇ ಅಣ್ಣಾ ಹಜಾರೆಯವರ ಹೋರಾಟಕ್ಕೆ ವಿಷಯ ವಸ್ತುವಾದದ್ದು. ಈ ಕಾರಣದಿಂದಲೇ ಲೋಕಪಾಲ ಇಂದು ತೀವ್ರ ಚರ್ಚೆಗೊಳಗಾಗಿರುವ ವಿಷಯ. ೧೯೬೨ರಲ್ಲಿ ಕೇಂದ್ರ ಸರ್ಕಾರ ಮೊರಾರ್ಜಿ ದೇಸಾಯಿಯವರ ಅಧ್ಯಕ್ಷತೆಯಲ್ಲಿ ರಚಿಸಿದ ಆಡಳಿತ ಸುಧಾರಣಾ ಆಯೋಗ ಕೇಂದ್ರಮಟ್ಟದಲ್ಲಿ ಲೋಕಪಾಲ ಮತ್ತು ರಾಜ್ಯಮಟ್ಟದಲ್ಲಿ ಲೋಕಾಯುಕ್ತ ಸಂಸ್ಥೆಗಳನ್ನು ಸ್ಥಾಪಿಸಬೇಕೆಂದು ಶಿಫಾರಸ್ಸು ನೀಡಿತ್ತು. ಈ ಹಿನ್ನೆಲೆಯಲ್ಲಿ ೧೯೬೮ರಲ್ಲಿ ಕೇಂದ್ರ ಸರ್ಕಾರ ಲೋಕಪಾಲ ಮತ್ತು ಲೋಕಾಯುಕ್ತ ಮಸೂದೆಯನ್ನು ಮಂಡಿಸಿತ್ತು. ಆದರೆ ಅನೇಕ ರಾಜ್ಯಗಳಿಂದ ಬಂದ ತಕರಾರಿನ ಹಿನ್ನೆಲೆಯಲ್ಲಿ ಆ ಮಸೂದೆಗೆ ಚಾಲನೆ ಸಿಕ್ಕಲಿಲ್ಲ. ಸರ್ವೋಚ್ಚ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಮೂರ್ತಿ ಎಂ. ಎನ್. ವೆಂಕಟಾಚಲಯ್ಯ ಅವರ ನೇತೃತ್ವದಲ್ಲಿ ರಚಿತವಾಗಿದ್ದ ಸಂವಿಧಾನ ಕಾರ್ಯಾಚರಣೆಯ ಪುನರ್ ವಿಮರ್ಶನಾ ಸಮಿತಿ ಕೂಡ ತನ್ನ ೨೦೦೨ರ ವರದಿಯಲ್ಲಿ ಲೋಕಪಾಲ ಸ್ಥಾಪನೆಗೆ ಅಗತ್ಯವಾದ ಸಂವಿಧಾನ ತಿದ್ದುಪಡಿಯ ಬಗ್ಗೆ ಸಲಹೆ ನೀಡಿತ್ತು. ಹೀಗಿದ್ದೂ ಕೂಡ ಲೋಕಪಾಲ ಕಾನೂನಾಗದಿದ್ದುದಕ್ಕೆ ಆಳುವ ವರ್ಗದ ಇಚ್ಛಾಶಕ್ತಿಯ ಕೊರತೆಯೇ ಕಾರಣವೆಂಬುದರಲ್ಲಿ ಸಂಶಯವಿಲ್ಲ. ಇತ್ತೀಚಿನ ಭಾರಿ ಪ್ರಮಾಣದ ಅನೇಕಾನೇಕ ಹಗರಣಗಳು ಬೆಳಕಿಗೆ ಬರುತ್ತಿದ್ದಂತೆಯೆ ಜನತೆಯ ಆಕ್ರೋಶ ತೀವ್ರವಾದದ್ದು ನೈಜವೇ. ಆದರೆ ಲೋಕಪಾಲ ಎಂಬ ಕಾನೂನು ಈ ಎಲ್ಲ ಭ್ರಷ್ಟಾಚಾರಗಳ ನಿಗ್ರಹಕ್ಕೆ ರಾಮಬಾಣವೆಂಬ ಪ್ರಚಾರ ಮಾತ್ರ ಕೃತಕ. ಯಾವ ಕಾನೂನನ್ನಾದರೂ ನಿಷ್ಕ್ರಿಯವನ್ನಾಗಿಸುವ ರಾಜಕೀಯ ವ್ಯವಸ್ಥೆಯಲ್ಲಿ ಲೋಕಪಾಲದ ಗತಿಯೂ ಅದೇ. ಅಂದರೆ ಲೋಕಪಾಲ ಬೇಡವೆಂಬ ಸಿನಿಕತನವಲ್ಲ. ಲೋಕಪಾಲದ ಉದ್ದೇಶಗಳನ್ನು ಸಾಕಾರಗೊಳಿಸುವ ರಾಜಕೀಯ ವ್ಯವಸ್ಥೆಯ ಪರಿಕಲ್ಪನೆಯೂ ಹೋರಾಟದ ಪ್ರಮುಖ ಗುರಿಯಾಗಬೇಕೆಂಬ ಆಗ್ರಹ ಮಾತ್ರ.

ಅಣ್ಣಾ ಹಜಾರೆ ಈಗ ಭಾರತದಲ್ಲಿ ಚಿರಪರಿಚಿತ ವ್ಯಕ್ತಿ. ಇವರು ಎರಡು ಬಾರಿ ಕೈಗೊಂಡ ಉಪವಾಸ, ತಮ್ಮನ್ನು ಮತ್ತು ತಮ್ಮ ತಂಡದ ಇತರರನ್ನು ನಾಗರಿಕ ಸಮಾಜದ ಪ್ರತಿನಿಧಿಗಳೆಂದು ಮತ್ತು ತಾವೇ ನಿಜವಾದ ಪ್ರತಿನಿಧಿಗಳೆಂದು ಕರೆದುಕೊಂಡದ್ದು, ತಾವು ರಚಿಸಿದ ಜನಲೋಕಪಾಲ ಮಸೂದೆಯನ್ನು ತಾವು ನಿಗದಿಪಡಿಸಿದ ಗಡುವಿನೊಳಗೇ ಪಾರ್ಲಿಮೆಂಟ್ ಅದನ್ನು ಶಾಸನಗೊಳಿಸಬೇಕೆಂಬ ಬೇಡಿಕೆ, ಮಾಧ್ಯಮದವರು ವೈಭವೀಕರಿಸಿ ಅವರನ್ನು ಕ್ರಾಂತಿಪುರುಷನೆಂದು ಬಣ್ಣಿಸಿ, ಅವರ ಹೋರಾಟವನ್ನು ಎರಡನೇ ಸ್ವಾತಂತ್ರ್ಯ ಸಂಗ್ರಾಮವೆಂದು ಕರೆದದ್ದು, ಅಣ್ಣಾ ಹಜಾರೆಯೆ ಇಂಡಿಯಾ, ಇಂಡಿಯಾನೆ ಅಣ್ಣಾ ಎಂದು ಘೋಷಿಸಿದ್ದು ಇತ್ಯಾದಿ ಬೆಳವಣಿಗೆಗಳು ಅನೇಕ ಪ್ರಶ್ನೆಗಳಿಗೆ ಮತ್ತು ಆತಂಕಗಳಿಗೆ ಎಡೆಮಾಡಿಕೊಟ್ಟಿದೆ. ಈ ನಾಗರಿಕ ಸಮಾಜ ಎಂದರೆ ಯಾರು, ಇವರಿಗೆ ಜನ ಪ್ರತಿನಿಧಿತ್ವ ಕೊಟ್ಟವರು ಯಾರು, ಜನಲೋಕಪಾಲ ಮಸೂದೆಯೇ ಕಾನೂನಾಗಬೇಕೆಂಬ ಹಠ ಪ್ರಜಾಪ್ರಭುತ್ವದ ರೀತಿಯೆ, ಇವರ ಆಗ್ರಹಕ್ಕೆ ಬೇರೆ ಮಾರ್ಗಗಳಿರಲಿಲ್ಲವೆ, ಇವರ ಚಳುವಳಿಯೇಕೆ ನಗರಗಳಿಗೆ ಸೀಮಿತವಾಗಿತ್ತು ಇತ್ಯಾದಿ ಸೂಕ್ಷ್ಮವಾಗಿ ವಿಶ್ಲೇಷಿಸಿದಲ್ಲಿ ಈ ಎಲ್ಲ ಬೆಳವಣಿಗೆಯ ಗರ್ಭದಲ್ಲೇ ಪ್ರಜಾತಂತ್ರಕ್ಕೆ ವಿರೋಧವಾದ ಅತಿಮಾನುಷ ಶಕ್ತಿ ಕಲ್ಪನೆಯ ಭ್ರೂಣ ಅಡಗಿರುವುದು ಗೋಚರವಾಗುತ್ತದೆ. ಅಣ್ಣಾ ಹಜಾರೆ ಮತ್ತು ಅವರ ತಂಡದವರ ''ಜನ ಲೋಕಪಾಲ'' ಕೂಡ ಅತಿಮಾನುಷ ಶಕ್ತಿ ಹೊಂದಿರಬೇಕೆಂಬ ಬಯಕೆ ಆಕಸ್ಮಿಕವೇನಲ್ಲ.

ಭ್ರಷ್ಟಾಚಾರ ಸಮಾಜದ ಅನಿಷ್ಟ. ಆದ ಕಾರಣ ಇದರ ನಿಗ್ರಹವೂ ಜಟಿಲ. ನಮ್ಮ ಸಮಾಜದಲ್ಲಿ ಬೇರೂರಿರುವ ಭ್ರಷ್ಟಾಚಾರ ಲೋಕಪಾಲ ಅಥವಾ ಜನ ಲೋಕಪಾಲ ಬಂದನಂತರ ಮಾಯವಾಗುವಂತಹದಲ್ಲ. ಇದರ ನಿಗ್ರಹ ಸಮಗ್ರ ಮತ್ತು ನಿರಂತರ ಹೋರಾಟಗಳಿಂದ ಮಾತ್ರ ಸಾಧ್ಯ. ಅರ್ಜುನ್ ಸೇನ್‌ಗುಪ್ತರ ವರದಿಯ ಪ್ರಕಾರ ಈ ದೇಶದಲ್ಲಿ ದಿನಕ್ಕೆ ಇಪ್ಪತ್ತು ರೂಪಾಯಿಯಲ್ಲಿ ಜೀವನ ಸಾಗಿಸುವವರ ಸಂಖ್ಯೆ ೭೫ ಕೋಟಿ. ಈ ಜನಸಾಮಾನ್ಯರ ಸಮಸ್ಯೆಗಳೆಂದರೆ ಬಡತನ, ರೋಗ, ನಿರುದ್ಯೋಗ, ವಸತಿ ಹೀನತೆ ಇತ್ಯಾದಿ. ಬಂಡವಾಳಶಾಹಿ ಜಾಗತೀಕರಣದ ನಂತರ ಇವರ ಸಮಸ್ಯೆಗಳು ಉಲ್ಬಣಗೊಂಡಿವೆ. ಭ್ರಷ್ಟಾಚಾರದ ಮಟ್ಟವೂ ಏರಿದೆ. ಅಂದರೆ ಸಮಾಜದಲ್ಲಿರುವ ಆರ್ಥಿಕ ವ್ಯವಸ್ಥೆಗೂ ಮತ್ತು ಭ್ರಷ್ಟಾಚಾರಕ್ಕೂ ನೇರ ಸಂಬಂಧವಿದೆ. ಜಾಗತೀಕರಣದ ನಂತರ ನಮ್ಮ ದೇಶದಲ್ಲಿರುವ ಕಾರುಗಳ ಸಂಖ್ಯೆ, ಮೊಬೈಲ್ ಫೋನ್‌ಗಳ ಸಂಖ್ಯೆ, ಪಂಚತಾರಾ ಹೋಟೆಲ್‌ಗಳ ಸಂಖ್ಯೆ ಸಮಾಜದ ಸರ್ವತೋಮುಖ ಬೆಳವಣಿಗೆಯ ಮಾಪನವಲ್ಲ. ಮನುಷ್ಯ ಎಲ್ಲ ಬೆಳವಣಿಗೆಯ ಕೇಂದ್ರಬಿಂದುವಾಗಬೇಕು. ಸಮಗ್ರ ಹೋರಾಟದಿಂದ ಮಾತ್ರ ಇದು ಸಾಧ್ಯವಾದೀತು.

# ಮಾರುಕಟ್ಟೆ ಸಂಸ್ಕೃತಿಗೆ ಬಲಿಯಾದ ಮಹಿಳೆಯರು

ಇತ್ತೀಚೆಗೆ ಮಾಧ್ಯಮದಲ್ಲಿ ಸುದ್ದಿಗೆ ಗ್ರಾಸವಾಗಿರುವ 'ದರ್ಶನ್ ಪ್ರಕರಣ'ವು ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣಿನ ಬದುಕನ್ನು ಬಿಕರಿಗೆ ಇಟ್ಟಿರುವ ಮಾರುಕಟ್ಟೆ ಸಂಸ್ಕೃತಿಯ ದರ್ಶನವನ್ನು ಬಿಂಬಿಸುತ್ತದೆ. ಕೌಟುಂಬಿಕ ದೌರ್ಜನ್ಯ ಮಸೂದೆ - ೨೦೦೫ ಜಾರಿಯಾಗಿ ಐದಾರು ವರ್ಷಗಳಾಗಿದ್ದರೂ, ಅದರ ಮೂಲಸತ್ವಕ್ಕೆ ಅಪಚಾರ ಮಾಡುವ ರೀತಿಯಲ್ಲಿ ಈ ಪ್ರಕರಣದಲ್ಲಿ ಸೂಕ್ತ ಸಾಕ್ಷಿ, ದಾಖಲೆಗಳಿದ್ದರೂ ಹೆಣ್ಣಿನ ಸದ್ದು ಅಡಗಿಸುವ ಪ್ರಯತ್ನಗಳು ಅಬ್ಬರದಿಂದ ನಡೆಯುತ್ತಿವೆ. ಈ ಒಟ್ಟು ಪ್ರಕರಣದ ಹಿಂದೆ ಮಾರುಕಟ್ಟೆ ಸಂಸ್ಕೃತಿಯ ಹಣದ ಲೆಕ್ಕಾಚಾರ ಇದೆ; ಹಣ ಹೂಡಿದವರ ಭವಿಷ್ಯವಿದೆ. ಬೆಳ್ಳಿ ಪರದೆಯ ಭ್ರಾಮಕ ಲೋಕದ ಚುಂಬಕಶಕ್ತಿಯಲ್ಲಿ ಚಿತ್ರತಾರೆಯರ ಅಭಿಮಾನಿಗಳ ಲೋಕದಲ್ಲಿ ವಿವೇಕ, ಮನುಷ್ಯತ್ವ ಎಲ್ಲವೂ ರಾಡಿಯಾಗಿ ದುಡ್ಡಿನ ವ್ಯವಹಾರವೊಂದೇ ಅಂತಿಮ ಸತ್ಯವಾಗಿ ನಿಂತುಬಿಟ್ಟಿದೆ. ಈ ಹಣದ ಜಗತ್ತಿನೊಂದಿಗೆ ಪುರುಷ ಪ್ರಾಧಾನ್ಯದ ನೈತಿಕ ಪೊಲೀಸ್‌ಗಿರಿಯೂ ಸೇರಿಕೊಂಡು ಹೆಣ್ಣಿನ ನೋವು 'ಸಹಜ, ಸ್ವಾಭಾವಿಕ' ಎನಿಸಿಬಿಟ್ಟಿದೆ. ಎಲ್ಲಕ್ಕಿಂತ ಹೆಚ್ಚಾಗಿ ನಾಗರಿಕ ಸಮಾಜದ ಎಲ್ಲ ಸೂತ್ರಗಳನ್ನೂ ಕೊಂಡುಕೊಳ್ಳಬಲ್ಲ ಅಹಂಕಾರದ ಮದ ಈ ಪ್ರಕರಣದಲ್ಲಿ ಎದ್ದು ಕಾಣಿಸುತ್ತಿದೆ. ಇದು ಕೇವಲ ದರ್ಶನ್ ಪ್ರಕರಣ ಮಾತ್ರವಲ್ಲ, ಇಂತಹ ಬೇರಾವುದೇ ನಟನ ಪ್ರಕರಣಕ್ಕಾದರೂ ಅನ್ವಯಿಸಬಹುದಾದ ಮಾತು. ಇದೇ ಹೀಗಾದರೆ, ಮನೆಯ ನಾಲ್ಕು ಗೋಡೆಯೊಳಗೆ ನಡೆಯುವ ಸಾಮಾನ್ಯ ಮಹಿಳೆಯ ಮೇಲಾಗುವ ಕೌಟುಂಬಿಕ ದೌರ್ಜನ್ಯದ ಪಾಡೇನು ?

'ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಬರೆ ಹಾಕಿದರು' ಎಂಬ ಗಾದೆ ಮಾತು, ಈ ಸಂದರ್ಭಕ್ಕೆ ಲಾಯಕ್ಕಾಗಿ ಅನ್ವಯಿಸುವಂತಹುದು. ಗಂಡ ಹೆಂಡಿರ ಮನಸ್ತಾಪಕ್ಕೆ ಗಂಡನ ವಿವಾಹೇತರ ಸಂಬಂಧವೇ ಕಾರಣವಾದರೆ ಅದನ್ನು ಪರಿಹರಿಸಿಕೊಳ್ಳಲು ಕೋರ್ಟು, ಕಚೇರಿಗಳಿವೆ. ಕಾನೂನನ್ನು ಕೈಗೆ ತೆಗೆದುಕೊಂಡ ದರ್ಶನ್‌ನ ರಾಕ್ಷಸೀ ನಡವಳಿಕೆಯನ್ನು ಖಂಡಿಸುವುದನ್ನು ಬಿಟ್ಟು, ಸಂಧಾನ ನಡೆಸಲು ಮುಂದಾದ ಚಿತ್ರದ ಕೆಲವು ಗಣ್ಯರ ಲಜ್ಜೆಗೆಟ್ಟ ನಡವಳಿಕೆಗೆ ಸಾರ್ವಜನಿಕವಾಗಿ ಧಿಕ್ಕಾರ ಹೇಳಲೇಬೇಕು. ಕೆಲವು ಮಹಿಳಾ ಅಭಿಮಾನಿಗಳು ಹಲ್ಲೆಗೊಳಗಾದ ವಿಜಯಲಕ್ಷ್ಮಿಯನ್ನು ಬೆಂಬಲಿಸುವುದನ್ನು ಬಿಟ್ಟು ದರ್ಶನ್‌ನ ಆರಾಧನೆಗೆ ನಿಂತದ್ದು, ಈ ಬೆಳ್ಳಿ ಜಗತ್ತು ಹುಟ್ಟುಹಾಕಿರುವ ಮೋಹಕ ಚುಂಬಕತೆಗೆ ಸಾಕ್ಷಿಯಾಗಿದೆ. ಇಂತಹ ಭಾವುಕ ಅಂಶಗಳ ತಳಪಾಯದ ಮೇಲೆ, ೪೦-೪೫ ಕೋಟಿಯಷ್ಟು ಬಂಡವಾಳ ಹೂಡಿರುವ ನಿರ್ಮಾಪಕರು ಹಾಗೂ ಈ ನಿರ್ಮಾಪಕರ ಕೃಪೆಯನ್ನೇ ಬಂಡವಾಳ ಮಾಡಿಕೊಂಡಿರುವ ಕಲಾವಿದರು ದರ್ಶನ್‌ನನ್ನು ಬೆಂಬಲಿಸುತ್ತಿರುವುದು ನಿಚ್ಚಳವಾಗಿ ಕಾಣುತ್ತಿದೆ. ಮಂಡ್ಯದ ಗಂಡಿಗೆ 'ಗಂಡ ಹೆಂಡತಿಯನ್ನು ಹೊಡೆಯುವುದು, ಮಗ ಅಮ್ಮನನ್ನು ಹೊಡೆಯುವುದು' ಸಂಸಾರದಲ್ಲಿನ ಸಹಜ ಸ್ಥಿತಿ ಎಂದೆನಿಸಬಹುದು ! ಈ ಗಂಡಸುತನದ ಪರಮಾವಧಿ ಒಂದು ಕಡೆಯಾದರೆ, ಈ ಪ್ರಕರಣವನ್ನು ನಿಭಾಯಿಸಲಾಗದೆ ಮೈಪರಚಿಕೊಂಡ ನಿರ್ಮಾಪಕರ ಸಂಘ ಗಂಡ ಹೆಂಡಿರ ಜಗಳಕ್ಕೆ ಕಾರಣಕರ್ತೆಯೆಂದು ನಿಖಿತಳಿಗೆ ಬಹಿಷ್ಕಾರ ಹಾಕಿದ್ದು ಕೂಡ ಅವರ ಅಸಹಾಯಕತೆಯ ಮನೋಕಲ್ಪವನ್ನು ತೋರಿಸುತ್ತದೆ. ಕೆಲವು ಮಹಿಳಾ ಸಂಘಟನೆಗಳು, ಕಲಾವಿದರು ಮತ್ತು ಪ್ರಜ್ಞಾವಂತರ ಅಭಿಪ್ರಾಯ, ಒತ್ತಡಕ್ಕೆ ಮಣಿದು ನಿಖಿತಳ ಮೇಲೆ ಹೊರಿಸಿದ್ದ ನಿಷೇಧವನ್ನು ತೆಗೆದುಹಾಕುವ ನಿರ್ಣಯವನ್ನು ನಿರ್ಮಾಪಕರ ಸಂಘ ಕೈಗೊಳ್ಳಲು ಅವರ ಮನಃಪರಿವರ್ತನೆಯೇನೂ ಕಾರಣವಲ್ಲ, ಬದಲಿಗೆ, ಮಾರುಕಟ್ಟೆಯ ವ್ಯಾಪಾರಿ ತಂತ್ರದಲ್ಲಿ 'ಸಾರ್ವಜನಿಕ ಅಭಿಪ್ರಾಯ'ಕ್ಕೆ ವಿಶೇಷ ಮನ್ನಣೆಯಿರುತ್ತದಲ್ಲವೆ ?

ಮಹಿಳಾ ಸಮುದಾಯದ ಅಸ್ತಿತ್ವಕ್ಕೆ, ಘನತೆಗೆ, ದರ್ಶನ್ ಪ್ರಕರಣ ಬಿಂಬಿಸುವ ದರ್ಶನವಂತೂ ಆತಂಕಕಾರಿಯೆಂಬುದೆಂದು ಎಲ್ಲರೂ ಒಪ್ಪಲೇಬೇಕು. ಈ ಪ್ರಕರಣದಲ್ಲಿ ಅನ್ಯಾಯಕ್ಕೊಳಗಾದ ಇಬ್ಬರು ಮಹಿಳೆಯರು ಪುರುಷ ದೌರ್ಜನ್ಯದ ಎರಡು ಮುಖಗಳಿಗೆ ಸಾಕ್ಷಿಯಾಗುತ್ತಾರೆ. ಗಂಡನಿಂದ ಸತತವಾಗಿ ನೋವುಣ್ಣುತ್ತಿದ್ದುದಲ್ಲದೆ, ಕಿವಿ ಹರಿದು, ತಲೆ ಕುಕ್ಕಿಸಿಕೊಂಡು, ಸಿಗರೇಟಿನಿಂದ ಮೈ ಸುಡಿಸಿಕೊಂಡು ಗಂಭೀರ ಆಘಾತಕ್ಕೊಳಗಾಗಿ ಆಸ್ಪತ್ರೆಯಲ್ಲಿ ಚಿಕಿತ್ಸೆಗೊಳಗಾಗುವ ಪರಿಸ್ಥಿತಿಗೆ ನೂಕಲ್ಪಟ್ಟಾಗ, ಸ್ವತಃ ಪೊಲೀಸ್ ಠಾಣೆಗೆ ಬೆಳಗಿನ ಜಾವದಲ್ಲಿ ಹೋಗಿ ಐದು ಪುಟಗಳ ದೂರನ್ನು ದಾಖಲಿಸಿದ ವಿದ್ಯಾವಂತ ಮಹಿಳೆಯಾದ ವಿಜಯಲಕ್ಷ್ಮಿಯನ್ನು ಮಣಿಸಿ ಅವರಿಂದ ಸುಳ್ಳು ಹೇಳಿಸಿ ದೂರು ಹಿಂತೆಗೆದುಕೊಳ್ಳುವಂತೆ ಮಾಡಿದ ಚಿತ್ರೋದ್ಯಮದ ಹಣಕಾಸು ಲೆಕ್ಕಾಚಾರದ ಅಗೋಚರ ಶಕ್ತಿಗೆ ದುರ್ಬಲರನ್ನು ಬಲಿಪಶುಗಳನ್ನಾಗಿಸುವ ಶಕ್ತಿಯಿದೆ. ಹಾಗೆಯೇ ವಿವಾಹದಾಚೆಗಿನ ಸಂಬಂಧ, ವ್ಯವಹಾರಗಳಿಗೆ ಉದ್ಯೋಗದ ಕ್ಷೇತ್ರದಲ್ಲಿ ಶಿಕ್ಷೆ ಅನುಭವಿಸುವಂತೆ ಒತ್ತಾಯಿಸುವ ನಿರ್ಮಾಪಕರ ಸಂಘದ ನೈತಿಕ ಗೂಂಡಾಗಿರಿಯು ಸಮಾಜದ ದ್ವಂದ್ವನೀತಿಯನ್ನೇ ಎತ್ತಿ ಹಿಡಿಯುತ್ತದೆ. ಈ ಒಟ್ಟು ಪ್ರಕರಣದಲ್ಲಿ ಮಹಾನ್ ಅಪರಾಧಿಯಾಗಿರುವ ದರ್ಶನ್‌ಗೆ ಮಾತ್ರ ಚಿತ್ರ ಜಗತ್ತು ದಂಡನೆಯ ಮಾತೆತ್ತದೆ ಹೆಂಗಸರ ವಿಷಯದಲ್ಲಿ ನಿರ್ದಯವಾಗಿ ನಡೆದುಕೊಂಡಿದೆ. ಜಾಗತೀಕರಣ ಮಹಿಳೆಗೆ ನೀಡಿರುವ ಉಡುಗೊರೆ ಇದು ಎಂದರೆ ತಪ್ಪಾಗದು.

ಗಾಯತ್ರಿ . ಎಸ್.


ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ







**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಈ ತಿಂಗಳು (೩ನೇ ಪುಟದಿಂದ)

ಹೋರಾಟಗಳಿಂದ ಪಡೆದುಕೊಂಡದ್ದು. ಇಂತಹ ಅನೇಕ ಪ್ರಮೇಯಗಳನ್ನು ಸಾಧಿಸಿ ತೋರಿಸಿದ ಅಪೂರ್ವ ಇತಿಹಾಸಕಾರರು ಡಾ|| ಆರ್. ಎಸ್. ಶರ್ಮ. ದುಡಿಯುವ ಜನತೆಯ ಬಿಡುಗಡೆಯ ಹಾದಿಯಲ್ಲಿ ಪ್ರಬಲವಾದ ಅಸ್ತ್ರಗಳ ಪೂರೈಕೆಯನ್ನವರು ಮಾಡಿದ್ದಾರೆ. ಅವಿಸ್ಮರಣೀಯರಾದ ಶರ್ಮರನ್ನು 'ಹೊಸತು' ಆದರದಿಂದ ನೆನೆಯುತ್ತದೆ, ವಿನಯಪೂರ್ವಕ ಅವರಿಗೆ ನಮನ ಸಲ್ಲಿಸುತ್ತದೆ.

* * *

ಬಿಡಿಎ ಇರಲಿ, ಬಡಾವಣೆ ಮಾಡುವ ಸಹಕಾರಿ ಸಂಘಗಳಾಗಲಿ, ಅಂಥ ಇನ್ನಿತರ ಸಾರ್ವಜನಿಕ ಸಂಸ್ಥೆಗಳಾಗಲಿ ನಿವೇಶನ/ಮನೆ ನೀಡುವಾಗ, 'ನನಗೆ ಮತ್ತು ನನ್ನ ಸಮೀಪ ಕುಟುಂಬದ ಸದಸ್ಯರಿಗೆ ಸ್ವಂತ ಮನೆ/ನಿವೇಶನ ಇಲ್ಲ' ಎಂದು ಪ್ರಮಾಣ ಪತ್ರ ನೀಡಬೇಕು. ನಮ್ಮ ಸ್ವಂತ ಸಂಪಾದನೆಯಿಂದ, ಮಾರುಕಟ್ಟೆಯಲ್ಲೇ ಖರೀದಿ ಮಾಡಿದ್ದರೂ, ಈ ನಿಯಮ ಸಲ್ಲುತ್ತದೆ. ಅದರ ಸಾಮಾಜಿಕ ಉದ್ದೇಶ ಸ್ಪಷ್ಟ. ಒಂದು ಸಂಸಾರಕ್ಕೆ ಒಂದು ಮನೆ, ಒಂದೇ ಮನೆ ಅಷ್ಟೆ. ಕಾರಣ ನಮ್ಮಲ್ಲಿ ಎಲ್ಲರಿಗೂ ಬೇಕಾದಷ್ಟು ನಿವೇಶನ ಇಲ್ಲ ಆದರೂ ಅಂಥ ಪ್ರಮಾಣಪತ್ರ ನೀಡಿಯೂ, ಈ ನಾಡಿನ ಶ್ರೀಮಂತರು, ಹಣ ಉಳ್ಳವರು ತಮ್ಮ ಅಗತ್ಯಕ್ಕೆ ಮೀರಿ ನಿವೇಶನಗಳನ್ನು ಪಡೆದಿದ್ದಾರೆ. ಅವರಿಗೆ ಅದು ಬಂಡವಾಳ ಹೂಡಿಕೆ. ಈ ಕ್ಷೇತ್ರದಲ್ಲಿ ಬೆಲೆ ಯಾವಾಗಲೂ ಏರುತ್ತಲೇ ಇದೆ. ಚಿನ್ನಕ್ಕಿಂತ ಉತ್ತಮ ಹೂಡಿಕೆ. ಸಾರ್ವಜನಿಕವಾಗಿ ನೀಡುವ ನಿವೇಶನಗಳನ್ನು ಕೆಲವರೆ ಪಡೆಯುವುದು ಹೇಗೆ ಸಾಧ್ಯವಾಯ್ತು? ಒಮ್ಮೆ ಪಡೆದವನು ಪುನಃ ಪುನಃ ಪಡೆಯುವುದು ಹೇಗೆ ಸಾಧ್ಯವಾಯ್ತು? ಮುಖ್ಯಮಂತ್ರಿ ತನ್ನ ವಿವೇಚನೆಯಲ್ಲಿ ಪತ್ರಕರ್ತರಿಗೆ, ಇತರ ಪ್ರಭಾವಿಗಳಿಗೆ ನಿವೇಶನ ನೀಡುವಾಗ ಅವರಿಗೆ ಈಗಾಗಲೆ ಮನೆ ಇದೆಯಾ ಅಂತ ಏಕೆ ಪರೀಕ್ಷಿಸುವುದಿಲ್ಲ? ಅವರು ನೀಡುವ ಸುಳ್ಳು ಪ್ರಮಾಣ ಪತ್ರಗಳನ್ನು ಒಂದಿಷ್ಟೂ ತಪಾಸಣೆ ನಡೆಸದೆ ಹೋಗುವುದರಿಂದ ಇಂದು ಮಾಹಿತಿ ತಂತ್ರಜ್ಞಾನದ ಅನುಕೂಲದಿಂದಾಗಿ ಎಲ್ಲರ ಸ್ಥಿರಾಸ್ತಿಗಳ ವಿವರವನ್ನು ಪತ್ತೆ ಮಾಡುವುದು ತುಂಬ ಸುಲಭ. ಬಿಡಿಎ ಕಛೇರಿಯಲ್ಲಿ ಸಿಕ್ಕಿಬಿದ್ದ ಸಾಧಾರಣ ವ್ಯಕ್ತಿಯೊಬ್ಬನನ್ನು ಶಿಕ್ಷಿಸುವುದಾಗಿ ಬೆದರಿಸಲಾಯ್ತು. ಅವನು ನಿಮ್ಮ ಸದಾಶಿವನಗರದವರ ಪ್ರಸಂಗಗಳನ್ನು ನಾನು ತೋರಿಸಿಕೊಡುತ್ತೇನೆ, ಅವರ ವಿರುದ್ಧವೂ ಕ್ರಮ ಕೈಗೊಳ್ಳುವಿರಾ ಎಂದು ಹೆದರಿಸಿದ. ಅವನ ಪ್ರಮಾಣ ಪತ್ರ ತನಿಖೆ ಆಗಲಿಲ್ಲ. ಬಹುಶಃ ಅವನು ಕೈ ಬೆಚ್ಚಗೆ ಮಾಡಿ ತನ್ನ ಹೆಚ್ಚುವರಿ ನಿವೇಶನವನ್ನು ದಕ್ಕಿಸಿಕೊಂಡ. ನ್ಯಾಯಮೂರ್ತಿ ಶ್ರೀ ಶಿವರಾಜ ಪಾಟೀಲರ ಪ್ರಸಂಗದಲ್ಲಿ ಈ ವಿಷಯ ಹೇಳಬೇಕಾಯ್ತು. ಅವ್ಯವಹಾರಕ್ಕೆ ಹೆಸರಾದ ಸಹಕಾರ ಸಂಘಗಳು ತಮ್ಮ ದಂಧೆ ನಡೆಸುವುದೂ ಇದರಿಂದಲೇ ಸಾಧ್ಯ. ಹಾಗೆಯೇ ನ್ಯಾಯಮೂರ್ತಿಗಳನ್ನು ಖುದ್ದಾಗಿ ಕರೆದುಕೊಂಡು ಹೋಗಿ ಅವರ ಇಲಾಖೆಯವರಿಗೆ ಅವರು ಕೇಳಿದೆಡೆ ನಿವೇಶನದ ಅನುಕೂಲ ಮಾಡಿಕೊಟ್ಟ ಮುಖ್ಯಮಂತ್ರಿಗಳೂ ನಮ್ಮಲ್ಲಿ ಉಂಟು. ಸರ್ಕಾರಿ ನಿವೇಶನದಲ್ಲಿ ಅಡಮಾನ ಮಾಡಿಕೊಂಡು ತನ್ನ ದೊಡ್ಡ ಕಛೇರಿ ನಡೆಸುತ್ತಿದ್ದ ನಾಡಿನ ಪ್ರಸಿದ್ಧ ಆಂಗ್ಲ ಪತ್ರಿಕೆಯ ಸಂಪಾದಕ/ಮಾಲೀಕರಿಗೆ ಮುಖ್ಯಮಂತ್ರಿಗಳೇ ಅವರ ಕಛೇರಿಗೆ ಖುದ್ದು ಹೋಗಿ ಆ ನಿವೇಶನವನ್ನು ಸುಲಭ ದರದಲ್ಲಿ ಅರ್ಪಿಸಿದಾಗ ಆ ಪತ್ರಕರ್ತನಿಗೆ ಅದು ಅನೈತಿಕವೆನಿಸಲಿಲ್ಲ. ಏಂಗೆಲ್ಸ್ ''ಹೌಸಿಂಗ್ ಕ್ವೆಶ್ಚನ್'' ಎಂಬ ದೀರ್ಘ ಪ್ರಬಂಧ ಬರೆದಿದ್ದಾನೆ. ಅಲ್ಲಿ ಒಂದು ಪ್ರಶ್ನೆ: ಕ್ರಾಂತಿ ಆದಮೇಲೆ, ನಮ್ಮ ಜನತೆಗೆಲ್ಲ ಇರಲು ಮನೆ ಬೇಕಲ್ಲ ಅಷ್ಟೊಂದು ದೊಡ್ಡ ಸಂಖ್ಯೆಯಲ್ಲಿ, ಅದನ್ನು ಹೇಗೆ ನಿರ್ವಹಿಸುವುದು? ಅದಕ್ಕೆ ಅವನ ಉತ್ತರ: ಈಗಾಗಲೆ ಬಂಡವಾಳ ವ್ಯವಸ್ಥೆ ಎಲ್ಲರಿಗೂ ಆಗುವಷ್ಟು ಮನೆಗಳನ್ನು ನಿರ್ಮಿಸಿಬಿಟ್ಟಿದೆ. ಏನಿದ್ದರೂ ಅವುಗಳ ಮರುಹಂಚಿಕೆ ಅಷ್ಟೆ ಆಗಬೇಕಿರುವುದು! ಉದಾಹರಣೆಗೆ ನಮ್ಮ ರಾಜಮಹಲ್, ಸದಾಶಿವನಗರ ಮುಂತಾದ ಕಡೆ ಈಗ ವಾಸಿಸುತ್ತಿರುವ ಸಂಖ್ಯೆಯ ಹತ್ತರಷ್ಟು ಜನ ಸೌಲಭ್ಯದಿಂದ ಬಾಳಬಹುದಾದಷ್ಟು ಹೆಚ್ಚುವರಿ ಸಿದ್ಧವಾಗಿದೆ. ಮುಂಬಯಿಯ ಆದರ್ಶ ಭ್ರಷ್ಟಾಚಾರದ್ದು ಇಂಥದೆ ಕತೆ. ವರ್ಗ ಸಮಾಜ, ಶ್ರೇಣೀಕೃತ ವ್ಯವಸ್ಥೆ ಇರುವವರೆಗೆ ಸಾಕಷ್ಟು ಲಭ್ಯವಿಲ್ಲದ ಸಂಪನ್ಮೂಲಗಳ ನ್ಯಾಯಯುತ ಹಂಚಿಕೆ ಸಾಧ್ಯವಾಗುವುದಿಲ್ಲ.

* * *

ಅರ್ಥಮಂತ್ರಿ ಪ್ರಣವ್ ಮುಖರ್ಜಿ ಅಪ್ಪಣೆ ಕೊಡಿಸಿದ್ದಾರೆ. ಅವರು ಅವರ ರಾಜಕೀಯ ವೃತ್ತಿಜೀವನದಲ್ಲಿ ಶೇ. ೨೮ರಷ್ಟು ಬೆಲೆ ಏರಿಕೆಯನ್ನೂ ಕಂಡಿದ್ದಾರಂತೆ! ಆದ್ದರಿಂದ ಇಂದಿನದೇನೂ ಅಷ್ಟು ಹೆಚ್ಚಲ್ಲ, ಪೆಟ್ರೋಲ್, ಹಾಲು, ಅಡಿಗೆ ಅನಿಲ ತನ್ಮೂಲಕ ಜೀವನದ ಎಲ್ಲ ಅವಶ್ಯಕ ವಸ್ತುಗಳ ಬೆಲೆಯೂ ಇನ್ನೂ ಏರಬಹುದು. ಇದು ಶೇ. ೧೦ ಬೆಳವಣಿಗೆಯ ದರದ ಪರಿಣಾಮವೇ? ಇರಬಹುದು. ಆದರೆ ಆ ಮಾರ್ಗವನ್ನು ಕೈಬಿಡಲಾಗುವುದಿಲ್ಲ. ಇದೇ ಬೆಳವಣಿಗೆಯ ಕ್ರಮವಾಗಿ ಸಂಪತ್ತಿನ ಕೇಂದ್ರೀಕರಣವಾಗಿರುವುದೂ ಬೆಲೆ ಏರಿಕೆಯ ಸಮಸ್ಯೆಗೆ ಕಾರಣವಲ್ಲವೋ? ಆದರೆ ಅದು ಅನಿವಾರ್ಯ. ಅಭಿವೃದ್ಧಿಗೋ ನಕ್ಸಲರು ಎತ್ತಿರುವ ಸಾಮಾಜಿಕ ಸಮಸ್ಯೆಗಳ ಪರಿಹಾರ ಆದ್ಯತೆಯದಲ್ಲ. ಆದರೆ ನಕ್ಸಲ್ ಹಿಂಸೆಯನ್ನು ಭಯೋತ್ಪಾದನೆಯ ಸಮಸ್ಯೆಗಿಂತ ತುರ್ತಾಗಿ ಹತ್ತಿಕ್ಕಬೇಕು. ಕಾರಣ ಇದು ಶೇ. ೧೦ ಬೆಳವಣಿಗೆಯನ್ನು ಬಾಧಿಸುತ್ತಿದೆ. ಈ ಬೆಳವಣಿಗೆಗೆ ಅಡ್ಡಿಮಾಡುವ, ಪ್ರಶ್ನಿಸುವ ಎಲ್ಲರೂ ಭಯೋತ್ಪಾದಕರೇ, ಹಿಂಸಾವಾದಿಗಳೇ, ದೇಶವಿದ್ರೋಹಿಗಳೇ ಎಂಬೆಲ್ಲ ಬೈಗುಳಿಗೆ ಒಳಗಾಗುತ್ತಾರೆ ಇಂದು. ಯುಪಿಎ-೧, ಯುಪಿಎ-೨ಕ್ಕಿಂತ ಉತ್ತಮ ಸರ್ಕಾರವಾಗಿತ್ತಲ್ಲಾ ಎನ್ನಿ; ಇದು ಸಮ್ಮಿಶ್ರ ಸರ್ಕಾರದ ಸಮಸ್ಯೆ, ನಮ್ಮೊಂದಿಗಿರುವ ಮಿತ್ರ ಪಕ್ಷಗಳೆಲ್ಲ ಪ್ರಾದೇಶಿಕ ಪಕ್ಷಗಳು, ಅವರಿಗೆ ಅವರ ಪ್ರಾಂತ್ಯದ ಸಮಸ್ಯೆಯೇ ಆದ್ಯತೆ, ಕೇಂದ್ರದ ನಾವು ಈ ಕಾರಣ ಹೆಚ್ಚು ಜವಾಬ್ದಾರಿ ಹೊರಬೇಕಾಗಿದೆ ಎನ್ನುತ್ತಾರೆ ಪ್ರಣವ್ ದಾ! ಇವೆರಡರ ನಡುವಿನ ವ್ಯತ್ಯಾಸವನ್ನು ಚರ್ಚಿಸುವುದೂ ಇಲ್ಲ. ಅದರಲ್ಲಿ ಎಡ ಪಕ್ಷಗಳು ಒಕ್ಕೂಟವನ್ನು ಕನಿಷ್ಠ ಸಾಮಾನ್ಯ ಕಾರ್ಯಕ್ರಮಗಳಿಗೆ ಕಟ್ಟಿಹಾಕಿತ್ತು. ಇಲ್ಲಿ ಪ್ರಾಂತೀಯ ಪಕ್ಷಗಳ ಯಜಮಾನರಿಗೆ ರೈಲ್ವೆ, ಪೆಟ್ರೋಲ್, ಹಡಗು, ಟೆಲಿಕಾಂ ಹೀಗೆ ಹಣ ತುಂಬಿದ ಕ್ಷೇತ್ರಗಳ ಮಂತ್ರಿಪಟ್ಟ ನೀಡಿಬಿಟ್ಟರೆ ಸಾಕು, ಅವರು ಕೊಳ್ಳೆ ಹೊಡೆಯುತ್ತಾ ಇರಲಿ; ಆಳುವ ಕೇಂದ್ರದ ಪಕ್ಷ ದೇಶದ ಹಿತಾಸಕ್ತಿಗಳನ್ನು ವಿದೇಶೀಯರಿಗೆ ಮಾರಿದರೂ, ನಮ್ಮ ರಕ್ಷಣಾವಿನ್ಯಾಸವನ್ನು ದೊಡ್ಡಣ್ಣ ನ್ಯಾಟೋ ಒಡನೆ ಜಂಟಿಮಾಡಿಸಿದರೂ, ಲಿಬಿಯಾದ ಜನತೆಯ ಹಿತ, ಆಫ್ರಿಕದ ಪಶ್ಚಿಮ ಏಷ್ಯಾದ ಹಿತಾಸಕ್ತಿಗಳಿಗೆ ವಿರುದ್ಧವಾಗಿ ಪಶ್ಚಿಮದವರೊಡನೆ ಸೇರಿಕೊಂಡರೂ, ಮುಂತಾಗಿ ಇವೆಲ್ಲಾ ಮಾಡುತ್ತಲೂ ಇವರು ದೇಶಪ್ರೇಮಿಗಳೇ! ''ನನಗೆ ಗೊತ್ತು ಈ ದೇಶದ ಹಿತವೇನು?'' ಎನ್ನುವ ದುರಹಂಕಾರದ ಮಾತುಗಳನ್ನು ಕೇಂದ್ರದ ಹಲವರು ಪದೇ ಪದೇ ಹೇಳುವಷ್ಟು ಧೈರ್ಯ ಬಂದಿದೆ ಈ ಅಲ್ಪಮತದ ಸರ್ಕಾರಕ್ಕೆ! ಆದ್ರೆ ಪ್ರಣವ್ ದಾ ಏನ್ ಮಹಾ ಬಿಡಿ! ಮೋದಿ ಒಂದು ಇಡೀ ಸಮುದಾಯವನ್ನೇ ಕೊಲೆ ಮಾಡಿದರೂ ಪರವಾಗಿಲ್ಲ ಅಭಿವೃದ್ಧಿಗಾಗಿ ಅಂತ ಅಲ್ವೇ ಹೇಳ್ತಾ ಇರೋದು? ಆರ್ಥಿಕ ಬೆಳವಣಿಗೆ ಎಂಬ ತೇರು ಬರುತ್ತಿದೆ, ನಮಸ್ಕರಿಸಿ ದಾರಿಬಿಡಿ. ಇಲ್ಲವೇ ಹುಷಾರ್! ಅದರ ಚಕ್ರಕ್ಕೆ ಆಹುತಿಯಾದೀರಿ ಅನ್ನೋದನ್ನೇ ಎರಡೂ ಪ್ರಮುಖ ರಾಜಕೀಯ ಪಕ್ಷಗಳು, ಉದ್ಯಮಿಗಳ ಮಾಧ್ಯಮವೂ, ಅವರು ಸಾಕಿ ಸಲಹಿರುವ ಅರ್ಥಶಾಸ್ತ್ರ/ಹಣಕಾಸು ಶಾಸ್ತ್ರಗಳ ಪರಿಣತರೂ ದಿನವಿಡೀ ಮೊಳಗಿಸುತ್ತಿದ್ದಾರೆ.

* * *

ವಿದೇಶದಲ್ಲಿ ಇಟ್ಟಿರುವ ಕಪ್ಪುಹಣವನ್ನು ಹಿಂದಕ್ಕೆ ತರುವ ಪ್ರಯತ್ನಮಾಡಿ ಎಂದು ಉಚ್ಚ ನ್ಯಾಯಾಲಯ ತಾಕೀತು ಮಾಡಿದರೆ ಅದು ನ್ಯಾಯಾಂಗವು ಕಾರ್ಯಾಂಗದ ವ್ಯಾಪ್ತಿಗೆ ನುಗ್ಗಿದಂತಾಯ್ತು ಎನ್ನುತ್ತದೆ ಸರ್ಕಾರ. ದೊಡ್ಡಣ್ಣ ಸ್ವಿಸ್ ಬ್ಯಾಂಕುಗಳನ್ನು ಹೆದರಿಸಿ, ಅವನ ದೇಶದ ಕಳ್ಳ ಖಾತೆಯ ವಿವರ ಪಡೆದನಲ್ಲಾ ನೀವೇನು ಮಾಡುತ್ತೀರಿ? ನಮಗೆ ಅಮೆರಿಕಾದಷ್ಟು ಶಕ್ತಿ ಇಲ್ಲ ಅವರನ್ನು ಹೆದರಿಸಲು. ಮಾತನಾಡಿ, ಒಂದಷ್ಟು ಒಪ್ಪಂದಕ್ಕೆ ಬರುತ್ತೇವೆ ಎನ್ನುತ್ತಾರೆ ಪ್ರಣವ್ ದಾ. ದೇಶದ ಅತ್ಯುಚ್ಚ ಮಟ್ಟದ ಹತ್ತು ಜನ ಕಾರ್ಪೊರೇಟ್ ಸಂಸ್ಥೆಗಳ ಮಾಲಕರು ಪ್ರಣವ್ ದಾರನ್ನು ಕೆಲದಿನಗಳ ಹಿಂದೆ ಸಂಧಿಸಿದ್ದರು. ಅಲ್ಲೇನು ನಡೆಯುತ್ತದೆ ಎನ್ನುವುದು ಸುದ್ದಿ ಮಾಧ್ಯಮದ ಕೆಲಸವಲ್ಲಾ ಬಿಡಿ. ಅವರು ಪ್ರಾರ್ಥಿಸಿದರು – ಅಥವಾ ಸೂಚಿಸಿದರು ಎನ್ನಿ – ಅವರು ಆಜ್ಞೆ ಮಾಡಬೇಕಾಗಿಲ್ಲ, ರಾಜ ಪಾರೆನೋಟ ಬೀರಿದರೆ ಸಾಕು. ಎಲ್ಲ ಹೇಳಿದಂತೆ. ಈಗ ತುರ್ತಾಗಿ ಕಪ್ಪುಹಣವನ್ನು ಬಹಿರಂಗ ಪಡಿಸಲು ಬಂದು 'ಕ್ಷಮಿಸಿ, ಸರಿಪಡಿಸುವ ನೀತಿಯನ್ನು ಘೋಷಿಸಿ' ಎಂದು ಇದು ಸದ್ಯದಲ್ಲೆ ಹೊರಬರುತ್ತದೆ ಎಂದು ನಿರೀಕ್ಷಿಸಬಹುದು. ಇದೇ ಗಣ್ಯರೆ ಫೆಬ್ರವರಿ ತಿಂಗಳಲ್ಲಿ ಬಜೆಟ್ಟಿಗೆ ಮುಂಚೆ ಸಂಧಿಸಿ ಹೇಳಿದ್ದು – ''ಅವರೇನು ಮಾಡುವರೆಂದು ಅವರು ಅರಿಯರು; ತಂದೆಯೇ! ಅವರನ್ನು ಕ್ಷಮಿಸು'' ಎಂದರೆ ''ನಾವೇನು ಮಾಡೋಣ - ನಿಮ್ಮ ಆಡಳಿತ ವೈಖರಿ ಹಾಗಿದೆ. ನಾವು ಲಂಚ ನೀಡದೆ ಮಾರ್ಗವಿಲ್ಲ'' ಪ್ರಧಾನಿ ಭರವಸೆ ಇತ್ತರು ಎಲ್ಲಾ ಸರಿಹೋಗುತ್ತೆ ಅಂತ. ಈಗ ಕಪಿಲ್ ಸಿಬಲ್ ಪ್ರಯತ್ನದಿಂದಾಗಿ ಇನ್ನು ಕೆಲವೇ ದಿನಗಳಲ್ಲಿ ೨-ಜಿ ಭ್ರಷ್ಟಾಚಾರ ನಡೆಯಲೇ ಇಲ್ಲವೆಂದು ಸಾಬೀತಾದರೆ ಆಶ್ಚರ್ಯಪಡಬೇಡಿ. ಹ್ಞಾಂ! ಅವರ ಕಚೇರಿಯ ಒಂದಿಬ್ಬರು ಜವಾನರಿಗೆ ಭ್ರಷ್ಟಾಚಾರಕ್ಕಾಗಿ ಶಿಕ್ಷೆ ಆದರೂ ಆಗಬಹುದು. ಏರ್ ಇಂಡಿಯಾದಲ್ಲಿ ನಷ್ಟವೇ ಆಗಿಲ್ಲ, ಅದೆಲ್ಲಾ ವಾಣಿಜ್ಯ ವಿಚಾರ. ರಿಲೈಯನ್ಸ್ ಕಂಪನಿಯ ವಿಷಯ ಅರ್ಥಮಾಡಿಕೊಳ್ಳಬೇಕು: ಸರ್ಕಾರದ ಗ್ಯಾಸ್/

ಪೆಟ್ರೋಲ್ ನಿಕ್ಷೇಪವನ್ನು ಅವರ ಸ್ವಾಧೀನಕ್ಕೆ ನೀಡುವುದು. ಅವರು ಆ ನಿಕ್ಷೇಪ ಹೊರತೆಗೆಯಲು ೨೦೦೦ ಕೋಟಿ ವೆಚ್ಚ ಮಾಡಿದರು ಎನ್ನಿ. ಮೊದಲ ಆರು ತಿಂಗಳಲ್ಲೇ ಅವರು ಉತ್ಪನನ ಮಾಡಿದ ಗ್ಯಾಸಿನ ಬೆಲೆ ೨೧೦೦ ಕೋಟಿ ಎನ್ನಿ. ಇದು ಖಾಸಗೀ ಸಾಹಸ! ಈಗ ಈ ೨೧೦೦ ಕೋಟಿ ರೂಪಾಯಿಗೆ ಯಾವುದೇ ಟ್ಯಾಕ್ಸ್ ನೀಡಬೇಕಾಗಿಲ್ಲ, ಕಾರಣ ಅದು ಅವರು ಮಾಡಿದ ಖರ್ಚಿಗೆ ಸಮ! ಸಾರ್ವಜನಿಕ ಸರಕಾಗಿ ಅದರ ಬೆಲೆ ನಿಯಂತ್ರಣ ಮಾಡಬಹುದೆ? ಇಲ್ಲ ಅದು ಖಾಸಗಿ ಉದ್ಯಮದಲ್ಲಿ ಸರ್ಕಾರದ ಹಸ್ತಕ್ಷೇಪವಾಗುತ್ತೆ. ವಿಮಾನದ ಮಂತ್ರಿ, ಪೆಟ್ರೋಲಿಯಂ ಮಂತ್ರಿ ಕುಳಿತ ಆಸನ ಬೆಂಕಿ ಹತ್ತಿ ಶಾಖ ಹೆಚ್ಚಿ, ಒಡನೆಯೆ ಅವರು ಅದನ್ನು ಖಾಲಿಮಾಡಿ ಮತ್ತೊಂದು ಶಾಖೆಗೆ ವರ್ಗ ಮಾಡಿಸಿಕೊಳ್ಳುತ್ತಾರೆ! ಇದಾವುದೂ ಭ್ರಷ್ಟಚಾರವಲ್ಲ! ಪಾಪ! ಅಣ್ಣಾ! ಇಂತಹ ಹಜಾರೋಂ ಸಂಖ್ಯೆಯ ಭ್ರಷ್ಟಾಚಾರಕ್ಕೆ ಅವರು ಏನುತಾನೆ ಮಾಡಿಯಾರು! ಹೌದು ಆರ್‌ಟಿಓ ಕಛೇರಿ ಸಾಧಾರಣ ಜನರಿಂದ ಲಂಚ ಪಡೆಯುವುದನ್ನು ನಿಲ್ಲಿಸಬಹುದು. ರೇಷನ್ ವ್ಯವಸ್ಥೆಯನ್ನೇ ಮುಚ್ಚಿಬಿಟ್ಟರೆ ಅಲ್ಲಿಯ ಲಂಚವೂ ಇಲ್ಲ! ಮಧ್ಯಮವರ್ಗಕ್ಕೆ ಬೇಕಾದ ಲೈಸೆನ್ಸ್ ಮುಂತಾದುವು ಸುಗಮವಾದರೆ ಅವರಿಗೆ ತಾನೇ ಏಕೆ ಬೇಕು ಅವರು ಕೆಲಸಮಾಡುವ ಕಂಪನಿಗಳ ಭ್ರಷ್ಟಾಚಾರದ ವಿಷಯ? ದಲಿತರು ಪಾಪ! ಅವರ ಸಮಸ್ಯೆ ಅವರದೇ ಅಲ್ಲವೆ! ಸದ್ಯದಲ್ಲೆ ಕೆಲವು ಸಹಸ್ರ ಕೋಟಿ ಕಪ್ಪು ಹಣ ಬಿಳಿಯದಾಗುತ್ತದೆ! ಅದು ಖಾಸಗಿ ಉದ್ಯಮಕ್ಕೆ ತುರ್ತಾಗಿ ಬೇಕಾಗಿದೆ. ಲೋಕಸಭೆ ನ್ಯಾಯಾಂಗವನ್ನು ಸಾಕಷ್ಟು ಬೆದರಿಸಿದೆ ನಮ್ಮ ಸುದ್ದಿಗೆ ಬರಬೇಡಿ ಅಂತ!

* * *

ಮೈಸೂರು ವಿಶ್ವವಿದ್ಯಾನಿಲಯವು. ಆಗಾಗ್ಗೆ ಕೆಟ್ಟ ಕಾರಣಗಳಿಗಾಗಿ ಪತ್ರಿಕೆಗಳಲ್ಲಿ ಸುದ್ದಿಯಾಗುತ್ತಿರುತ್ತದೆ. ಈ ತಿಂಗಳಲ್ಲಿ ಅದರ ಆಶ್ರಯದಲ್ಲಿ ಒಂದು ದೊಡ್ಡ ಅಧಿವೇಶನ ಜರುಗಿತು. ದಕ್ಷಿಣ ಭಾರತದ ವಿಶ್ವವಿದ್ಯಾಲಯಗಳ ಉಪಕುಲಪತಿಗಳ ಸಮಾವೇಶ ಅದು. ವಿಶ್ವವಿದ್ಯಾನಿಲಯಗಳ ಧನಸಹಾಯ ಆಯೋಗವು ಇದಕ್ಕೆ ಕೈಜೋಡಿಸಿತ್ತು. ಎಷ್ಟು ಲಕ್ಷ ರೂಪಾಯಿಗಳ ದುರ್ವ್ಯಯ ನಡೆಯಿತೆಂದು ತನಿಖೆ ನಡೆಸಬೇಕಾದ ಅವಶ್ಯಕತೆ ಇದೆ. ನಮ್ಮ ವಿಶ್ವವಿದ್ಯಾನಿಲಯಗಳ ಅಲ್ಪಸ್ವಲ್ಪ ಘನತೆಯನ್ನೂ ಈಗಿನ ಆಡಳಿತಗಾರರು ಹಾಳು ಮಾಡುತ್ತಿದ್ದಾರೆಂಬುದಕ್ಕೆ ಈ ಸಮಾವೇಶ ನಡೆದ ವೈಖರಿಯು ಒಂದು ಉದಾಹರಣೆ. ಮೈಸೂರು ವಿಶ್ವವಿದ್ಯಾನಿಲಯದ ಆವರಣದಲ್ಲಿ ಇಂತಹ ನೂರು ಸಭೆಗಳು ನಡೆದಿವೆ, ನಡೆಯಲು ಸೌಕರ್ಯವಿದೆ. ಆದರೆ ಈ ಬಾರಿ ಸಮಾವೇಶ ನಡೆಸಲು ಇನ್‌ಫೋಸಿಸ್ ಆವರಣಕ್ಕೆ ಹೋದರು, ಸಮ್ಮೇಳನಕ್ಕೆ ಬಂದ ಗಣ್ಯರು ಯಾರೂ ವಿಶ್ವವಿದ್ಯಾನಿಲಯದ ಕಡೆಗೆ ಒಮ್ಮೆಯೂ ತಿರುಗಿ ನೋಡಲಿಲ್ಲ. ಇನ್‌ಫೋಸಿಸ್‌ಗೆ ಬಾಡಿಗೆ ಎಷ್ಟೋ ಕಂಡವರಾರು! ಉಪಕುಲಪತಿಗಳೆಲ್ಲಾ ಇನ್‌ಫೋಸಿಸ್ ಆವರಣದಲ್ಲೇ ಬೀಡುಬಿಟ್ಟಿದ್ದರು. ಆ ಕಂಪನಿಗೆ ವ್ಯವಹಾರ ಕುದುರಿತು, ವಿಶ್ವವಿದ್ಯಾನಿಲಯದ ಮೂರ್ಖತನದಿಂದ. ಹಣವೇನು ಅವರಪ್ಪನದೆ! ಸರಿ, ಉಡಾಯಿಸಿ ಹಾಕಿದರು. ಆ ವೈಭೋಗವಿಲ್ಲದೆ ಇವರಿಗೆ ಶೈಕ್ಷಣಿಕ ವಿಚಾರಗಳ ಚರ್ಚೆ ಸಾಧ್ಯವಿಲ್ಲವೆ? ಜನಗಳಿಂದ ದೂರ ನಿಂತು ಜನಗಳ ಸಮಸ್ಯೆಗಳನ್ನು ಪರಿಹರಿಸುವ ಪ್ರಹಸನದಲ್ಲಿ ಇವರೆಲ್ಲಾ ನಟರು, ಗೂಳಿಗಳು. ಸಮಾವೇಶದಲ್ಲಿ ಸಾರ್ವಜನಿಕರಿಗೆ ಪ್ರವೇಶ ಇರಲಿಲ್ಲ. ಇನ್‌ಫೋಸಿಸ್ ಹಾಗೆ ಯಾರನ್ನಾದರೂ ಒಳಕ್ಕೆ ಬಿಟ್ಟುಕೊಂಡೀತೆ? ಹೋಗಲಿ, ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರು ನೂರಾರು ಮಂದಿ ಇದ್ದಾರಲ್ಲ, ಅವರಿಗೂ ಪ್ರವೇಶ ಬೇಡವೆ? ಅದಕ್ಕೂ ಅವಕಾಶ ಮಾಡಿಕೊಡಲಿಲ್ಲ. ಇದು ನಾಚಿಕೆಗೇಡಿನ ವಿಷಯ, ಬೌದ್ಧಿಕ ದೌರ್ಜನ್ಯದ ಸಂಕೇತ. ಸಾರ್ವಜನಿಕರ ಹಣದಲ್ಲಿ ಸಮಾವೇಶ ನಡೆಸುವಾಗ ಒಂದು ಸಾರ್ವಜನಿಕ ಸ್ಥಳದಲ್ಲಿ ಅದನ್ನು ನಡೆಸಲು ಏನಿವರಿಗೆ ಕಷ್ಟ? ವಿಶ್ವವಿದ್ಯಾನಿಲಯದ ಅಧ್ಯಾಪಕರನ್ನು ವಿವಿಧ ಕೆಲಸಗಳಿಗೆ ಬಳಸಿಕೊಂಡರು, ಆದರೆ ಅವರಿಗೆ ಸಮಾವೇಶದ ಚರ್ಚೆಯನ್ನು ಆಲಿಸುವ ಅವಕಾಶವೂ ಇಲ್ಲವಾಯಿತು. ಮಾತೆತ್ತಿದರೆ ನಾವು ವಿಶ್ವಬ್ಯಾಂಕನ್ನು ಮೂದಲಿಸುತ್ತೇವೆ, ಅದರ ಆಣತಿಯಂತೆ ನಮ್ಮ ಸರ್ಕಾರಗಳು ನೀತಿಗಳನ್ನು ಜಾರಿ ಗೊಳಿಸುತ್ತವೆಯೆಂದು ಟೀಕಿಸುತ್ತೇವೆ. ಅದರಲ್ಲಿ ಸತ್ಯವಿದೆ. ಆದರೆ ನಮ್ಮ ವಿಶ್ವವಿದ್ಯಾನಿಲಯವೊಂದು ಮಹತ್ವದ ಅಧಿವೇಶನವನ್ನು ಎಲ್ಲೋ ಖಾಸಗಿಯಾಗಿ ನಡೆಸಿಕೊಳ್ಳುವ ಮೂರ್ಖತನವನ್ನು ಸಿಂಡಿಕೇಟ್ ಸದಸ್ಯರು ಪ್ರಶ್ನಿಸಿಲ್ಲ, ಅಧ್ಯಾಪಕರ ಸಂಘವು ತನ್ನ ಅಸಮಾಧಾನವನ್ನು ವ್ಯಕ್ತಪಡಿಸಿಲ್ಲ. ಯಾರು ಮಧ್ಯಪ್ರವೇಶ ಮಾಡಬೇಕೋ ಅವರು ಮೌನಿಗಳಾದರೆ ವಿಶ್ವ ಬ್ಯಾಂಕಿನ ಹಾದಿ ಸುಗಮ. ಸಾರ್ವಜನಿಕ ಬೊಕ್ಕಸದಿಂದ ಪಡೆದಿರುವ ಹಣವನ್ನು ಮೈಸೂರು ವಿಶ್ವವಿದ್ಯಾನಿಲಯವು ಅಧಿವೇಶನದಲ್ಲಿ ಪಾಲ್ಗೊಂಡ ಉಪಕುಲಪತಿಗಳಿಂದ ಸಂಗ್ರಹಿಸಿ ಬೊಕ್ಕಸಕ್ಕೆ ತುಂಬಲಿ. ಉನ್ನತ ಶಿಕ್ಷಣದ ಬಗೆಗಿನ ಚರ್ಚೆಯನ್ನು ಜನರಿಂದ ದೂರ ಕೊಂಡೊಯ್ಯುವುದನ್ನು ಒಕ್ಕೊರಲಿನಿಂದ ಖಂಡಿಸೋಣ.

* * *

ಸಾಹಿತ್ಯ ಎಷ್ಟು ಓದುತ್ತೇವೋ, ಎಷ್ಟು ಜೀರ್ಣಿಸಿಕೊಳ್ಳುತ್ತೇವೋ ಎಂಬುದು ವೈಯ್ಯಕ್ತಿಕ ವಿಷಯ. ಆದರೆ ಸಾಹಿತಿಗಳ ಬಗೆಗಿನ ಭಾವುಕತೆ ಇದ್ದಕ್ಕಿದ್ದಂತೆ ಗಗನಕ್ಕೇರಿಬಿಡುವ ಪ್ರಸಂಗಗಳು ನಮ್ಮಲ್ಲಿ ವಿರಳವಲ್ಲ. ಗಲ್ಲಿಗಲ್ಲಿಗೂ ಸಾಹಿತಿಗಳ ಹೆಸರುಗಳು, ಪ್ರತಿ ತಾಲ್ಲೂಕಿನಲ್ಲೂ ಅವರ ಮೆರವಣಿಗೆಗಳು, ನೂರಾರು ಪ್ರಶಸ್ತಿಗಳ ಪ್ರದಾನ, ಹೀಗೆ ಅದೊಂದು ವೈಭವ. ಕೆಲವೇಳೆ ಇದು ಯಾವ ಮಟ್ಟಕ್ಕೆ ಹೋಗುತ್ತದೆಂದರೆ ತಾರ್ಕಿಕ ಚಿಂತನೆ ಅಬದ್ಧವೆನಿಸಿಬಿಡುತ್ತದೆ. ಮೈಸೂರಿನಲ್ಲಿ ಆರ್. ಕೆ. ನಾರಾಯಣ್ ಅವರ ಮನೆ ಮಾರಾಟವಾದ ತರುವಾಯದಲ್ಲಿ ಜರುಗಿದ ಸಂಗತಿಗಳು ತಮಾಷೆ ಎನಿಸುತ್ತದೆ. ಮೂಲತಃ ನಾರಾಯಣ್ ಇದ್ದದ್ದು ಲಕ್ಷ್ಮೀಪುರದ ಮನೆಯಲ್ಲಿ, ತಮ್ಮ ಅನೇಕ ಕೃತಿಗಳನ್ನು ರಚಿಸಿದ್ದು ಅಲ್ಲೇ. ಒಂಟಿಕೊಪ್ಪಲಿನ ಮನೆ ಈಚಿನದು. ಅಲ್ಲಿ ಮಹತ್ವದ್ದೇನನ್ನೂ ಅವರು ಬರೆಯಲಿಲ್ಲ. ಬರವಣಿಗೆಯ ಹಂತ ಆಗಲೆ ಮುಗಿದಿತ್ತು. ಹೀಗಿರುವಾಗ ಆ ಮನೆಯ ಬಗೆಗಿನ ವ್ಯಾಮೋಹ ತೀರಾ ಅನಿರೀಕ್ಷಿತ. ೧೯೪೦-೬೦ರ ದಶಕಗಳಲ್ಲಿ ಮೈಸೂರನ್ನು ಕಂಡಿದ್ದವರು ನಾರಾಯಣ್ ಅವರನ್ನು ಲಕ್ಷ್ಮೀಪುರದ ಮನೆಯ ಹಿನ್ನೆಲೆಯಲ್ಲೇ ನೋಡುವುದು. ಅವರನ್ನು ಭೇಟಿಯಾಗಲು ಬರುತ್ತಿದ್ದವರು ಆ ಮನೆಯನ್ನು ನೆನೆಯುತ್ತಾರೆಯೇ ಹೊರತು ಒಂಟಿಕೊಪ್ಪಲಿನ ಎರಡಂತಸ್ತಿನ ತಾರಸಿ ಮನೆಯನ್ನಲ್ಲ. ಆದರೂ ಏನೋ ಚಮತ್ಕಾರ ನಡೆದಿದೆ, ಈ ಮನೆಗೆ ಪ್ರಾಶಸ್ತ್ಯ ದೊರಕಿದೆ. ವಸ್ತುಸಂಗ್ರಹಾಲಯ ಮಾಡುವುದಾದರೆ ಅಡ್ಡಿಯಿಲ್ಲ. ಮುದ್ದೇನಹಳ್ಳಿಯಲ್ಲಿ ಸದಾವಂದ್ಯ ಎಂ. ವಿಶ್ವೇಶ್ವರಯ್ಯನವರ ಮನೆ ಇದೆ, ಅದನ್ನು ವಸ್ತುಸಂಗ್ರಹಾಲಯವನ್ನಾಗಿ ನಡೆಸುತ್ತಿದ್ದಾರೆ. ನಡೆಸುವವರು ಅವರ ವಂಶಜರು, ಅಮೆರಿಕಾ ನಿವಾಸಿಗಳು. ಯಾವ ಅದ್ದೂರಿಯೂ ಇಲ್ಲದೆ ತಣ್ಣನೆಯ ವಾತಾವರಣದಲ್ಲಿ ಅದು ನಡೆಯುತ್ತಿದೆ. ನಾರಾಯಣ್ ಕುಟುಂಬದವರಿಗೆ ಹೀಗೆ ಮಾಡಬೇಕೆಂಬ ಪ್ರೇರಣೆ ಬರಲಿಲ್ಲ, ವ್ಯವಹಾರ ಕುದುರಿಸಿಕೊಂಡು ಆಮೇಲೆ ಸಹಕಾರದ ಭರವಸೆ ನೀಡಿದ್ದಾರೆ.

* * *

ಈ ಪ್ರಸಂಗದ ತರುವಾಯದಲ್ಲಿ ಪ್ರೊ|| ಚಂದ್ರಶೇಖರ ಕಂಬಾರ ಅವರಿಗೆ ಜ್ಞಾನಪೀಠ ಪ್ರಶಸ್ತಿಯ ಘೋಷಣೆಯಾಗಿರುವುದು ಸ್ವಾಗತಾರ್ಹವಾಗಿದೆ. ಅವರಿಗೆ 'ಹೊಸತು' ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತದೆ. ಎಲ್ಲರಂತಲ್ಲದ ಈ ಸಾಹಿತಿಯ ಕೃತಿಗಳ ಪುನರ್ಮನನಕ್ಕೆ ಪ್ರಶಸ್ತಿಯು ಹಾದಿಮಾಡಿಕೊಡುತ್ತದೆ.

* * *

ಕರ್ನಾಟಕ ರಾಜ್ಯವು ಕೇಂದ್ರ ಸರ್ಕಾರದೊಡನೆ ಸ್ಪರ್ಧೆಗೆ ಇಳಿದಿದೆ: ಯಾರ ಮಂತ್ರಿಗಳು ಮತ್ತು ಇತರ ರಾಜಕಾರಣಿಗಳು ಜೈಲಿಗೆ ಹೋಗುವುದರಲ್ಲಿ ಮುಂದು, ಎಂಬ ವಿಚಾರದಲ್ಲಿ. ಜೈಲಿಗೆ ಹೋದ ಕೂಡಲೆ ಆಸ್ಪತ್ರೆಗೆ ದಾಖಲಾಗುವವರ ಸಂಖ್ಯೆಯಲ್ಲಿ ನಮ್ಮ ರಾಜ್ಯವೇ ಮುಂದು. ಕ್ಯಾನ್ಸರ್‌ನಿಂದ ಹಿಡಿದು ಎಂತೆಂಥವೋ ರೋಗಗಳು, ಪಾಪ, ಇವರಿಗೆ. ಹಾಗೆ ನೋಡಿದರೆ, ಎ. ರಾಜ ಮತ್ತು ಕನಿಮೊಳಿ ಬಹಳ ನಂಬಿಕಸ್ಥರು. ಈವರೆಗೆ ಅವರು ಯಾವ ರೋಗವನ್ನೂ ಆವಾಹನೆ ಮಾಡಿಕೊಂಡಿಲ್ಲ. ಬೆಂಗಳೂರಿನ ಪಾರಪ್ಪನ ಅಗ್ರಹಾರ ಕಾರಾಗೃಹದಲ್ಲಿ ರಾಜ್ಯ ಸರ್ಕಾರದ ಸಂಪುಟ ಸಭೆಗಳನ್ನು ನಡೆಸಲು ಅಗತ್ಯವಾದ ಏರ್ಪಾಟು ಮಾಡಬೇಕಾದೀತೆಂಬ ಆತಂಕ ಅಧಿಕಾರಿಗಳನ್ನು ಕಾಡುತ್ತಿದೆ ಎನ್ನುತ್ತಾರೆ. ಒಂದಷ್ಟು ಅಧಿಕಾರಿಗಳನ್ನುದ್ದೇಶಿಸಿ ಮಾತನಾಡಲು ರಾಜ್ಯದ ಮುಖ್ಯ ಕಾರ್ಯದರ್ಶಿ ಮುಂದೊಂದು ದಿನ ಅಲ್ಲಿಗೇ ಹೋಗಬೇಕಾಗಬಹುದು. ಏಕೆಂದರೆ, ಲೋಕಾಯುಕ್ತರ ವರದಿಯಲ್ಲಿ ಅಷ್ಟೊಂದು ತಿಮಿಂಗಲಗಳ ಹೆಸರುಗಳಿವೆ. ಸಂಪುಟ ಸಭೆಯೇನಾದರೂ ನಡೆಯಬೇಕಾದರೆ ಅದು ಮೂರು ಪಕ್ಷಗಳ ಸಂಮಿಶ್ರ ಸರ್ಕಾರದ್ದೇ ಆಗಬೇಕಾಗುತ್ತದೆ. ಅಭಿವೃದ್ಧಿ ಸೂಚ್ಯಂಕದ ಹೆಚ್ಚಳಕ್ಕೆ ಬೇರಿನ್ನೇನು ಮಾಪಕಗಳು ಬೇಕು!

* * *

ಲೋಕಪಾಲ ಮಸೂದೆಯನ್ನು ಕುರಿತಂತೆ ಚರ್ಚೆಗಿಂತಲೂ ಬಿರುಸಿನ ಮಾತುಗಳೇ ಹೆಚ್ಚಾಗಿವೆ. ಪ್ರಸ್ತುತ ಸಂಚಿಕೆಯ ಒಂದು ಸಂಪಾದಕೀಯ ಲೇಖನ ಆ ಬಗ್ಗೆ ಕೆಲವು ಅಭಿಪ್ರಾಯಗಳನ್ನು ಮಂಡಿಸಿರುವುದನ್ನು ಗಮನಿಸಬಹುದು. ರಾಲೇಗಾಂವ್ ದೇವಸ್ಥಾನದಲ್ಲಿ ಅಣ್ಣಾ ಹಜಾರೆ ಒಬ್ಬರೇ ಕುಳಿತು ಧ್ಯಾನಸ್ಥರಾಗಿರುವ ಚಿತ್ರ ಈ ಸಂಚಿಕೆಯ ಮುಖಪುಟಕ್ಕೆ ಬೇಕಿತ್ತು. ಸೂಕ್ತವಾದ್ದು ದೊರೆಯಲಿಲ್ಲ, ಆದರೆ ಅನಿರ್ದಿಷ್ಟವಾದ ಒಂದು ಸ್ಥಳದಲ್ಲಿ ಅಣ್ಣಾ ಧ್ಯಾನಸ್ಥರಾಗಿ ಕುಳಿತಿರುವುದು, ಹಿಂದೆ ಹೂಕುಂಡಗಳು ಅಸ್ಪಷ್ಟವಾಗಿ ಗೋಚರಿಸುವುದು, ಅರ್ಥವತ್ತಾಗಿದೆ ಎಂಬ ಕಾರಣಕ್ಕೆ ಅದನ್ನು ಆಯ್ದುಕೊಂಡಿದ್ದೇವೆ.

ಕಿರಣ್ ಬೇಡಿ ಮತ್ತು ಅರವಿಂದ ಕೇಜ್ರಿವಾಲರಂತಹ ''ಉದ್ದಾಮ ಸಾಮಾಜಿಕ ಕಾರ್ಯಕರ್ತರು'' ಅಣ್ಣಾ ಅವರನ್ನು ಸುತುವರಿದಾಗಿನ ಅಣ್ಣಾ ಬೇರೆ, ರಾಲೇಗಾಂವ್ ಅಣ್ಣ ಬೇರೆ. ಭ್ರಷ್ಟಾಚಾರದ ನಿರ್ಮೂಲನೆಗೆ ತಮ್ಮನ್ನು ತಾವು ಅರ್ಪಿಸಿಕೊಂಡಿರುವುದಾಗಿ ಘೋಷಿಸುವ ಬೇಡಿ - ಕೇಜ್ರಿವಾಲ್‌ಗಳು ಮೊದಲು ಡಾಲರ್ ವ್ಯವಹಾರದಿಂದ ಹೊರಗೆ ಬರುವುದು ಅಗತ್ಯ. ಅವರು ಪಡೆಯುವ ಭಾರಿ ಮೊತ್ತದ ಅಮೆರಿಕಾ ಡಾಲರುಗಳನ್ನು ಅವರು ಏತಕ್ಕಾಗಿ ಮತ್ತು ಹೇಗೆ ವ್ಯಯಿಸುತ್ತಾರೆ? ಹಾಗೆ ಡಾಲರ್ ಸೂರೆಗೊಂಡು ಭ್ರಷ್ಟಾಚಾರದ ನಿರ್ಮೂಲನಕ್ಕೆ ಮುಂದಾಗಿರುವುದು ಒಂದು ಭವ್ಯನೋಟವಾಗಿ ಕಾಣುತ್ತದೆ, ಆದರೆ ಅದು ಫಲಕಾರಿಯಲ್ಲ ಅವರು ಅಣ್ಣಾ ಅವರ ಅನುಯಾಯಿಗಳೋ ಅಥವಾ ಸ್ವತಃ ಅಣ್ಣಾ ಅವರೇ ಅಂತಹ ಮಹಾನುಭಾವರ ಕೈಗೊಂಬೆಯೋ ಎಂಬ ಅನುಮಾನ ಕಾಡುತ್ತದೆ. ಬೆಂಗಳೂರಿನಲ್ಲಿ ಅಣ್ಣಾ ಜೊತೆ ಉಪವಾಸ ಕೂತವರ ಪೈಕಿ ಪ್ರೊ|| ಎಂ. ಕೆ. ಧರ್ಮರಾಜ್ ಇದ್ದದ್ದು ಚಳುವಳಿಗೆ ಸ್ವಲ್ಪ ಗೌರವ ತಂದಿತು. ಅಣ್ಣಾ ಇರಬೇಕಾದ್ದು ಅಂಥವರೊಡನೆ, ಕೇಜ್ರಿವಾಲನಂತಹವರೊಡನೆ ಅಲ್ಲ. ಭ್ರಷ್ಟಾಚಾರ ತೊಲಗಬೇಕು, ಲೋಕಪಾಲ ಮಸೂದೆ ಜಾರಿಯಾಗಬೇಕು, ಎಂಬುದರ ಬಗ್ಗೆ ಎರಡು ಅಭಿಪ್ರಾಯಗಳಿಲ್ಲ; ಆದರೆ ಬೇಡಿ-ಕೇಜ್ರಿವಾಲ್ ಮುಂತಾದವರ ಪಾತ್ರದ ಬಗ್ಗೆ ಏಕಾಭಿಪ್ರಾಯ ಸಾಧ್ಯವಿಲ್ಲ. ಭಾವೋದ್ರೇಕದಿಂದ ಅವರು ಲೋಕಸಭಾ ಸದಸ್ಯರನ್ನು ಕುರಿತಂತೆ ಪ್ರಶ್ನಾರ್ಹವಾದ ಭಾಷೆ ಬಳಸಿದ್ದು ಅಷ್ಟು ದೊಡ್ಡ ವಿಷಯವಲ್ಲ. ಭಾರಿ ಜನಸಮೂಹದೆದುರು ತಾಳ್ಮೆ ತಪ್ಪಿ ಮಾತನಾಡುವುದು ಅಪರೂಪವೇನಲ್ಲ. ಬೆಂಗಳೂರಿನ ಸ್ವಾತಂತ್ರ್ಯೋದ್ಯಾನದಲ್ಲಿ ಹಿರಿಯ ಗಾಂಧಿವಾದಿಯೊಬ್ಬರು ಅಂಥದೇ ಭಾವೋದ್ವೇಗಕ್ಕೆ ತುತ್ತಾದರು. ಇಂದಿರಾ ಗಾಂಧಿ, ಜೆ.ಪಿ., ಇತ್ಯಾದಿ ಪ್ರಸ್ತಾಪ ಮಾಡಿ ಅವರೆಂದರು: ''ಈಗಿನವರಿದ್ದಾರಲ್ಲ, ಪಾರ್ಲಿಮೆಂಟ್‌ನಲ್ಲಿ ಕೂತಿರುವವರು, ಅವರಿಗೆ ಕಪಾಳಕ್ಕೆ ಎರಡು ಬಿಗಿದು ಹೇಳಿದರೂ ತಪ್ಪಾಗುವುದಿಲ್ಲ'' ಎಂದು. ಪ್ರತಿಭಟನೆಗಿಂತಲೂ ಸಂಭ್ರಮವೇ ಹೆಚ್ಚು ಪ್ರದರ್ಶನಗೊಂಡ ಸಂದರ್ಭ ಅದು. ಕಪಾಳಕ್ಕೆ ಬಿಗಿಸಿಕೊಳ್ಳಲು ಅರ್ಹರ ಪಟ್ಟಿ ಮಾಡಹೊರಟರೆ ಎಲ್ಲಿಂದ ಆರಂಭ? ಅ-ಅರುಣ ಶೌರಿ: ಸಾರ್ವಜನಿಕ ಸಂಪತ್ತಾದ ಉದ್ಯಮಗಳನ್ನು ಕೊಳೆತ ಮೀನು ಎಂಬಂತೆ ಬೇಕಾಬಿಟ್ಟಿ ಖಾಸಗಿಯವರಿಗೆ ಹಂಚಿಕೊಟ್ಟ ವ್ಯಕ್ತಿ ಆತ. ಈಗ ಹಿಂದುಸ್ತಾನ್ ಏರೋನಾಟಿಕ್ಸ್‌ನ ಷೇರುಗಳನ್ನು ಬಿಕರಿ ಮಾಡುವ ಹಂತ ಮುಟ್ಟಿದ್ದೇವೆ. ಅರುಣ ಆದನಂತರ ಅಂಬಾನಿಗಳು. ಆಮೇಲೆ ಆನಂದ ಶರ್ಮ. ಇತ್ಯಾದಿ. ಕರ್ನಾಟಕದ ಲೋಕಾಯುಕ್ತರು ಕೂಡ ರಾಜಿನಾಮೆ ನೀಡುವಂತಾದ ಸನ್ನಿವೇಶ ನಮ್ಮದು. ಭೂಮಿಯ ಬಗ್ಗೆ ನಮ್ಮ ಜನರ ಪ್ರೀತಿ ಅಷ್ಟು ಗಾಢವಾದ್ದು. ಚಿನ್ನ ತುಂಬಿಕೊಂಡಾದ ಮೇಲೆ ಭೂಮಿಯನ್ನು ತುಂಬಿಕೊಳ್ಳಬೇಕಲ್ಲ! ಶ್ರೀಮತಿ. ಪಾಟೀಲರು ಬೇರೆಯವರಿಗಿಂತ ಕಡಿಮೆ ದರದಲ್ಲಿ ಭೂಮಿ ಕೊಂಡರು, ಎಂಬುದು ಸರಳ ಹೇಳಿಕೆ. ಅದರ ಹಿಂದಿನ ಗುಟ್ಟೇನೆಂಬುದು ಬಹುಶಃ ಲೋಕಾಯುಕ್ತ ಪದವಿ 'ತ್ಯಾಗ' ಮಾಡಿದ ಶ್ರೀ. ಪಾಟೀಲರಿಗೆ ತಿಳಿದಿರಬೇಕು. ಒಟ್ಟಿನಲ್ಲಿ, ಅಣ್ಣಾ ಅವರೊಡನೆ ನಿಲ್ಲಲು ಅರ್ಹತೆಯುಳ್ಳವರ ಪಟ್ಟಿ ಮೊಟಕಾಗುತ್ತಾ ಹೋಗುತ್ತಿದೆ. ಆದ್ದರಿಂದಲೇ ಅಡ್ವಾನಿಯವರು ತಮ್ಮ ಟ್ರೇಡ್ ಮಾರ್ಕ್ ಆದ ರಥಯಾತ್ರೆ ಆರಂಭಿಸುತ್ತಾರಂತೆ: ಭ್ರಷ್ಟಾಚಾರ ಹೊಡೆದೋಡಿಸಲು. ಬಳ್ಳಾರಿಯಿಂದ ದೆಹಲಿಗೆ ಹಾಗೂ ಪಕ್ಷ ವರಿಷ್ಠರಿಗೆ ಎಷ್ಟು ಕೋಟಿ ರವಾನೆಯಾಗಿದ್ದಿರಬಹುದೆಂಬ ಅಂದಾಜು ಅವರಿಗಿದೆ. ಅದನ್ನು ಬಹಿರಂಗಪಡಿಸಿ ಆಮೇಲೆ ರಥ ಏರುವುದು ಸೂಕ್ತ.

ದೇಶದ ಸಂಪತ್ತು ಜನರದು ಎಂಬ ಆಧಾರದ ಮೇಲೆ ಆರ್ಥಿಕ ನೀತಿಗಳು ಗಟ್ಟಿಗೊಳ್ಳದೆ ಲೋಕಪಾಲ ಮಸೂದೆ ಸರ್ವೋಪಶಮನ ಮಾಡೀತೆಂದು ಭ್ರಮಿಸುವುದು ಬೇಡ. ಅಣ್ಣಾ ಹಜಾರೆಯವರ ಏಕಾಂಗಿತನದ ಧ್ಯಾನ, ಅಡ್ವಾನಿಯವರ ಪ್ರಚಾರಭರಿತ ರಥಯಾತ್ರೆ, ಎಲ್ಲಾ ನಮ್ಮನ್ನೆಲ್ಲಿಗೆ ಮುಟ್ಟಿಸುತ್ತವೋ ಕಾದುನೋಡೋಣ. ಈ ಮಧ್ಯೆ ನರಮೇಧೇಂದ್ರ ಮೋದಿ ಅಡ್ವಾನಿಯವರಿಗೆ ಶಾಕ್ ಕೊಡುವ ರೀತಿಯಲ್ಲಿ ಮೂರು ದಿನ ಉಪವಾಸ ಮಾಡಿಬಿಟ್ಟಿದ್ದಾರೆ. ಹಾಗಿದ್ದರೆ ಅವರಿಬ್ಬರಲ್ಲಿ ಮುಂದಿನ ಪ್ರಧಾನಿ ಯಾರು, ಅಣ್ಣಾ ಅವರ ಜನಲೋಕಪಾಲ ಮಸೂದೆಯನ್ನು ಜಾರಿಗೊಳಿಸುವವರು ಯಾರು? ಬಳ್ಳಾರಿ ಸೋದರರು ಆಪ್ತಸಲಹೆ ನೀಡಿಯಾರು! ■

# ಅಪ್ಪನ ಎರಡು ಮುಖ

ಗಾದಾರಿ ಎಲೆ ಕೊಯ್ದು ಸೀಳಿ
ನೆನೆಸಿ ನಾರು ಮಾಡಿ,
ಹುರಿ ಹೊಸೆದು ಹಗ್ಗ ಮಾಡಿ
ಮೂಡಲಗಿ ಸಂತೆಯಲಿ ಮಾರಿ
'ಸ್ವಾಮಿ'ಯ ಅಂಗಡಿಯಲಿ
ಮಿಸಳ ತಿನಿಸುತ್ತಿದ್ದಾಗ
ಅಪ್ಪ ಭಾರೀ ಶ್ರೀಮಂತನಂತೆ
ಕಾಣುತ್ತಿದ್ದ!!

ಹಬ್ಬಹರಿದಿನಗಳಲ್ಲಿ ಸಾಹುಕಾರರು
ಮೂರು ಮೊಳ ಮೇಲಿನಿಂದ
ಎಸೆಯುವ ತಂಗಳು ಮುಂಗಳಕ್ಕೆ
ಕೈಯೊಡ್ಡುವಾಗ ತೀರಾ
ಬಡವನಂತೆ ಕಾಣುತ್ತಿದ್ದ!!

ಮಣ್ಣ ಕೊಪ್ಪರಿಗೆಯ ನೀರಲ್ಲಿ
ಚರ್ಮವ ನೆನೆಸಿ ಹದ ಮಾಡಿ
ಸವರಿ ಕೊರೆದು ಜಜ್ಜಿ
ಹತ್ತಿರ ನಿಂತು ದೂರ ನಿಂತು
ನೋಡುತ್ತ ಅಳೆಯುತ್ತ
ಹಳೆಯ ಸಿನೆಮಾ ಹಾಡುಗಳ
ಶಿಳ್ಳೆಯಲಿ ಗುಣುಗುತ್ತ
ಚಪ್ಪಲಿ ಹೊಲಿಯುವಾಗ
ಅಪ್ಪ, ದೊಡ್ಡ ಕಲಾವಿದನಂತೆ
ಕಾಣುತ್ತಿದ್ದ!!

ಆ ಕಲಾಕೃತಿಗಳನ್ನು
ಉಟ್ಟ ವಲ್ಲಿಯಲ್ಲಿ ಬುತ್ತಿಯಂತೆ
ಕಟ್ಟಿಕೊಂಡೊಯ್ದು
ದಣಿಗಳಿಗೆ ಸಮರ್ಪಿಸಿ
ಅವರು ಸುರಿವ ಗಿರಪಾವು ಕಾಳಿಗೆ
ಉಡಿಯೊಡ್ಡಿ ಕೃತಾರ್ಥನಾಗುವಾಗ
ತೀರಾ ಹೆಡ್ಡನಂತೆ ಕಾಣುತ್ತಿದ್ದ!!

ದೇಸಾಯರ ಎಂಕಣ್ಣ
ರಾತ್ರಿ ಕುಡಿದುಬಂದಾಗ
ಕೋಳಿ ಕೊಯ್ದು ಅಡಿಗೆ ಮಾಡಿ
ಉಣಿಸುವಾಗ ಅಪ್ಪ ಭಾರೀ
ದೊಡ್ಡ ಕುಳದಂತೆ ಕಾಣುತ್ತಿದ್ದ!!

ನಿಶೆಯೇರಿ ದೇಸಾಯರು
ಬಿದ್ದಾಗ ಅವರನ್ನು
ಕುರಿಮರಿಯಂತೆ ಹೊತ್ತು
ಮನೆಗೆ ಸಾಗಿಸುವಾಗ
ತೀರಾ ಗುಲಾಮನಂತೆ
ಕಾಣುತ್ತಿದ್ದ!!



ಮಾರುತಿ ದಾಸಣ್ಣವರ
ಜವಾಹರ ನವೋದಯ ವಿದ್ಯಾಲಯ, ಗಾಳಿಬೀಡು, ಮಡಿಕೇರಿ - ೫೭೧೨೦೧




### ಅರ್ಥಪೂರ್ಣ ಸೆಪ್ಟೆಂಬರ್ ಸಂಚಿಕೆ

ಭೂ ಕಬಳಿಕೆಯನ್ನು ಜಾಯಮಾನ ಮಾಡಿಕೊಂಡಿರುವವರನ್ನು ಅಣಕಿಸುವಂತಿದೆ ಸಂಚಿಕೆಯ ಮುಖಪುಟ. ಹಿಡಿ ಮಣ್ಣಷ್ಟೇ ನಮ್ಮ ಆಸಕ್ತಿ ಎಂದು ಜನಸಾಮಾನ್ಯರೆಂದರೆ, ಎಲ್ಲವನ್ನು ನಮ್ಮ ಕಬಂಧ ಬಾಹುಗಳು ಕಬಳಿಸಲು ಸಿದ್ಧವೆನ್ನುತ್ತಾರೆ ಲ್ಯಾಂಡ್ ಮಾಫಿಯಾದ ಮಂದಿ!

ಈ ಸಂಚಿಕೆಯಲ್ಲಿ ಹೆಚ್ಚು ಕವನಗಳು ಪ್ರಕಟವಾದಂತೆ ಎನಿಸಿತು !!

ಪ್ರಶಸ್ತಿ ಪುರಸ್ಕೃತ ಚಿತ್ರಗಳು ಜನಸಾಮಾನ್ಯರನ್ನು ತಲುಪಲು ವಿಫಲವಾಗುತ್ತಿವೆಯೇ ಎನ್ನುವ ಅನುಮಾನ ಕಾಡುತ್ತದೆ. ಈ ಬಗ್ಗೆ ವಿಷ್ಣು ನಾಯ್ಕ ಅವರ ಪುಟ್ಟಕ್ಕನ ಹೈವೇಯ ಬಗ್ಗೆ ಒಂದು ನೋಟ ಚಿತ್ರರಂಗದ ಇತ್ತೀಚಿನ ಸ್ಥಿತಿಯನ್ನು ಕೊಂಚಮಟ್ಟಿಗೆ ಬಿಡಿಸಿಡುವಲ್ಲಿ ಯಶಸ್ವಿಯಾಗಿದೆ.

ಡಾ|| ಜಿ. ಕೃಷ್ಣಪ್ಪ ಅವರ ಬೊಳುವಾರು ಕಥೆಗಳ ಕುರಿತಾದ ಲೇಖನ ಬೊಳುವಾರು ಅವರ ಬರಹಗಳ ಸಮಗ್ರ ಅವಲೋಕನ ಮಾಡುವಲ್ಲಿ ಯಾಶಸ್ವಿಯಾಗಿದೆ.

ಮೈಸೂರು **ಕೊ. ಸು. ನರಸಿಂಹಮೂರ್ತಿ**

### ಸಂಪಾದಕೀಯ ಕುರಿತು

'ಭಗವದ್ಗೀತೆಯ ಅಧ್ಯಯನ ವಿಧಾನ'ದಲ್ಲಿ ಗೀತೆಯ ಆಶಯವನ್ನು ಮತ್ತು ಅದನ್ನು ಶಾಲೆಗಳಲ್ಲಿ ಪಠಣ ಮಾಡುವ ಕಾರ್ಯಕ್ರಮದ ಔಚಿತ್ಯದ ಬಗ್ಗೆ ಮೌಲ್ಯಭರಿತವಾಗಿ ವಿಶ್ಲೇಷಣೆ ಮಾಡಲಾಗಿದೆ. ಫ್ಯಾಸಿಸ್ಟ್ ಮನೋಭಾವನೆಯ ಕೋಮುವಾದ ಶಕ್ತಿಗಳು ತಮ್ಮ ಧರ್ಮ ರಾಜಕಾರಣದ ತಂತ್ರಗಳನ್ನು ಈ ರೀತಿಯಲ್ಲಿ ಬಳಸುವುದು ಹೊಸದೇನಲ್ಲ. ಹಿಂದೆಯೂ 'ಭಯೋತ್ಪಾದನೆಯ ವಿರುದ್ಧ ಜಾಗೃತಿ' ಎಂಬ ವಿಷಯವನ್ನಿಟ್ಟುಕೊಂಡು ಕಾಲೇಜು ವಿದ್ಯಾರ್ಥಿಗಳಲ್ಲಿ ಕೋಮು ದ್ವೇಷದ ಬೀಜಗಳನ್ನು ಬಿತ್ತಲು ಮುಂದಾಗಿದ್ದು ಸಹ ಇಂತಹ ಮತೀಯ ಶಕ್ತಿಗಳೇ! ಅರಿವಿನ ಒಳಗಣ್ಣನ್ನು ತೆರೆಸಬೇಕಾದ ಶಾಲೆಗಳನ್ನು ಅಂಧಶ್ರದ್ಧೆಗಳ ಕೇಂದ್ರಗಳನ್ನಾಗಿಸಿ, ಮುಗ್ಧ ಮಕ್ಕಳ ಮೆದುಳಿಗೆ ಮತೀಯ ವಿಷವನ್ನು ಸುರಿಯುವುದರ ಹಿಂದೆ ಧರ್ಮವೊಂದು ಪ್ರಭುತ್ವವಾಗಿ ಸ್ಥಾಪಿತವಾಗುವ ಹುನ್ನಾರವಿದೆ. ಅದಕ್ಕೆ ಪೂರಕವಾಗಿ ಪ್ರಭುತ್ವ ಸಹ ತನ್ನ ಅಸ್ತಿತ್ವವನ್ನು ಖಾಯಂಗೊಳಿಸಿಕೊಳ್ಳಲು ಧರ್ಮವನ್ನು ಏಣಿಯನ್ನಾಗಿ ಬಳಸಿಕೊಳ್ಳುವ ಯತ್ನವಿದೆ.

ಅಯೋಧ್ಯೆ ಎಂಬ ಪುಟ್ಟ ಊರಿನ ನಿರ್ದಿಷ್ಟ ಮಸೀದಿಯಿರುವ ಜಾಗದಲ್ಲೇ ರಾಮ ಹುಟ್ಟಿದ ಎಂದು ಈ ನಾಡಿನ ಜನತೆಯನ್ನು ನಂಬಿಸುವ ಮೂಲಕ ಅಧಿಕಾರಕ್ಕೇರಿದ ಇತಿಹಾಸ ಹೊಂದಿರುವ ಶಕ್ತಿಗಳು ನಾಳೆ 'ಭಗವದ್ಗೀತೆಯ ಅಧ್ಯಯನ-ಪಠಣ'ಕ್ಕಾಗಿ ಪ್ರತ್ಯೇಕವಾದ ವಿಶ್ವವಿದ್ಯಾನಿಲಯವೊಂದನ್ನು ಸ್ಥಾಪಿಸಲು ಮುಂದಾದರೆ ಅದನ್ನು ಅಚ್ಚರಿಯ ಕಣ್ಣುಗಳಿಂದ ನೋಡುವ ಅಗತ್ಯವಿಲ್ಲ. ಗೀತೆಯ ಪಠಣವನ್ನು ವಿರೋಧಿಸುವವರು ಈ ದೇಶ ಬಿಟ್ಟು ತೊಲಗಲಿ ಎಂದು ಸಾರ್ವಜನಿಕವಾಗಿ ಹೇಳಿಕೆ ನೀಡುವ ಗೌರವಾನ್ವಿತ ಸಚಿವರುಗಳು, ನಾಳೆ ಹಿಂದೂಪರ ನಿಲುವುಗಳನ್ನು ಒಪ್ಪದೆ ಹೋದವರು ಈ ದೇಶದಲ್ಲಿ ಇರುವ ಹಾಗಿಲ್ಲ ಎಂಬ ಆಜ್ಞೆ ಹೊರಡಿಸಿದರೂ ಆಶ್ಚರ್ಯ ಇಲ್ಲ. 'ಧರ್ಮ' ಎಂಬ ಪದದ ನಿಜ ಅರ್ಥ ತಿಳಿಯದ ಇಂತಹ ಮತೀಯಶಕ್ತಿಗಳ ಅನರ್ಥಕಾರಿ ಹೇಳಿಕೆಗಳಿಗೆ, ಅವಾಂತರಕಾರೀ ಕಾರ್ಯಕ್ರಮಗಳಿಗೆ ನಾವಿಂದು ಪ್ರತಿರೋಧ ಒಡ್ಡದೆ ಹೋದರೆ ಈ ನೆಲದಲ್ಲಿ ಬಹುಜನರು, ಅಲ್ಪಸಂಖ್ಯಾತರು ಮತ್ತು ಉಪಸಂಸ್ಕೃತಿಗಳ




ಬುಡಕಟ್ಟು ಜನವರ್ಗಗಳಿಗೆ ಯಾವ ರಕ್ಷಣೆಯೂ ಇರುವುದಿಲ್ಲ. 'ಹೊಸತು' ಇಂತಹ ಕೋಮುಶಕ್ತಿಗಳ ವಿರುದ್ಧ ಹೋರಾಡುವ ವರ್ಗಗಳ 'ಧ್ವನಿ'ಯಾಗಿ ಮುನ್ನಡೆಯಲೆಂದು ನಾನು ಮನವಿ ಮಾಡುತ್ತೇನೆ.

ಇನ್ನು ಸಿದ್ದನಗೌಡ ಪಾಟೀಲರ ಪೋಸ್ಕೊ ವಿರೋಧಿ ಹೋರಾಟದ ಕಥನ ಕುರಿತು: ಈ ನಾಡಿನಲ್ಲಿನ್ನೂ ಹೋರಾಟದ, ಚಳುವಳಿಯ ಕಿಡಿ ಸಣ್ಣದಾಗಿಯಾದರೂ ಉರಿಯುತ್ತಿದೆ ಮತ್ತು ನಮ್ಮ ರೈತರಲ್ಲಿ ನಿಧಾನವಾಗಿಯಾದರೂ ವ್ಯವಸ್ಥೆಯ ವಿರುದ್ಧ ಸೆಟೆದು ನಿಲ್ಲುವ ಧೈರ್ಯವಿನ್ನೂ ಉಳಿದಿದೆ ಎಂಬುದನ್ನು ಈ ಹೋರಾಟದಿಂದ ತಿಳಿಯುವಂತಾಗಿದೆ. ಸದರಿ ಹೋರಾಟದಲ್ಲಿ ಭಾಗವಹಿಸಿದ ರೈತರಿಗೆ, ಅವರಿಗೆ ಬೆಂಬಲವಾಗಿ ನಿಂತ ಮಠಾಧೀಶರುಗಳಿಗೆ, ವಿವಿಧ ಸಂಘಟನೆಗಳ ಕಾರ್ಯಕರ್ತರಿಗೆ ಮತ್ತು ಇಂತಹ ಹೋರಾಟವೊಂದರ ಸಂಘಟನಾಕಾರ್ಯ ಮಾಡಿ ಯಶಸ್ವಿಯಾದ ಸಿದ್ದನಗೌಡ ಪಾಟೀಲರಿಗೆ ನನ್ನ ಅಭಿನಂದನೆಗಳು.

ಈ ಸಮಯದಲ್ಲಿ ನನ್ನದೊಂದು ವಿನಂತಿ: ಸಮಯ ಬಂದಾಗ ಸಂಕಷ್ಟ ನಿವಾರಣೆಗೆ ಮುಂದಾಗುವುದಕ್ಕಿಂತ, ಬರಬಹುದಾದ ಇಂತಹ ಸನ್ನಿವೇಶಗಳಿಗೆ ಸನ್ನದ್ಧರಾಗುವುದು ಒಳ್ಳೆಯದೆಂದು ನನ್ನ ಅಭಿಪ್ರಾಯ. ಆದ್ದರಿಂದ ಪಾಟೀಲರು ಸಮಾನಮನಸ್ಕರ ಜೊತೆಗೂಡಿ ಪ್ರತಿ ತಾಲ್ಲೂಕಿನಲ್ಲೂ ರೈತರನ್ನು, ವಿವಿಧ ಪ್ರಗತಿಪರ ಸಂಘಟನೆಗಳ ನಾಯಕರನ್ನು, ಪರಿಸರ ತಜ್ಞರನ್ನು, ಬರಹಗಾರರನ್ನು, ಮಾಧ್ಯಮ ಮಿತ್ರರನ್ನು ಒಳಗೊಂಡಂತಹ 'ಭೂಸ್ವಾಧೀನ ವಿರೋಧಿ ಸಮಿತಿ'ಗಳನ್ನು ರಚಿಸಿ, ರೈತರ ಭೂಮಿ ಸ್ವಾಧೀನತೆಯ ಬಗ್ಗೆ ಸದಾ ಎಚ್ಚರದಿಂದಿರುವ ವ್ಯವಸ್ಥೆಯೊಂದನ್ನು ಮಾಡುವುದು ಉತ್ತಮವೆಂದು ನನ್ನ ಆಶಯವಾಗಿದೆ.

ತರೀಕೆರೆ **ಕು. ಸ. ಮಧುಸೂದನ**

'ಭಗವದ್ಗೀತೆಯ ಅಧ್ಯಯನ ವಿಧಾನ' ಸಂಪಾದಕೀಯ ಪ್ರಬುದ್ಧವಾಗಿದ್ದರೂ 'ಎಡ' ಸಿದ್ಧಾಂತ ಬದ್ಧತೆಯಿಂದ ಪೂರ್ವಗ್ರಹಗ್ರಸ್ತವಾಗಿದೆ ಎನಿಸುತ್ತದೆ. ಗೀತೆಯನ್ನು ಎಲ್ಲರ ಮೇಲೆ ಹೇರುವುದಾಗಲಿ ಕಂಠಪಾಠ ಮಾಡಿಸುವುದಾಗಲಿ ಖಂಡಿತ ಅನಗತ್ಯ. ಆದರೆ ಅದರಲ್ಲಿ ಗ್ರಾಹ್ಯವಾದ ಎಷ್ಟೋ ವಿಚಾರಗಳಿವೆ ಎಂಬುದು ಗಮನಾರ್ಹ. ಅನೇಕರು ಅವುಗಳಿಗೆ ಅಪ ವ್ಯಾಖ್ಯಾನ ಮಾಡಿದ್ದಾರೆ: ನಿದರ್ಶನಕ್ಕೆ, ಗೀತೆ ಹೇಳುವ 'ಸ್ವಧರ್ಮ'ವನ್ನು ಡಿ.ವಿ.ಜಿ. ಅವರು ತಮ್ಮ 'ಶ್ರೀ ಮದ್ಭಗವದ್ಗೀತಾ ತಾತ್ಪರ್ಯ'ದಲ್ಲಿ (ಸ್ವ) ಜಾತಿ ಎಂಬರ್ಥದಲ್ಲಿ ಹಾಸ್ಯಾಸ್ಪದವಾಗಿ ವಿವರಿಸಿರುವ ಪರಿ!

ಮೈಸೂರು **ಸಿಪಿಕೆ**

[ಗೀತೆಗೆ ಎಡ-ಬಲ ಎಂಬುದು ಅನರ್ಥ. ಇರುವುದು ಯಥಾರ್ಥ ಗ್ರಹಿಕೆ, ಅಷ್ಟೆ. ಎಡಕ್ಕೆ ಬಲವಿಲ್ಲ ಎಂಬುದು ಬೌದ್ಧಿಕ ವಲಯದಲ್ಲಿ ಅಪ್ರಸ್ತುತ. **–ಸಂ.**]

### ಮಹಾತ್ಮರಿಗೆ ರವೀಂದ್ರರ ಪತ್ರ

ನಮ್ಮ ಯುವಜನತೆ, ಅದರಲ್ಲೂ ವಿದ್ಯಾವಂತರೆನಿಸಿಕೊಂಡ ವರ್ಗ ಗಾಂಧೀಜಿಯ ಕುರಿತು ಅನೇಕ ತಪ್ಪು ಕಲ್ಪನೆಗಳನ್ನು ಇಟ್ಟುಕೊಂಡಿದೆ. ಈ ತಪ್ಪು ಕಲ್ಪನೆಗೆ ಯಾವುದೋ ಒಂದು ವರ್ಗ ವ್ಯವಸ್ಥಿತವಾಗಿ ಮತ್ತು ಗುಪ್ತವಾಗಿ ಕೆಲಸ ಮಾಡುತ್ತಿರುವಂತಿದೆ. ವಿದ್ಯಾವಂತರೆನಿಸಿಕೊಂಡ ಎಷ್ಟೋ ಮಂದಿ ಗಾಂಧೀಜಿಯವರ ಬಗ್ಗೆ ಹಗುರವಾಗಿ ಮಾತನಾಡುವುದನ್ನು ನಾನು ಕೇಳಿದ್ದೇನೆ. ಇವರು ಗಾಂಧೀಜಿಯವರ ಬಗ್ಗೆ ಸ್ವತಃ ಅಧ್ಯಯನ ಮಾಡಿಲ್ಲ. ಇವರ ಅಭಿಪ್ರಾಯಗಳು ಗಾಳಿ ಸುದ್ದಿಯನ್ನು ಆಧರಿಸಿದ ಅರೆಬರೆ ವಿಷಯಗಳು ಮಾತ್ರ.

ಈ ಸಂಚಿಕೆಯಲ್ಲಿ ಮೇಲ್ಕಂಡ ಪತ್ರ ಪ್ರಕಟವಾಗಿರದಿದ್ದರೆ, ಬಿಹಾರದ ಭೂಕಂಪದ ಕುರಿತು ಗಾಂಧೀಜಿಯವರ ಹೇಳಿಕೆಯಿಂದ, ನನಗೆ ಗಾಂಧೀಜಿಯ ಬಗ್ಗೆ ಅಷ್ಟರ ಮಟ್ಟಿನ ಗೌರವ ಕಡಿಮೆ ಇತ್ತು ಎಂಬುದನ್ನು ನಾನು ಪ್ರಾಮಾಣಿಕವಾಗಿ ಒಪ್ಪುತ್ತೇನೆ. ಈ ಸಂದರ್ಭದಲ್ಲಿ ಗಾಂಧೀಜಿಯವರ ಆ ಹೇಳಿಕೆಯ ಹಿಂದೆ ಅವರಿಗಿರುವ ಕಳಕಳಿಯನ್ನು ನಾವು ಸರಿಯಾಗಿ ಅರ್ಥಮಾಡಿಕೊಳ್ಳದೆ ಗಾಂಧೀಜಿಯವರನ್ನು ಟೀಕಿಸುವ ಮಟ್ಟಕ್ಕೆ ಹೋಗುತ್ತೇವೆ. ಮಹಾತ್ಮರ ಒಂದೊಂದು ನಡೆ ನುಡಿ ಭಾವ ಭಂಗಿಯಲ್ಲೂ ಅರ್ಥವನ್ನು ಕಾಣದೆ ನಾವು ಮೂರ್ಖರಂತೆ ನಡೆದುಕೊಳ್ಳುತ್ತೇವೆ.

ರವೀಂದ್ರರು ಗಾಂಧೀಜಿಯವರ ಹೇಳಿಕೆಯನ್ನು ವಿರೋಧಿಸಿದರೂ ತಕ್ಷಣವೇ ಗಾಂಧೀಜಿಯವರ ಒಟ್ಟಾರೆ ವ್ಯಕ್ತಿತ್ವದ ಹಿನ್ನೆಲೆಯಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯ ಆ ಮೇರು ವ್ಯಕ್ತಿತ್ವಗಳೆರಡಕ್ಕೂ ಹಿಡಿದ ಕನ್ನಡಿ.

ಗಾಂಧೀಜಿಯವರ ಬಗ್ಗೆ ಬಹಳಷ್ಟು ಜನರಿಗೆ ಅಸಹನೆ ಇರುವುದಕ್ಕೆ ಪ್ರಮುಖ ಕಾರಣಗಳೆಂದರೆ:

(ಅ) ಗಾಂಧೀಜಿಯವರು ಒಂದು ಕಾಲದಲ್ಲಿ ವರ್ಣಾಶ್ರಮ ಧರ್ಮವನ್ನು ಸಮರ್ಥಿಸಿದರೆಂಬುದು,
(ಆ) ತನ್ನ ಮಕ್ಕಳನ್ನು ಸರಿಯಾಗಿ ಪೋಷಿಸಲಿಲ್ಲವೆಂಬುದು,
(ಇ) ನಮ್ಮಂತೆ ಗಾಂಧೀಜಿಯವರು ಅನ್ಯಧರ್ಮೀಯರನ್ನು ದ್ವೇಷಿಸಲಿಲ್ಲವೆಂಬುದು.

ನಾವು ಅಂದುಕೊಂಡಂತೆ ಗಾಂಧೀಜಿಯವರು ನಡೆದುಕೊಂಡಿದ್ದರೆ, ಅವರು ರಾಷ್ಟ್ರಪಿತರೂ ಆಗುತ್ತಿರಲಿಲ್ಲ, ಮಹಾತ್ಮರೂ ಆಗುತ್ತಿರಲಿಲ್ಲ, ವಿಶ್ವಮಾನ್ಯರೂ ಆಗುತ್ತಿರಲಿಲ್ಲ ಹಾಗೂ ಅವರ ಹತ್ಯೆಯ ಸಂದರ್ಭದಲ್ಲಿ ಇಡೀ ವಿಶ್ವವೇ ಶೋಕಿಸುತ್ತಲೂ ಇರಲಿಲ್ಲ.

ಬೆಂಗಳೂರು — *ಸಿ. ಚಿಕ್ಕತಿಮ್ಮಯ್ಯ, ಹಂದನಕೆರೆ*

### ಆಗಸ್ಟ್ ಸಂಚಿಕೆ

ನೆಮ್ಮದಿಯಿಂದ ಬದುಕು ಮುಂದುವರಿಸುವ ಆಸರೆಯ ಭರವಸೆಯ ನಿರೀಕ್ಷಾ ಸಂದರ್ಭದಲ್ಲಿಯೇ – ವಿನಾಕರಣ ಒದಗಿಬಂದ (ಸಿಂಹಳದ) ನಿರ್ಗತಿಕ ದೀನ ಜನ ತಮಿಳರ ಬವಣೆಯ ಕಥೆ ಹೇಳುವ ಅರ್ಥವತ್ತಾದ ಮುಖ ಚಿತ್ರಹೊಂದಿಕೆಯಿಂದ ಹೊರಟು ಆಗಸ್ಟ್ ಸಂಚಿಕೆ ಸ್ವಾತಂತ್ರ್ಯೋತ್ಸವ ಆಚರಣಾ ಮಾಸದ ನೈಜಚಿತ್ರಣ ಸಮೀಕರಣಕ್ಕೆ ಸಾಥಿ ಎನ್ನಿಸಿ ಸ್ವರ ಭಾರ ಏರಿಸಿಕೊಂಡಿತು.

ಒಂದಿಗೇ ಸಂಪಾದಕೀಯದಲ್ಲಿ ಮುನ್ನುಗ್ಗಿದ ಸ್ವಾತಂತ್ರ್ಯಕ್ಕೆ ಒದಗಿಬಂದಿರುವ ಸವಾಲುಗಳೊ ? ಕೇಂದ್ರ ಸಂಪುಟ ಪುನರ್‌ರಚನೆ ಎಂಬ ಪ್ರಹಸನ ಹಾಗೂ ಕ್ರೀಡೆಯಲ್ಲಿ ಮದ್ದು ಎನ್ನುತ್ತಲೇ ಅಕ್ಷರದ ಆಕರದಲ್ಲಿ ಒಂದೊಂದಾಗಿ ಮುಂದುವರಿಸಿ ವಿವರಿಸಿದ ಕೆ. ಎಸ್. ಪಾರ್ಥಸಾರಥಿ, ಎಸ್. ಸುರೇಂದ್ರ ಹಾಗೂ ಜಿ. ರಾಮಕೃಷ್ಣರ ಹೇಳಿಕೆಯ ದಾಖಲೆಗಳು ಪತ್ರಿಕೆಯ ಘನತೆಯನ್ನು ಎತ್ತಿಹಿಡಿದವು. ಅಭಿನಂದನೆಗಳು.

ಕಾಸರಗೋಡು — *ಕೀರಿಕ್ಕಾಡು ವನಮಾಲ ಕೇಶವ ಭಟ್ಟ*

''ನಮ್ಮ ಸ್ವಾತಂತ್ರ್ಯಕ್ಕೆ ಒದಗಿಬಂದಿರುವ ಸವಾಲುಗಳು'' ಲೇಖನದ ೫ನೇ ಪ್ಯಾರಾದಲ್ಲಿ ಬರುವ ''ಚೆಲುವನ್ನು ಒಗ್ಗೂಡಿಸುವ ಪ್ರಯತ್ನಗಳನ್ನು ಮೂಲೆಗುಂಪಾಗಿಸುವ ಮಾನವ ಸಮಸ್ಯೆಗಳು ಲೆಕ್ಕವಿಲ್ಲದಷ್ಟು ಇವೆ'' ಈ ಮಾತುಗಳನ್ನು ಮುಂದುವರೆಯುತ್ತ ಅವನ ಧರ್ಮೀಯರ ನಡುವೆಯೂ ಒಗ್ಗಟ್ಟು ಸಾಧಿಸಲಾಗಿಲ್ಲ... ಹಿಂದೂ ಸಮಾಜದೊಳಗಿನ ವೈವಿಧ್ಯತೆಗಳ ಧನಾತ್ಮಕ ಮೌಲ್ಯವನ್ನು ಹಾಳುಗೆಡವಿ ಅದು ಮತೀಯ ಒಡಕಿನ ಅಂಗಾರವಾಗಿದೆ. ಈ ಒಡೆದ ಸಮಾಜದಲ್ಲಿ ತಮ್ಮ ಮಾನವೀಯ ಹಕ್ಕುಗಳಿಗಾಗಿ ನಮ್ಮ ದಲಿತ ಬಾಂಧವರು ವಿದೇಶ ಸೆನೆಟ್ಟುಗಳಿಗೆ, ವಿಶ್ವಸಂಸ್ಥೆಗೆ ಮನವಿ ಸಲ್ಲಿಸುವ ಮಟ್ಟಕ್ಕೆ ಅವರನ್ನು ದೂಡಲು ಮತಾಂಧ ಶಕ್ತಿಗಳು ಮುಂದಾಗಿವೆ ಎನ್ನುವುದು ಅರ್ಥಪೂರ್ಣ. ಆದರೆ ಇದಕ್ಕೆ ಕಾರಣಕರ್ತರಾರು ? ರಾಜಕೀಯ ಪಕ್ಷಗಳೇ ? ಸಮಾಜವೇ ? ಹುಡುಕಬೇಕು.

ಎರಡನೆಯದಾಗಿ ಭ್ರಷ್ಟಾಚಾರದ ಬಗೆಗೂ ಬಹಳ ಅರ್ಥಪೂರ್ಣವಾಗಿ ಬರೆದಿರುವಿರಿ. ಭ್ರಷ್ಟಾಚಾರ ಕೇವಲ ಸರಕಾರದ ಕಾರ್ಯಕ್ರಮದಲ್ಲಿ ಇಲ್ಲ, ನಿತ್ಯ ವ್ಯಾವಹಾರಿಕ ಜೀವನದಲ್ಲೂ ಭ್ರಷ್ಟಾಚಾರ ತುಂಬಿಕೊಂಡಿದೆ. ಚಿಲ್ಲರೆ ನಾಣ್ಯಗಳ ಕೊರತೆಯಿಂದ ಬಸ್ಸುಗಳಲ್ಲಿ ಗದ್ದಲ; ಅಂಗಡಿಗಳಲ್ಲಿ ಅನಾಚಾರ. ಒಂದೇ ಎರಡೇ ?

ನಮ್ಮ ದೇಶದಲ್ಲಿ ಕಾನೂನಿನ ಸುವ್ಯವಸ್ಥೆಯೇ ಇಲ್ಲ. ಕೊಲೆಗಡುಕರು, ದೇಶದ್ರೋಹಿಗಳು ನಿರಾತಂಕವಾಗಿ ಕಾರಾಗೃಹದಲ್ಲಿ ಅರಮನೆಯ ಸುಖ ಉಣ್ಣುತ್ತಿದ್ದಾರೆ. ಇದು ನಮ್ಮ ಸರಕಾರದ ಹೇಡಿತನದ ಲಕ್ಷಣ ಅಲ್ಲವೆ ?

ರಾಜಕೀಯ ಕ್ರಾಂತಿ ಆಗಬೇಕು. ಜನ ಬಂಡೇಳಬೇಕು. ದೇಶಭಕ್ತಿಯ ಪ್ರೇರಣೆ ಮುಖಂಡರಿಂದ ಬರಬೇಕು ಅದಕ್ಕೆ ಒಬ್ಬ ಅಣ್ಣಾ ಹಜಾರೆ ಸಾಲದು. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಜನತೆಯನ್ನು ಎಚ್ಚರಿಸುವ ನಾಯಕನ ಅಗತ್ಯ ಇಂದು ಇದೆ.

ಬೆಳಗಾವಿ — *ಪಿ. ವಿಜಯಕುಮಾರ್*

ವಸಂತ ಬನ್ನಾಡಿ ಇವರು ಬರೆದಿರುವ ನನ್ನೊಳಗಿನ ಮಳೆಯೇ ಈ ಕವಿತೆಯಲ್ಲಿ ''ಎಲ್ಲ ಮೌನವನು ಎಲ್ಲ ಬೆಳಕನು ಕತ್ತರಿಸಿ'' ಇತ್ಯಾದಿ ಸಾಲುಗಳು ಸೊಗಸಾಗಿ ಮೂಡಿಬಂದಿವೆ. ಮನಸ್ಸಿಗೆ ಮುದನೀಡಿದವು. ಹೊಸ ಯುವಜನತೆಗೆ ಹೊಸದಾದ ಆಲೋಚನೆಗಳು ಗಮನಾರ್ಹವಾಗಿವೆ ಎನ್ನುವುದಕ್ಕೆ ಸಾಕ್ಷಿಯಾಗಿದೆ.

ಜಮಖಂಡಿ — *ಶ್ರೀಧರ ಬಿರಾದಾರ*

ಬೆಂಗಳೂರಿನಲ್ಲಿ ನೂರಕ್ಕೂ ಹೆಚ್ಚಾಗಿರುವ ಸಿದ್ಧ ಉಡುಪು ಕಾರ್ಖಾನೆಗಳಲ್ಲಿ ಮಹಿಳೆಯರು ಮತ್ತು ಪುರುಷರು ಸೇರಿ ೫ ಲಕ್ಷ ಜನ ಕೆಲಸ ಮಾಡುತ್ತಿರುವರು. ಇವರೆಲ್ಲರಿಗೂ ರಾಜ್ಯ ಸರ್ಕಾರವು ಸಿದ್ಧ ಉಡುಪು ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಿರುವ ಕಾರ್ಮಿಕರಿಗೆ ಕನಿಷ್ಠ ವೇತನ ಪ್ರಕಟಿಸದೆ ನಿರಾಕರಿಸಿದ್ದು ಕಾರ್ಮಿಕ ಇಲಾಖೆ ಮತ್ತು ಕನಿಷ್ಠ ವೇತನ ಸಲಹಾ ಮಂಡಳಿಯು ಮಾಲೀಕರ ಪರವಾಗಿರುವುದನ್ನು ಸಾಬೀತುಪಡಿಸಿಕೊಂಡಿವೆ. ಸರ್ಕಾರದ ಅಧಿಸೂಚನೆಯಂತೆ ನೌಕರರಿಗೆ ೩೮೦೦-೭೦ ಪೈಸೆ ೨೬ ದಿನಗಳಿಗೆ ಕೂಲಿ ನೀಡಬೇಕಾಗಿರುತ್ತದೆ. ಆದರೆ ಕಾರ್ಮಿಕರ ಕುರಿತು ಆಡಳಿತವು ಕಾರ್ಮಿಕರಿಗೆ ವೇತನ ಚೀಟಿ ನೀಡಿಲ್ಲ, ಮೇಲಾಗಿ ಕರ್ನಾಟಕ ಕನಿಷ್ಠ ವೇತನಗಳ ನಿಯಮಾವಳಿ ೧೯೫೮ ನಿಯಮ ೨೯ರನ್ವಯ ಕಾರ್ಮಿಕರ ಕುರಿತು ದಾಖಲೆಗಳನ್ನು ಇಟ್ಟಿಲ್ಲ, ಬೆಂಗಳೂರಿನ ಸಂಬಂಧಿಸಿದ ಕಾರ್ಮಿಕ ನಿರೀಕ್ಷಕರು, ಕಾರ್ಮಿಕ ಅಧಿಕಾರಿ ಮತ್ತು ಇತರ ಅಧಿಕಾರಿಗಳು ಯಾವುದೇ ಕಾರ್ಖಾನೆಗೆ ಭೇಟಿ ನೀಡಿಲ್ಲ. ಮಹಿಳಾ ಕಾರ್ಮಿಕರನ್ನು ಬೈಯುವುದು, ಲೈಂಗಿಕ ಕಿರುಕುಳದ ಶೋಷಣೆ ನಡೆದಿದೆ. ಇದನ್ನು ತಡೆಯುವುದು ಯಾರಿಂದಲೂ ಸಾಧ್ಯವಾಗಿಲ್ಲ. ಈ ಹಿಂದೆ ಕಾರ್ಮಿಕ ಸಂಘವನ್ನು ರಚಿಸಲು ಹೋರಾಟ ಮಾಡಿದ ಮಹಿಳಾ ಕಾರ್ಮಿಕರನ್ನು ಕೆಲಸದಿಂದ ಅಕ್ರಮವಾಗಿ ವಜಾ ಮಾಡಲಾಗಿದೆ. ವಜಾ ವಿರೋಧಿ ಕ್ರಮವನ್ನು ಯಾರೂ ತಡೆದೇ ಇಲ್ಲ. ನಾವು ಪ್ರಜಾಪ್ರಭುತ್ವದಲ್ಲಿದ್ದೇವೋ ಅಥವಾ ಸರ್ವಾಧಿಕಾರದಡಿಯಲ್ಲಿ ಇದ್ದೇವೋ ಎನ್ನುವ ಅಂಶವನ್ನು ಪ್ರಬುದ್ಧರಾದ ಬೆಂಗಳೂರಿನ ಜನರು ನಿರ್ಣಯಿಸಬೇಕಾಗಿದೆ.

ರಾಯಚೂರು — *ವಿ. ಹೆಚ್. ಮಾಸ್ತರ್*

### ಅಂಕಿಗಳು

ನಮ್ಮ ಸುತ್ತಲಿನ ವಿದ್ಯಮಾನಗಳು, ನೇರವಾಗಿ ಯೋಚಿಸಿದರೆ, ಅತಿರೇಕಕ್ಕೆ ಹೋಗಿರುವಂತಹ ವಿಚಾರಗಳೇ ಅನ್ನಿಸುತ್ತವೆ. ರಾಜಕಾರಣವಾಗಲಿ, ದೇವರಾಗಲಿ, ಕಾರ್ಪೊರೇಶನ್ ಮತ್ತು ಮುನಿಸಿಪಾಲಿಟಿಗಳಾಗಲಿ ಹಾಗೆಯೇ. ಈ ಪಟ್ಟಿಗೆ ಭಾಷೆಯ ಮೇಲಿನ ಪ್ರೀತಿಯನ್ನು (ಅಥವಾ ಅದರ ತೋರಿಕೆಯನ್ನು) ಕೂಡ ಸೇರಿಸಬಹುದು. ವಾಹನಗಳ ನಂಬರ್ ಪ್ಲೇಟಿನಲ್ಲಿ ಕನ್ನಡವನ್ನೇ ಬರೆಯಬೇಕು ಎಂದು ಒತ್ತಾಯಿಸುವವರನ್ನು ನೋಡಿದಾಗ ಹಾಗೆನಿಸುತ್ತೆ. ದೇಶವನ್ನು, ಪ್ರಪಂಚವನ್ನು ಒಂದು ಮಾಡುವಲ್ಲಿ ನಂಬರುಗಳು (ಅಥವಾ ಅವುಗಳ ಅಂಕಿಗಳು) ಒಂದು ಒಳ್ಳೆಯ ಕೆಲಸವನ್ನು ಮಾಡುತ್ತವೆಯೆಂದರೆ ತಪ್ಪಿಲ್ಲವೇನೋ. ಪ್ರಪಂಚವೇ ಆಚರಿಸುತ್ತಿರುವ ''ಸಂಡೆ ಹಾಲಿಡೆ''ಗೆ ಈಗಾಗಲೆ ಸಂಸ್ಕೃತ ವಿಶ್ವವಿದ್ಯಾನಿಲಯವೆಂಬ ಒಂಟೆ ತಲೆತೂರಿಸಿದೆ. ಮುಂದಿನ ವರ್ಷಗಳಲ್ಲಿ ಬಸವಣ್ಣನವಾರವೆಂದು ಸೋಮವಾರಕ್ಕೂ, ಶನಿಮಹಾತ್ಮನ ವಾರವೆಂದು ಶನಿವಾರಕ್ಕೂ ವಿವಿಧ ಕೋಮುಗಳು ರಜಕ್ಕೆ ಬೇಡಿಕೆ ಸಲ್ಲಿಸಬಹುದು.

ಮಹಮ್ಮದೀಯರ ದೇಶ ಅಬುಧಭಿಯಲ್ಲಿ ವಾಹನಗಳ ಪ್ಲೇಟುಗಳ ಮೇಲೆ ಇಂಗ್ಲಿಷರು ಬಳಸುವ ನಂಬರುಗಳು ಮತ್ತು 'ಅವರ ಅರೇಬಿಕ್ ನಂಬರುಗಳು' ರಾರಾಜಿಸುತ್ತವೆ. ಅದನ್ನು ಕಂಡು ಇದೇನು ವಿಪರೀತವೆಂದು ಅಂದುಕೊಂಡಿದ್ದೆ, ಆದರೆ ನಾವೇನು ಕಡಿಮೆಯಲ್ಲವೆಂದು ಇತ್ತೀಚೆಗೆ ಅನ್ನಿಸುತ್ತಿದೆ. ಅಂಕಿಗಳೂ ಬಂದ ರೀತಿ ಆಸಕ್ತಿಯದು. ಅವು ಕೋನಗಳನ್ನು ಆಧರಿಸಿದ್ದವಂತೆ. ಅದು ನಿಜವಾದರೆ, ಅವುಗಳ ಉಪಯೋಗಕ್ಕೆ ಈ ತರ್ಕ ಹೊಂದಿಕೊಂಡರೆ ಸಾಕಲ್ಲವೆ. ಪಂಡಿತಾರಾಧ್ಯರು ಏನೇ ಹೇಳಲಿ ನಾವು ಕನ್ನಡದ ಆಲದಮರದ ಹತ್ತಿ ಹೋಗಲೇಬೇಕೆಂದೇನಿಲ್ಲ.

ನಿಜವೆಂದರೆ ನಾವು ಸಾಮಾನ್ಯವಾಗಿ ಬಳಸುವ ಅಂಕಿಗಳಿಗೆ ಇಂಡೋ ಅರೆಬಿಕ್ ಅಥವಾ ಅರೇಬಿಕ್ ಅನ್ನುತ್ತೇವೆ. ಅರಬ್ಬರು ಅವರದೇ ಆದ ಆದರೆ ಬಳಕೆಯಿಂದ ಬದಲಾದ ನಂಬರುಗಳನ್ನು ಬಳಸುವುದನ್ನು ಕಂಡು ನನಗೆ ವಿಚಿತ್ರವೆನಿಸಿತ್ತು. ಪ್ರಪಂಚವೇ ಬಳಸುವ ಅರೆಬಿಕ್ ಅನ್ನುವ ನಂಬರುಗಳನ್ನು ಅವರು ಬಳಸುವಲ್ಲಿ ಹೆಮ್ಮೆ ಇರಬೇಕಿತ್ತು. ಬಹಳ ಹಿಂದೆ ನಮ್ಮದೇ ಅಂಕಿಗಳ ವಿಚಾರವನ್ನು ಅರಬ್ಬರು ವ್ಯಾಪಾರದ ಜತೆ ಕೊಂಡೊಯ್ದಿದ್ದರಂತೆ. ಆದ್ದರಿಂದ ಅದು ಇಂಡೋ-ಅರೆಬಿಕ್. ಪ್ರಪಂಚವೇ ಬಳಸುವ ನಮ್ಮ ಅಂಕಿಗಳ ಬಗ್ಗೆ ನಮ್ಮೊಳಗಿನ ಈ ಅಭಿಪ್ರಾಯಗಳು ಅತಿರೇಕ ಅನ್ನಿಸುವುದಲ್ಲವೆ ? ಅಥವಾ ಈ ಅಂಕಿಗಳು ಈ ಆರ್ಯರು ಬಳಸುವಂತಹವು, ಆದ್ದರಿಂದ ನಾವು ದ್ರಾವಿಡರು ಬೇರೆಯದೇ ಆದವನ್ನು ಬಳಸೋಣವೆಂದರೆ, ಆಗಲೂ ಕನ್ನಡಿಗರು ತಮ್ಮ 'ಅಂಕಿತನವನ್ನು' ತೊರೆಯಬೇಕಾಗುತ್ತದೆ !

ಬೆಂಗಳೂರು — *ಡಾ|| ಜಿ. ಪುರುಷೋತ್ತಮ*

# ನಾರ್ವೆಯ ಹತ್ಯಾಕಾಂಡ – ಭಾರತಕ್ಕೆ ಕೆಲವು ಪಾಠಗಳು

**ಸ್ಕ್ಯಾಂ**ಡಿನೇವಿಯಾ ಪರ್ಯಾಯ ದ್ವೀಪದ ಪಶ್ಚಿಮಕ್ಕೆ, ಯೂರೋಪು ಖಂಡದ ಉತ್ತರ ಭಾಗದಲ್ಲಿರುವ ಪುಟ್ಟ ದೇಶ ನಾರ್ವೆ (ವಿಸ್ತೀರ್ಣ ೩,೨೩,೯೦೦ ಚ.ಕಿ.ಮೀ.); ಜನಸಂಖ್ಯೆ ೪,೨೮,೬೦೦ (ಇಸವಿ ೨೦೦೦ದಲ್ಲಿ ಲಭ್ಯ ಮಾಹಿತಿಯ ಪ್ರಕಾರ). ಇವರಲ್ಲಿ ಶೇಕಡ ೯೪ರಷ್ಟು ಇವ್ಯಾಂಜೆಲಿಕಲ್ ಲೂಥರನ್ ಕ್ರಿಶ್ಚಿಯನ್ನರು. ಅಧಿಕೃತ ಭಾಷೆ, ನಾರ್ವೇಜಿಯನ್. ಆರ್ಥಿಕವಾಗಿ ಮುಂದುವರಿದ ನಾರ್ವೆದೇಶಕ್ಕೆ ಇರಾಕ್, ಪಾಕೀಸ್ತಾನ, ಸೋಮಾಲಿಯಾ ಮೊದಲಾದ ದೇಶಗಳಿಂದ ಜನರು ವಲಸೆ ಬಂದು ನೆಲೆಸಿದ್ದಾರೆ. ಕಳೆದ ಒಂದು ದಶಕದಲ್ಲಿ ವಲಸೆ ಬಂದವರಲ್ಲಿ ಮುಸಲ್ಮಾನರೇ ಹೆಚ್ಚು. ನಾರ್ವೆ ಯೂರೋಪಿನಲ್ಲಿದ್ದರೂ ಐರೋಪ್ಯ ಒಕ್ಕೂಟದ ಭಾಗವಾಗಿಲ್ಲ, ಅಮೆರಿಕದಂತೆ ಬಂಡವಾಳಶಾಹಿ ಪ್ರಾಬಲ್ಯಕ್ಕೂ ವಶವಾಗಿಲ್ಲ. ಖಾಸಗಿ ಮತ್ತು ಸಾರ್ವಜನಿಕ ಬಂಡವಾಳ ಹೂಡಿಕೆಯ ಮೂಲಕ, ಮಿಶ್ರ ಆರ್ಥಿಕನೀತಿಯನ್ನು ಅನುಸರಿಸುತ್ತ ಸ್ವತಂತ್ರವಾಗಿ ಉಳಿದು ಅಭಿವೃದ್ಧಿ ಸಾಧಿಸಿದೆ.

ಮೊದಲ ಮಹಾಯುದ್ಧ ಕಾಲದಲ್ಲಿ ತಟಸ್ಥವಾಗಿ ಉಳಿದಿದ್ದ ನಾರ್ವೆದೇಶವು ಎರಡನೆ ಮಹಾಯುದ್ಧ ಕಾಲದಲ್ಲಿ 'ನಾಜಿ'ಗಳ ಆಕ್ರಮಣಕ್ಕೊಳಗಾಯಿತು. ಯುದ್ಧಾನಂತರ ಸ್ವತಂತ್ರಗೊಂಡ ನಾರ್ವೆಯು ವಿಶ್ವದಲ್ಲಿಯೆ ಮಾದರಿ ಎನ್ನುವಂಥ ಪ್ರಜಾಪ್ರಭುತ್ವವನ್ನು ಕಟ್ಟಿಕೊಂಡಿದೆ. ಜನರು ದೇಶದ ಎಲ್ಲ ಸಂಸ್ಕೃತಿಗಳನ್ನೂ, ಮತಧರ್ಮಗಳನ್ನೂ ಗೌರವಿಸುವಂಥ ಬದುಕಿನ ವಿಧಾನವನ್ನು ರೂಪಿಸಿಕೊಂಡಿದ್ದಾರೆ. ಇಂತಿಪ್ಪ ನಾರ್ವೆದೇಶದ ರಾಜಧಾನಿ ಓಸ್ಲೋ (ಅಥವಾ ಆಸ್ಲೋ) ನಗರದ ಪ್ರಧಾನಿಗಳ ನಿವಾಸದ ಹತ್ತಿರವೇ ದುಷ್ಕರ್ಮಿಯೊಬ್ಬನು ಬಾಂಬ್ ಸ್ಫೋಟಿಸಿದಾಗ ೮ ಜನರು ಹತರಾದರು; ಅನಂತರ ಇದೇ ವ್ಯಕ್ತಿ ಉಟೋಯಾ ದ್ವೀಪದಲ್ಲಿ ನಡೆಯುತ್ತಿದ್ದ ಯುವಜನ ಶಿಬಿರದ ಮೇಲೆ ದಾಳಿಯಿಟ್ಟು, ಗುಂಡಿನ ಮಳೆಗರೆದದ್ದರಿಂದ ೬೮ ಜನರು ಹತರಾದರು. ಹೀಗೆ ಹತರಾದವರು ಬಹುತೇಕ 'ಲೇಬರ್ ಪಕ್ಷ'ದ ಸದಸ್ಯರು. ನಾರ್ವೆಯ ಈ ದುರ್ಘಟನೆ ಪ್ರಪಂಚದಾದ್ಯಂತ ಜನರನ್ನು ಆಘಾತಗೊಳಿಸಿದೆ. ಈ ಹತ್ಯಾಕಾಂಡ ನಡೆದಾಗ ಮೊದಲ ಊಹೆ, ಇದು ಮುಸ್ಲಿಂ ಭಯೋತ್ಪಾದಕರ ಕೃತ್ಯ ಇರಬಹುದು ಎಂಬುದಾಗಿತ್ತು. ಇಡೀ ಯೂರೋಪ್ ಮತ್ತು ಭಾರತ ದೇಶಗಳು ಮುಸ್ಲಿಂ ಭಯೋತ್ಪಾದಕರ ದಾಳಿಗೆ ಒಳಗಾಗುತ್ತಿರುವ ಹಿನ್ನೆಲೆಯಲ್ಲಿ ಈ ಊಹೆ ಸಹಜವಾಗಿಯೂ ತೋರಿತು.



ಇಲ್ಲಿ, ನಾರ್ವೆಯ ಭಯೋತ್ಪಾದಕನಿಗೂ ಭಾರತಕ್ಕೂ ಸಂಬಂಧ ಕಲ್ಪಿಸುವ ಒಂದು ಕುತೂಹಲದ ವಿಚಾರವನ್ನು ಪ್ರಸ್ತಾಪಿಸಬೇಕು; ಒಂದು ವರ್ಷದ ಹಿಂದೆ ವಾರಣಾಸಿಯ ಅಸ್ಲಾಂ ಅನ್ಸಾರಿಯೆಂಬ ಉಬ್ಬು ಕೆತ್ತನೆ ವಿನ್ಯಾಸಕಾರನು ಅಂತರ್ಜಾಲದ ಮೂಲಕ ಬಂದ ಬೇಡಿಕೆಗೆ ಅನುಗುಣವಾಗಿ ತಲೆಬುರುಡೆ ಮತ್ತು ಕಠಾರಿಯ ಉಬ್ಬು ಚಿತ್ರವನ್ನು ತಯಾರಿಸಿ 'ಕೊರಿಯರ್ ಸರ್ವಿಸ್' ಮೂಲಕ ನಾರ್ವೆ ದೇಶಕ್ಕೆ ಕಳಿಸಿಕೊಟ್ಟಿದ್ದ. ಇಂಥ ಸಂಕೇತ ಚಿನ್ಹೆಯನ್ನು ತಯಾರಿಸಿಕೊಟ್ಟಿದ್ದರಿಂದ ಅನ್ಸಾರಿಗೆ ಅಷ್ಟೇನೂ ಸಂತೋಷವಾಗಿರಲಿಲ್ಲ. ಆದರೂ ತನ್ನ ಕೆಲಸಕ್ಕೆ ಪ್ರತಿಫಲವಾಗಿ ಬಂದ ೧೦,೦೦೦ ರೂಪಾಯಿಗಳನ್ನು ಅವನು ಸದ್ದಿಲ್ಲದೆ ಜೇಬಿಗೆ ಇಳಿಬಿಟ್ಟಿದ್ದ. ಆಮೇಲೆ ಈ ವಿಚಾರವನ್ನು ಮರತೇಬಿಟ್ಟಿದ್ದ ಅನ್ಸಾರಿಗೆ ಕಳೆದವಾರ ದೂರದರ್ಶನದಲ್ಲಿ, ನಾರ್ವೆ ಭಯೋತ್ಪಾದಕನು ಧರಿಸಿದ್ದ ಉಡುಪಿನ ಮೇಲೆ ತಾನು ತಯಾರಿಸಿ ಕಳಿಸಿದ ಸಂಕೇತ ಚಿನ್ಹೆಯನ್ನು ನೋಡಿ ಗಾಬರಿಯಾಯಿತು. ಈ ಹತ್ಯಾಕಾಂಡದ ಆರೋಪದಲ್ಲಿ ತಾನೂ ಸಿಕ್ಕಿ ಹಾಕಿಕೊಳ್ಳುವೆನೇನೋ – ಎಂದು ಭಯವಾಯಿತು. ಮರುದಿನ ಪತ್ರಿಕೆಗಳಲ್ಲಿ ಸದರಿ ನಾರ್ವೇಜಿಯನ್ ಭಯೋತ್ಪಾದಕನು ಆಂಡರ್ಸ್ ಬೇರಿಂಗ್ ಬ್ರೇವಿಕ್ ಎಂಬ ಮುಸ್ಲಿಂ ವಿರೋಧಿ ಮೂಲಭೂತವಾದಿ ಕ್ರಿಶ್ಚಿಯನ್ – ಎಂಬುದನ್ನು ಓದಿದ ಅನ್ಸಾರಿ, ಇತರ ಅನೇಕ ಮುಸಲ್ಮಾನರಂತೆ, ನಿಟ್ಟುಸಿರುಬಿಟ್ಟಿರಬೇಕು.

ಘಟನೆ ನಡೆದ ಸ್ಥಳದಲ್ಲಿಯೆ ಪೊಲೀಸರು ಆಂಡರ್ಸ್ ಬ್ರೇವಿಕ್‌ನನ್ನು ಬಂಧಿಸಿದ್ದರು. ಈ ಘಟನೆಗಳಿಗೆ ತಾನೇ ಕಾರಣನೆಂದು ಆತ ಒಪ್ಪಿಕೊಂಡಿದ್ದ. ಇಂಥ ಭಯಾನಕ ದುಷ್ಕೃತ್ಯ ನಡೆಸಿದವನು ಒಬ್ಬ ಹುಚ್ಚನಿರಬೇಕು ಎಂದು ಜನ ಬ್ರೇವಿಕ್‌ನ ಅಪರಾಧವನ್ನು ಸುಲಭವಾಗಿ ತಳ್ಳಿಹಾಕಲೆತ್ನಿಸಿದರು. ಏಕೆಂದರೆ ನಾರ್ವೆಯಲ್ಲಿ ಇಸ್ಲಾಂ ವಿರೋಧಿಭಾವನೆ ಇಷ್ಟೊಂದು ತೀವ್ರವಾಗಿ ಬೆಳೆಯುತ್ತಿದೆಯೆಂದು ಅವರು ಊಹಿಸಿರಲಿಲ್ಲ. ಈಗಲೂ ಓಸ್ಲೋ ನ್ಯಾಯಾಲಯದಲ್ಲಿ ಬ್ರೇವಿಕ್ ಪರ ವಾದಿಸುತ್ತಿರುವ ಗೇರ್ ಲಿಪ್ಪೆಸ್ಟಾಡ್ ಎನ್ನುವ ವಕೀಲರು ತಮ್ಮ ಕಕ್ಷಿದಾರನು ಒಬ್ಬ ಬುದ್ಧಿಭ್ರಮಣೆಗೊಳಗಾದ ವ್ಯಕ್ತಿ ಎಂದೇ ವಾದಿಸುತ್ತಿದ್ದಾರೆ. ಅವನೊಬ್ಬ ನಿರ್ಭಾವುಕ ಹುಚ್ಚು ಕೊಲೆಗಾರ – ಎಂಬಂಥ ಚಿತ್ರ ಮೂಡಿಸಲೆತ್ನಿಸಿದ್ದಾರೆ. ಪತ್ರಕರ್ತರ ಮುಂದೆಯೂ ಅವರು ಇಂಥದೇ ವಿವರಣೆ ನೀಡಿದ್ದಾರೆ; ಅವನು ಒಂದು ಮಾನಸಿಕ ಸಂಘರ್ಷಕ್ಕೆ ಈಡಾಗಿರುವಂತೆ ಭಾಸವಾಗುತ್ತದೆ. ನೀವು ಇಂಥದೊಂದು ಆಂತರಿಕ ಹೋರಾಟದಲ್ಲಿರುವಾಗ ಅಪರಾಧ ಪ್ರಜ್ಞೆ ಇಲ್ಲದೆ ಎಂಥ ಹೀನ ಕೆಲಸವನ್ನೂ ಮಾಡಬಹುದಲ್ಲವೇ ? – ಎಂದು ಪ್ರಶ್ನಿಸಿದ್ದಾರೆ. ಪ್ರಾಸಿಕ್ಯೂಷನ್‌ನವರು ಒಪ್ಪುವಂಥ ವೈದ್ಯಕೀಯ ತಜ್ಞರಿಂದ ತಮ್ಮ ಕಕ್ಷಿದಾರನು ಬುದ್ಧಿಭ್ರಮಣೆಗೊಳಗಾಗಿರುವ ವ್ಯಕ್ತಿ – ಎನ್ನುವುದು ಸಾಬೀತಾದರೆ ಅವನನ್ನು ಜೈಲಿಗೆ ಹಾಕಿ ಶಿಕ್ಷಿಸಬಾರದೆಂದು ವಾದಿಸಲು ಲಿಪ್‌ಸ್ಟಾಡ್ ವೇದಿಕೆಯನ್ನು ಸಿದ್ಧಪಡಿಸಿಕೊಂಡಿದ್ದಾರೆ. ಬಹುತೇಕ ಪತ್ರಿಕೆಗಳು ಕೂಡ ಬ್ರೇವಿಕ್ ಒಬ್ಬ ಅಸ್ವಸ್ಥ ಚಿತ್ತದ ಒಂಟಿಜೀವಿ; ಮುಸಲ್ಮಾನರನ್ನು ದ್ವೇಷಿಸುವ ಉಗ್ರ ಕ್ರೈಸ್ತ ಮತಾಭಿಮಾನಿ; ಅಂದರೆ ಅವನ ದುಷ್ಕೃತ್ಯವು ವೈಯಕ್ತಿಕವಾದುದು – ಎಂಬ ಭಾವನೆ ಮೂಡಿಸಲೆತ್ನಿಸಿವೆ. ಉದ್ವೇಗದ ನಡವಳಿಕೆಗಳಿಗಾಗಿ ಅವನನ್ನು

■ ಕೆ. ಎಲ್. ಗೋಪಾಲಕೃಷ್ಣಯ್ಯ

ಸಮಾಜದಿಂದ ಬಹಿಷ್ಕರಿಸಲಾಗಿತ್ತು – ಎಂದೆಲ್ಲ ಹೇಳಿವೆ. ಆದರೆ ಬ್ರೇವಿಕ್‌ನ ಜೀವನಕ್ರಮ ಮತ್ತು ಅವನು ಈ ಹತ್ಯಾಕಾಂಡಕ್ಕಾಗಿ ಮಾಡಿಕೊಂಡ ಸಿದ್ಧತೆ ಮೊದಲಾದವುಗಳನ್ನು ಗಮನಿಸಿದರೆ ಈ ದುಷ್ಕೃತ್ಯ ನಡೆಸಿದವನು ಒಬ್ಬ ಹುಚ್ಚನೆನ್ನಲಾಗುವುದಿಲ್ಲ.

ನಾರ್ವೆ ಪೊಲೀಸರ ಪ್ರಕಾರ ಹತ್ಯಾಕಾಂಡಕ್ಕೆ ಮುನ್ನವೇ ಬ್ರೇವಿಕ್ ಯೋಜನೆ ರೂಪಿಸಿಕೊಂಡು ಸಾಕಷ್ಟು ಸಿದ್ಧತೆ ಮಾಡಿಕೊಂಡಿದ್ದಾನೆ. ಸುಮಾರು ೩೨ ವರ್ಷದ ಈ ವ್ಯಕ್ತಿ ತನ್ನನ್ನು ಕೋಟ್ಯಾಧೀಶನನ್ನಾಗಿಸಿದ ಕೃಷಿಭೂಮಿಯನ್ನು ಫಲವತ್ತಾಗಿಸುವ ಸಲುವಾಗಿ ಬಳಸುವ ರಾಸಾಯನಿಕಗಳಿಂದ ತಯಾರಿಸಿದ ಸ್ಫೋಟಕಗಳಿಂದ ಇಡೀ ನಾರ್ವೆ ದೇಶಕ್ಕೇ ಬೆಂಕಿ ಹಚ್ಚಲು ಹವಣಿಸಿದ್ದನಂತೆ !

ಒಂದು ರೀತಿಯಲ್ಲಿ ಬ್ರೇವಿಕ್‌ನ ಕೃತ್ಯವು ನಾರ್ವೆಯಲ್ಲಿ ಬೆಳೆಯುತ್ತಿರುವ ಸಾಮಾಜಿಕ ಬದಲಾವಣೆಯ ಸೂಚಕವಾಗಿದೆ. ಈ ದೇಶದಲ್ಲಿ ಬಹು ಸಂಸ್ಕೃತಿ ವಿರೋಧ, ವಲಸೆ ವಿರೋಧಿ ನೀತಿಗಳು ಕುಡಿಯೊಡೆಯುತ್ತಿವೆ. ಯೂರೋಪಿನ ಫ್ಯಾಸಿಸ್ಟ್ ಪಕ್ಷಗಳಿಗೆ ಈಗ ಚುನಾವಣೆಗಳನ್ನು ನೇರವಾಗಿ ಎದುರಿಸುವ ಸ್ನಾಯುಬಲವಿಲ್ಲ. 'ಸೋವಿಯೆತ್ ಯೂನಿಯನ್'ನ ಪತನವು ವಾಮಪಂಥಗಳಿಗೆ ಮಾತ್ರವಲ್ಲದೆ ಬಲಪಂಥೀಯ ಪಕ್ಷಗಳಲ್ಲಿ ಕೂಡ ಬಿಕ್ಕಟ್ಟಿಗೆ ಕಾರಣವಾಗಿದೆ. ಯೂರೋಪು ದೇಶಗಳಲ್ಲಿ ಸಾಕಷ್ಟು ಜನಾಂಗ ಹಿಂಸಾಚಾರಗಳು ನಡೆಯುತ್ತಿವೆ. ಆದರೆ ಯೂರೋಪ್ ಯೂನಿಯನ್‌ನ ದೇಶಗಳು ಬಲಪಂಥೀಯ ಭಯೋತ್ಪಾದನೆಯ ದಾಖಲೆ ಇಡುವುದಿಲ್ಲ. ಹೀಗಾಗಿ ತಮ್ಮ ದೇಶಗಳಲ್ಲಿ ಭಯೋತ್ಪಾದಕ ದಾಳಿಗಳು ಶೂನ್ಯ ಎಂದೇ ವಾದಿಸುತ್ತಿವೆ. ಮುಖ್ಯವಾಹಿನಿಯಲ್ಲಿದ್ದ ಹಲವು ರಾಜಕೀಯ ಪಕ್ಷಗಳು ಈಗ ಫ್ಯಾಸಿಸ್ಟ್ ಪಕ್ಷದಿಂದ ಸಿಡಿದುಹೋದ ಗುಂಪುಗಳ ಕಡೆ ತಿರುಗಿ ಅಂತರ್ಜಾಲದ ಮೂಲಕ ಅವುಗಳನ್ನು ಸಂಪರ್ಕಿಸುತ್ತಿವೆ. ಬ್ರೇವಿಕ್ ಹಿಂದೆ ಸದಸ್ಯನಾಗಿದ್ದ 'ಪ್ರೋಗ್ರೆಸ್ ಪಾರ್ಟಿ' ಕೂಡ ಅವುಗಳಲ್ಲಿ ಒಂದು. ಈಗ ಅವನು ಆ ಪಕ್ಷದಲ್ಲಿಲ್ಲವಾದರೂ, ವಲಸೆ ವಿರೋಧಿ ನೀತಿಯ ಅವನ ಮನೋಭಾವವು ಮಾತ್ರ ಬದಲಾಗಿಲ್ಲ.

ಆಂಡರ್ಸ್ ಬ್ರೇವಿಕ್ ಗುಪ್ತನಾಮದಲ್ಲಿ ಬರೆದ '೨೦೮೩ : ಯೂರೋಪಿಯನ್ ಸ್ವಾತಂತ್ರ್ಯ ಘೋಷಣೆ' ಎಂಬ ೧೫೦೦ ಪುಟಗಳನ್ನೂ ಮೀರುವ ಗ್ರಂಥದಲ್ಲಿ ಸುಮಾರು ೧೦೦ ಪುಟಗಳು ಭಾರತಕ್ಕೆ ಮೀಸಲಾಗಿವೆಯಂತೆ ! ಹೀಗಾಗಿ 'ಎತ್ತಣ ನಾರ್ವೆ ಎತ್ತಣ ಭಾರತ' ಎಂದು ನಾವು ನಿರಾತಂಕದಿಂದ ಇರುವಂತಿಲ್ಲ. ಬ್ರೇವಿಕ್ ತನ್ನ ಪ್ರಣಾಳಿಕೆಯಲ್ಲಿ ಭಾರತದ ಹಿಂದುತ್ವ ಶಕ್ತಿಗಳು ತನ್ನ ಮಿತ್ರರೆಂದು ಹೇಳಿಕೊಂಡಿದ್ದಾನೆ. ಹಿಂದುತ್ವದ ವೀರಪುರುಷರು ತನ್ನ ಸೈನಿಕರೊಂದಿಗೆ ಹೆಗಲಿಗೆ ಹೆಗಲು ಕೊಟ್ಟು ಹೋರಾಡಬೇಕೆಂದು ಕರೆಕೊಟ್ಟಿದ್ದಾನೆ. ಯೂರೋಪಿನಲ್ಲಿ ಇಸ್ಲಾಂ ಹರಡುವಿಕೆಯನ್ನು ತಡೆಗಟ್ಟುವುದು ಈತನ ಪ್ರಮುಖ ಕರ್ತವ್ಯವಂತೆ. ಸನಾತನ ಹಿಂದೂಧರ್ಮ, ಹಿಂದೂರಾಷ್ಟ್ರ ಸ್ಥಾಪನೆಗಾಗಿ ನಡೆಯುವ ಚಳುವಳಿಗಳನ್ನು ಬ್ರೇವಿಕ್ ಬೆಂಬಲಿಸುತ್ತಾನೆ. ಹೆಚ್ಚಿನ ಮಾಹಿತಿಗಾಗಿ ಬಿ.ಜೆ.ಪಿ., ಆರ್.ಎಸ್.ಎಸ್. ಮತ್ತು ಎ.ಬಿ.ವಿ.ಪಿ. ಜಾಲತಾಣಗಳನ್ನು ನೋಡುವಂತೆ ಸೂಚಿಸಿದ್ದಾನೆ.

ಈಗ ಅಫ್ಘಾನಿಸ್ಥಾನಕ್ಕೆ ಸೇರಿರುವ 'ಹಿಂದೂಖುಷ್' ಪರ್ವತಶ್ರೇಣಿಯ ಬಗೆಗೆ ಈತನಿಗೆ ವಿಶೇಷ ಕಾಳಜಿಯಿದೆ. ಭಾರತ ಸರ್ಕಾರವು ಈ ಹೆಸರನ್ನು ಬದಲಾಯಿಸ ಬೇಕಾಗಿತ್ತೆಂಬುದು ಈತನ ಇರಾದೆ. ಏಕೆಂದರೆ ಕ್ರಿ.ಶ. ಸುಮಾರು ೧೦೦೦ದವರೆಗೆ ಈ ಪರ್ವತ ಪ್ರದೇಶವು ಹಿಂದೂಗಳ ಪ್ರಮುಖ ವಾಸಸ್ಥಾನವಾಗಿತ್ತು. ಅನಂತರ ಈ ಪ್ರದೇಶದ ಮೇಲೆ ದಾಳಿ ಮಾಡಿ ಗೆದ್ದ ಮುಸಲ್ಮಾನರು ಇಲ್ಲಿ ಹಿಂದೂಗಳ ಮಾರಣ ಹೋಮವನ್ನೇ ನಡೆಸಿದ್ದರು. ಪ್ರಾಯಶಃ ಮುಂದಿನ ತಲೆಮಾರುಗಳಿಗೆ ಎಚ್ಚರಿಕೆ ನೀಡುವ ಉದ್ದೇಶದಿಂದ ಈ ಪ್ರದೇಶಕ್ಕೆ ಹಿಂದೂಖುಷ್ ಎಂದರೆ ಹಿಂದೂಗಳನ್ನು ಕೊಲೆಗೈದ ಸ್ಥಳ ಎಂಬ ಹೆಸರಿಟ್ಟಿರಬೇಕು ಎಂದು ಬ್ರೇವಿಕ್ ಅಭಿಪ್ರಾಯಪಡುತ್ತಾನೆ. 'ಹಿಂದೂಖುಷ್' ಎಂಬುದನ್ನು ಬ್ರೇವಿಕ್, ಎರಡನೇ ಮಹಾಯುದ್ಧ ಕಾಲದಲ್ಲಿ ಹಿಟ್ಲರನ ನಾಜೀ ಸೈನಿಕರು ಯಾತನಾ ಶಿಬಿರದಲ್ಲಿ ಸುಮಾರು ೪೦,೦೦೦ದಿಂದ ೬೦,೦೦೦ ಜನ ಯಹೂದಿಗಳನ್ನು, ವಿಷಾನಿಲದಿಂದ ಸಾಯಿಸಿದ, ಪೋಲೆಂಡಿನಲ್ಲಿರುವ ಆಶ್‌ವಿಟ್ಸ್‌ಗೆ ಹೋಲಿಸಿದ್ದಾನೆ. ಹೀಗೆ ಹಿಂದೂಗಳು ಹತ್ಯೆಯಾದ ಸ್ಥಳದ ಹೆಸರನ್ನು ಬದಲಾಯಿಸದೆ ಭಾರತ ಮತ್ತು ಆಫ್ಘನ್ ಸರ್ಕಾರಗಳು ಅದರ ಮೇಲೆ ಸುಣ್ಣ ಬಳಿದು ಕಳಂಕವನ್ನು ಮರೆ ಮಾಡಿದವು ಎಂದು ಬ್ರೇವಿಕ್ ಹೇಳುತ್ತಾನೆ. ಹಿಂದೂ ದೇಶವು ತನ್ನತನವನ್ನು ಬಿಟ್ಟುಕೊಟ್ಟು "ಬಹು ಸಾಂಸ್ಕೃತಿಕ ಭಾರತ ರಾಷ್ಟ್ರ"ವಾದಕ್ಕಾಗಿ ಬ್ರೇವಿಕ್‌ಗೆ ವಿಷಾದವಿದೆ. ತನ್ನ ಅಭಿಪ್ರಾಯವನ್ನು ಸಮರ್ಥಿಸುವುದಕ್ಕಾಗಿ ೧೯೮೨ರ ಎನ್‌ಸಿಇಆರ್‌ಟಿ ನಿರ್ದೇಶನವೊಂದನ್ನು ಉದ್ಧರಿಸಿ, ಇದು ತನ್ನನ್ನು ಉದ್ವಿಗ್ನಗೊಳಿಸಿದ್ದಾಗಿ ಹೇಳಿಕೊಂಡಿದ್ದಾನೆ.

'ಹಿಂದೂಖುಷ್' ಕುರಿತಾಗಿ ಬ್ರೇವಿಕ್‌ನ ಹೇಳಿಕೆಗಳನ್ನು ಸ್ವಕಪೋಲಕಲ್ಪಿತವೆಂದು ತಳ್ಳಿ ಹಾಕುವಂತಿಲ್ಲ. ಏಕೆಂದರೆ ಈತ ತನ್ನ ಪ್ರಣಾಳಿಕೆಯಲ್ಲಿ ಆರ್.ಎಸ್.ಎಸ್. ಪ್ರಮುಖರಲ್ಲೊಬ್ಬರಾದ ಶ್ರೀನಂದನ್ ವ್ಯಾಸ್ ಎಂಬುವರು ಬರೆದ ಪತ್ರವೊಂದರಿಂದ ಹಲವು ವಾಕ್ಯಗಳನ್ನು ಉದ್ಧರಿಸಿದ್ದಾನೆ. ವ್ಯಾಸ್ ಅವರು ಕೂಡ 'ಹಿಂದೂ ಖುಷ್' ಎಂಬುದನ್ನು 'ಹಿಂದೂಗಳ ಕೊಲೆಯಾದ ಸ್ಥಳ' ಎಂದೇ ಅರ್ಥೈಸುತ್ತಾರೆ. ತಮ್ಮ ಅಭಿಪ್ರಾಯವನ್ನು ಸಮರ್ಥಿಸುವುದಕ್ಕಾಗಿ ಇವರು ಬ್ರಿಟಾನಿಯಾ ವಿಶ್ವಕೋಶ, ದಿ ನ್ಯಾಷನಲ್ ಜಿಯೋಗ್ರಾಫಿಕಲ್ ಮ್ಯಾಗಜೈನ್ ಮತ್ತು ದಿ ಸ್ಟಾಂಡರ್ಡ್ ಹಿಸ್ಟರಿ ಆಫ್ ದಿ ವರ್ಲ್ಡ್ ಮೊದಲಾದ ಗ್ರಂಥಗಳನ್ನು ಹೆಸರಿಸಿದ್ದಾರೆ.

ಆಂಡ್ರೆಸ್ ಬ್ರೇವಿಕ್‌ನ ದಾಳಿಯ ಕೇಂದ್ರ ಗುರಿ 'ಸಾಂಸ್ಕೃತಿಕ-ಮಾರ್ಕ್ಸ್‌ವಾದ'ವನ್ನು ನಾಶ ಮಾಡುವುದು. ಏಕೆಂದರೆ, ಬಹುಸಂಸ್ಕೃತಿಗಳನ್ನು ಒಪ್ಪಿಕೊಳ್ಳುವ ಸಾಂಸ್ಕೃತಿಕ ಮಾರ್ಕ್ಸ್‌ವಾದವು ಕ್ರಿಶ್ಚಿಯಾನಿಟಿಗೆ ವಿರೋಧಿಯಾದುದು; ಕ್ರೈಸ್ತಧರ್ಮ, ನಂಬಿಕೆ ಮೊದಲಾದವುಗಳನ್ನು ಅದು ಒಪ್ಪುವುದಿಲ್ಲ. ಸನಾತನ ಧರ್ಮವನ್ನು ಪ್ರೋತ್ಸಾಹಿಸುವುದಿಲ್ಲ. ಆದ್ದರಿಂದ ಅದರ ವಿರುದ್ಧ ಹೋರಾಡುವುದು ತನ್ನ ಪರಮ ಕರ್ತವ್ಯ – ಎಂದು ಬ್ರೇವಿಕ್ ಸೆಪ್ಟೆಂಬರ್ ೨೦೦೯ರಲ್ಲಿ ತನ್ನ ಜಾಲತಾಣದಲ್ಲಿ ಬರೆದುಕೊಂಡಿದ್ದಾನೆ.

ಬಹುಸಂಸ್ಕೃತಿಗಳನ್ನು ಗೌರವಿಸುವ ಕಾರಣದಿಂದ ಸಾಂಸ್ಕೃತಿಕ ಮಾರ್ಕ್ಸ್‌ವಾದವು

**ಕೆ**ಲವು ಹೂವುಗಳು
ಮಲ್ಲಿಗೆ-ಜಾಜಿಯಂಥವು
ಮೊಗ್ಗಿನಲ್ಲಿ ಕಿತ್ತರೂ
ನಿಧಾನದಲ್ಲಿ ಅರಳಿ
ಪರಿಮಳ ಚೆಲ್ಲುತ್ತವೆ
ಮಾಲೆಯಾಗುತ್ತವೆ

ಇನ್ನು ಕೆಲವು ಹೂಗಳು
ಸುಗಂಧಿ-ಸಂಪಿಗೆಯಂಥವು
ತಮ್ಮ ಮೊಗ್ಗಿನ ಸ್ಥಾನ
ಗಿಡ-ಮರಗಳಲ್ಲೇ ಅರಳಬೇಕು
ದುಡುಕಿ ಮೊಗ್ಗಲ್ಲೇ ಕಿತ್ತಿರೆಂದಿಟ್ಟುಕೊಳ್ಳಿ
ಅಷ್ಟಗಲ ದಳದಳ ಅರಳುವ
ಪರಮ ಸೌಂದರ್ಯವೂ ಇಲ್ಲ
ಪರಿಮಳವೂ ಇಲ್ಲ
ಕಿತ್ತ ಕ್ಷಣವೇ ಅರಳುವ ಮುನ್ನವೇ
ಅಸು ನೀಗುತ್ತವೆ

ವ್ಯತ್ಯಾಸ ತಿಳಿಯದಿದ್ದರೆ
ಕೆಲವು ಹೂಗಳ ನಗುವನ್ನು
ನಾವು ನಂದಿಸಿಬಿಡುತ್ತೇವೆ

**ಜ್ಯೋತಿ ಗುರುಪ್ರಸಾದ್**
'ಕಾವೇರಿ' ತೆಳ್ಳಾರು ರಸ್ತೆ
೧೬ನೇ ತಿರುವು
ಕಾರ್ಕಳ - ೫೭೪೧೦೪



ಕ್ರಿಶ್ಚಿಯಾನಿಟಿಯ ಅನನ್ಯತೆಯನ್ನು ಹಾಳುಮಾಡಿದೆ. ಕ್ರೈಸ್ತ ಯುವಕರಿಗೆ ಅತಿ ತಾಳ್ಮೆಯ ಅಭ್ಯಾಸ ಮಾಡಿಸಿದೆ; ಹೀಗಾಗಿ ಯುವಕರು ತಮ್ಮ ಗಂಡಸುತನವನ್ನೆ ಕಳೆದುಕೊಂಡು ಹೆಣ್ಣಿಪ್ಪಿಗಳಂತಾಗಿದ್ದಾರೆ. ಇದಕ್ಕೆ ವಿರುದ್ಧವಾಗಿ ಮುಸ್ಲಿಂ ಯುವಕರು ತಮ್ಮ ಮತಧರ್ಮ, ಪ್ರಾಚೀನ ಸಂಪ್ರದಾಯಗಳಲ್ಲಿ ನಂಬಿಕೆ ಬೆಳೆಸಿಕೊಂಡಿದ್ದಾರೆ. ತಮ್ಮ ಸಂಸ್ಕೃತಿ ಮತ್ತು ಧಾರ್ಮಿಕ ಮೌಲ್ಯಗಳನ್ನು ಪಾಲಿಸುತ್ತಾರೆ. ಹೀಗೆನ್ನುವ ಬ್ರೇವಿಕ್ ಪ್ರಕಾರ ಸಾಂಸ್ಕೃತಿಕ-ಮಾರ್ಕ್ಸ್‌ವಾದ ವೆನ್ನುವುದು ಯಹೂದ್ಯರನ್ನು ದ್ವೇಷಿಸುವ ನಾಜಿಸಂ, ವೈಯಕ್ತಿಕತೆಯನ್ನು ವಿರೋಧಿಸುವ ಕಮ್ಯೂನಿಜಂ, ಕಾಫೀರರನ್ನು ದ್ವೇಷಿಸುವ ಇಸ್ಲಾಂನಂಥ ದ್ವೇಷಪೂರಿತ ಸಿದ್ಧಾಂತಗಳಿಗೆ ಸಮಾನವಾಗಿದೆ!

ಕಳೆದ ೧೫ ವರ್ಷಗಳಲ್ಲಿ ನಾರ್ವೆ ದೇಶದಲ್ಲಿ ಸುಮಾರು ೧೦೦ ಜನಾಂಗ ಹತ್ಯೆ/ಜಿಹಾದಿ ಹತ್ಯೆಗಳು ನಡೆದಿವೆ. ಆದರೆ ಇವುಗಳನ್ನು ಮುಚ್ಚಿಹಾಕಿರುವುದಕ್ಕಾಗಿ ಬ್ರೇವಿಕ್ ಮಾಧ್ಯಮಗಳ ವಿರುದ್ಧ ಕಿಡಿಕಾರುತ್ತಾನೆ.



ಶಿಕ್ಷಕರಾದಂತೆ 'ಕಪ್ಪು-ಬಿಳುಪು' ಕನಸು ಕಾಣುತ್ತಿದ್ದವರೆಲ್ಲ ಇನ್ನು 'ಬಣ್ಣ'ದ ಕನಸು ಕಾಣುತ್ತಿರಬಹುದು ?

ಯೂರೋಪನ್ನು ಮುಸಲ್ಮಾನರು ಆಕ್ರಮಿಸಿಕೊಳ್ಳಲು ಅವಕಾಶ ಮಾಡಿಕೊಡುವ ದೇಶದ್ರೋಹಿಗಳ, ಸಾಂಸ್ಕೃತಿಕ ಮಾರ್ಕ್ಸ್‌ವಾದಿಗಳ/ಬಹುಸಂಸ್ಕೃತಿವಾದಿಗಳ ವಿರುದ್ಧ ಧರ್ಮಯುದ್ಧವೊಂದು ನಡೆಯಲಿದೆಯೆಂದೂ, ಅದು ಸುಮಾರು ೪೫,೦೦೦ ಜನರನ್ನು ಬಲಿತೆಗೆದುಕೊಂಡು ಹತ್ತು ಲಕ್ಷ ಜನರನ್ನು ಗಾಯಗೊಳಿಸಲಿದೆಯೆಂದೂ ಬ್ರೇವಿಕ್ ಗುಟುರು ಹಾಕುತ್ತಾನೆ.

ಬ್ರೇವಿಕ್‌ನ ಅಭಿಪ್ರಾಯಗಳು ಒಂದು ರೀತಿಯಲ್ಲಿ ಯೂರೋಪಿನ ನವ-ಸಂಪ್ರದಾಯವಾದಿಗಳ ಸಾಮಾನ್ಯ ಚರ್ಚೆಯ ವಿಷಯವಾಗಿದೆ. ೧೯೭೮ರಲ್ಲಿ ಬ್ರಿಟನ್ನಿನ ಮಾಜಿ ಪ್ರಧಾನಿ ಮಾರ್ಗರೆಟ್ ಥ್ಯಾಚರ್ ಬಹು ಬೇಗನೆ ಬ್ರಿಟನ್ ದೇಶವು ಇತರ ಸಂಸ್ಕೃತಿಗಳ ಆಕ್ರಮಣಕ್ಕೊಳಗಾಗಿಬಿಡಬಹುದೆಂಬ ಭಯವನ್ನು ವ್ಯಕ್ತಪಡಿಸಿದ್ದರು. ಈಚಿನ ವರ್ಷಗಳಲ್ಲಿ ಯೂರೋಪಿನ ರಾಜಕೀಯದ ಕೇಂದ್ರದಲ್ಲಿರುವ ರಾಜಕಾರಣಿಗಳು ಬ್ರೇವಿಕ್ ಬಳಸಿದ ಭಾಷೆಗಿಂತ ಭಿನ್ನವಲ್ಲದ ಭಾಷೆಗಳಲ್ಲಿ ಮಾತಾಡುತ್ತಿದ್ದಾರೆ. ಕಳೆದ ವರ್ಷ ಏಂಜಲಾ ಮಾರ್ಕೆಲ್ ಬಹು ಸಂಸ್ಕೃತಿಗಳ ಸಹಜೀವನವು ವಿಫಲವಾಗಿದೆಯೆಂದು ಸಾರಿದರು. ಡೇವಿಡ್ ಕ್ಯಾಮರೂನ್ ಸಹ ಭಿನ್ನ ಸಂಸ್ಕೃತಿಗಳು ಒಂದೇ ಸ್ಥಳದಲ್ಲಿ ಭಿನ್ನ ಭಿನ್ನ ಬಗೆಗಳಲ್ಲಿ ಬದುಕುವ ವ್ಯವಸ್ಥೆಯನ್ನು ತೆಗಳಿದರು. ಫ್ರಾನ್ಸ್‌ನ ನಿಕೊಲಸ್ ಸರ್ಕೋಜಿ ಇದೇ ಮಾತನ್ನು ಇನ್ನಷ್ಟು ಕಠಿಣವಾಗಿ ಹೇಳಿದರು. ''ಬಹುಸಂಸ್ಕೃತಿಗಳ ಸಹಬಾಳ್ವೆ ಅಸಾಧ್ಯವಾದುದು; ನಮ್ಮ ಪ್ರಜಾಪ್ರಭುತ್ವಗಳಲ್ಲಿ ನಾವು ಹೊರಗಿನಿಂದ ಬಂದವರ ರಕ್ಷಣೆಗೆ, ಅನನ್ಯತೆಗೆ ಹೆಚ್ಚು ಗಮನ ಕೊಡುತ್ತಿದ್ದೇವೆ; ಇಂಥವರನ್ನು ಬರಮಾಡಿಕೊಂಡ ದೇಶದ ಅನನ್ಯತೆಯ ಬಗೆಗೆ ಸಾಕಷ್ಟು ಕಾಳಜಿ ತೋರುತ್ತಿಲ್ಲ'' – ಎಂದರು.

ಈಗ ನಾವು ಭಾರತದ ಕಡೆ ತಿರುಗೋಣ : ೨೦೦೮ರಲ್ಲಿ 'ಹಿಂದುತ್ವ' ನಾಯಕರಲ್ಲಿ ಒಬ್ಬರಾದ ಬಿ. ಎಲ್. ಶರ್ಮಾ ಪ್ರೇಮ್ ಎನ್ನುವವರು, ಮುಸಲ್ಮಾನರನ್ನು ಗುರಿಯಾಗಿಸಿಕೊಂಡು ರಾಷ್ಟ್ರಾದ್ಯಂತ ಬಾಂಬ್‌ದಾಳಿ ನಡೆಸಬೇಕೆಂಬ ಪ್ರಚಾರದ ಹೊಣೆ ಹೊತ್ತಿದ್ದ ಭಯೋತ್ಪಾದಕರ ಒಂದು ಸಭೆ ನಡೆಸಿದರಂತೆ. ಆಮೇಲೆ ಅವರು ಬರೆಯುತ್ತಾರೆ : ''ನಾನು ಸುಮಾರು ಮೂರು ಲಕ್ಷ ಪತ್ರಗಳನ್ನು ರವಾನಿಸಿ, ಅಖಂಡ ಭಾರತದ ೨೦,೦೦೦ ಚಿತ್ರಪಟಗಳನ್ನು ಹಂಚಿ ಈಗಾಗಲೆ ಒಂದು ವರ್ಷ ಕಳೆಯುತ್ತ ಬಂತು. ಆದರೆ ಈ ಬ್ರಾಹ್ಮಣರು ಮತ್ತು ಬನಿಯಾಗಳು ಏನೇನೂ ಕೆಲಸಮಾಡಿಲ್ಲ, ಇವರು ಮಾಡುವ ಹಾಗೂ ತೋರುವುದಿಲ್ಲ.. ಈ ಸಮಾಜದಲ್ಲಿ ಬದಲಾವಣೆ ಮಾಡಬೇಕಾದರೆ, ತೋಳ್ಬಲವೊಂದೇ ಸಾಧನವೆಂದು ನಾನು ಹೇಳುತ್ತಿಲ್ಲ, ಆದರೆ, ಮಾನಸಿಕವಾಗಿ ಜನರನ್ನು ಎಚ್ಚರಿಸಬೇಕಾದರೆ, ಸಮಾಜವನ್ನು ಕೆರಳಿಸಲೇಬೇಕು.'' – ಪ್ರಾಸಿಕ್ಯೂಷನ್‌ನವರು ವಶಪಡಿಸಿಕೊಂಡಿರುವ ದಾಖಲೆಗಳಲ್ಲಿ ಶರ್ಮಾ ಅವರ ಮಾತುಗಳಿರುವುದಾಗಿ ವರದಿಯಾಗಿದೆ.

ನಾರ್ವೆಯ ಭೀಕರ ಹತ್ಯಾಕಾಂಡದ ವಿವರಗಳು ಪತ್ರಿಕೆಗಳಲ್ಲಿ ವರದಿಯಾಗುತ್ತಿದ್ದಂತೆ ಪತ್ರಿಕೆಯ ಓದುಗರು ಈ ದುರ್ಘಟನೆಯನ್ನು ಖಂಡಿಸಿ ಪತ್ರಗಳನ್ನು ಬರೆದಿದ್ದಾರೆ. ಸಂಗ್ರಹಿಸಿದ ಉದಾಹರಣೆಗಳಲ್ಲಿ ಕೆಲವನ್ನು ಇಲ್ಲಿ ಪ್ರಸ್ತಾಪಿಸಬಹುದು : ಸಾಮಾನ್ಯವಾಗಿ ಎಲ್ಲರೂ ಬ್ರೇವಿಕ್‌ನ ಬರವಣಿಗೆಯನ್ನು ಇದೊಂದು 'ವಿಷಪೂರಿತ ಪ್ರಣಾಳಿಕೆ' ಎಂದು ಗುರುತಿಸಿದ್ದಾರೆ :

೧) ನಾರ್ವೆಯಲ್ಲಿ ಬ್ರೇವಿಕ್ ಎಂಬಾತನು ಬಾಂಬ್ ಸ್ಫೋಟಿಸಿ, ಗುಂಡಿನ ಮಳೆಗರೆದು ನಾಗರಿಕರ ಮಾರಣಹೋಮ ಮಾಡಿದ್ದು, ತನ್ನ ದ್ವೇಷ-ಸಿದ್ಧಾಂತವನ್ನು ದೂರದೂರದ ದೇಶಗಳಿಗೆ ತಲುಪಿಸುವುದಕ್ಕಾಗಿ. ಇಂತಹ ಹೇಯಕೃತ್ಯಗಳು ಹಲವು ದೇಶಗಳ ಲಕ್ಷಾಂತರ ಜನರನ್ನು ಹತ್ಯೆ ಮಾಡುವುದಕ್ಕಿಂತ ಮುಂಚಿತವಾಗಿ ಎಲ್ಲ ದೇಶಗಳೂ ಒಂದುಗೂಡಿ ದ್ವೇಷ-ಸಿದ್ಧಾಂತದ ವಿರುದ್ಧ ಕಾರ್ಯೋನ್ಮುಖರಾಗಬೇಕಾದದ್ದು ಅಗತ್ಯವಾಗಿದೆ.

೨) ನಾರ್ವೆಯಂತಹ ಶಾಂತಿಪ್ರಿಯ ದೇಶವು ಬಾಂಬ್ ಸ್ಫೋಟಕ್ಕೆ, ಗುಂಡಿನ ದಾಳಿಗೆ ಗುರಿಯಾಗುವುದೆಂದು ಯಾರು ತಾನೆ ನಿರೀಕ್ಷಿಸಿದ್ದರು ! ಭಯೋತ್ಪಾದನೆಯೆಂಬುದು ಇಂದು ಎಲ್ಲ ದೇಶಗಳೂ ಎದುರಿಸಬೇಕಾದ ಸಮಸ್ಯೆಯಾಗಿದೆ. ಆದ್ದರಿಂದ ಭಯೋತ್ಪಾದನೆಯ ವಿರುದ್ಧ ಹಿಂದೆಂದಿಗಿಂತಲೂ ಹೆಚ್ಚಿನ ಸಂಘಟಿತ ಪ್ರಯತ್ನಗಳು ನಡೆಯಬೇಕಾಗಿದೆ.

೩) ...ಮಕ್ಕಳು ಬೆಳೆದು ದೊಡ್ಡವರಾಗುವ ಮುಂಚೆಯೆ, ಸಂಕುಚಿತ ಬುದ್ಧಿಯ ತಂದೆ-ತಾಯಿಯವರು ಮತಧರ್ಮಗಳ ಬಗ್ಗೆ ಅವರ 'ಬ್ರೈನ್ ವಾಷ್' ಮಾಡಬಾರದು. ಬೆಳೆದು ದೊಡ್ಡವರಾದ ಮೇಲೆ ತಮತಮಗೆ ಸರಿದೋರಿದ ಮತಧರ್ಮವನ್ನು – ಅದೂ ಅಗತ್ಯವಿದ್ದರೆ ಮಾತ್ರ – ಆಯ್ದುಕೊಳ್ಳಲು ಸ್ವತಂತ್ರರಾಗಿರಬೇಕು.

೪) ಬ್ರೇವಿಕ್‌ನ ಪ್ರಣಾಳಿಕೆಗೆ ನಾವು ಬೆಲೆ ಕೊಡುವುದಾದರೆ, ಇದರಿಂದ ಭಾರತದ ಬಲಪಂಥೀಯ ಹಿಂದೂ ಸೇನಾನಿಗಳಿಗೆ ಬಲವಾದ ಸಮರ್ಥನೆ ದೊರೆತಂತಾಗುತ್ತದೆ. ''ಭಾರತದ ಹಿಂದುತ್ವ ಹಿಂದೂ ರಾಷ್ಟ್ರವಾದಿಗಳು ಸಾಂಸ್ಕೃತಿಕ ಮಾರ್ಕ್ಸ್‌ವಾದಿಗಳಿಂದ (ಬಹುಸಂಸ್ಕೃತಿವಾದಿಗಳಿಂದ) ಬಹಳಷ್ಟು ಕಿರಿಕಿರಿಯನ್ನನುಭವಿಸುತ್ತಿದ್ದಾರೆ. ಆದರೂ ಸದ್ಯದ ಸರ್ಕಾರವು ಮುಸ್ಲಿಮರನ್ನು ಓಲೈಸುವುದರಲ್ಲಿ ತೊಡಗಿದೆ'' ಎಂದು ಬ್ರೇವಿಕ್ ವಿಷಾದಿಸುತ್ತಾನೆ; ಹಿಂದುತ್ವವಾದಿಗಳ ಹೋರಾಟದಲ್ಲಿ ಔಚಿತ್ಯವನ್ನು ಕಾಣುತ್ತಾನೆ. ಬ್ರೇವಿಕ್‌ನ ಈ ಬರವಣಿಗೆಗೆ ಸಂಘಪರಿವಾರದ ಪ್ರತಿಕ್ರಿಯೆಯೇನು ? – ಎಂಬುದನ್ನು ತಿಳಿಯಲು ದೇಶವು ಬಯಸುತ್ತದೆ.

ಆರ್.ಎಸ್.ಎಸ್. ನಾಯಕರಲ್ಲೊಬ್ಬರಾದ ರಾಂ ಜಾಧವ್ ಅವರು ಈ ಘೋರ ಕೃತ್ಯವನ್ನು ಎಲ್ಲರೂ ಖಂಡಿಸಬೇಕು ಎಂದರು. ಇನ್ನು ಬ್ರೇವಿಕ್‌ನ ಪ್ರಣಾಳಿಕೆಯಲ್ಲಿ ಹಿಂದೂತ್ವ ಹಿಂದೂ ರಾಷ್ಟ್ರವಾದಿಗಳನ್ನು ಪ್ರಶಂಸಿಸಿರುವುದು ತನ್ನ ಕೃತ್ಯವನ್ನು ಸಮರ್ಥಿಸಿಕೊಳ್ಳುವ ಮತ್ತು ತನ್ನ ಬಗ್ಗೆ ಹಿಂದೂಗಳ ಸಹಾನುಭೂತಿಯನ್ನು ಗಿಟ್ಟಿಸಿಕೊಳ್ಳುವ ಉದ್ದೇಶದಿಂದ ಹೂಡಿದ ಪ್ರಚಾರತಂತ್ರ ಎಂದರು. ಆದರೆ ವಿಶ್ವ ಹಿಂದೂ ಪರಿಷತ್ತಿನ ವಿನೋದ್ ಬನ್ಸಾಲ್ ಅವರು ಬ್ರೇವಿಕ್ ಹಿಂದೂ ರಾಷ್ಟ್ರವಾದಿಗಳನ್ನು ಪ್ರಶಂಸಿಸಿರುವುದು ಒಟ್ಟಿನ ಮೇಲೆ ಅವನ ಧೋರಣೆಯನ್ನು ಸ್ಪಷ್ಟಪಡಿಸುತ್ತದೆ ಎಂದರು. ಹಿಂದೂವಾದಿಗಳ ಪೈಕಿ ತಮ್ಮ ಕಠಿಣ ನಿಲುವಿಗೆ ಹೆಸರಾದ ಬಿ.ಜೆ.ಪಿ. ಲೋಕಸಭಾ ಸದಸ್ಯ ಬಿ. ಪಿ. ಸಿಂಘಾಲ್ ಅವರು ಈ ಕೊಲೆಗಾರನು ಅನುಸರಿಸಿದ ವಿಧಾನವು ತಪ್ಪಾಗಿದ್ದರೂ ಸಹ ಆತನ ಸಿದ್ಧಾಂತವನ್ನು ಸಂಪೂರ್ಣವಾಗಿ ತಪ್ಪೆನ್ನಲಾಗುವುದಿಲ್ಲವೆಂದು ಹೇಳಿದುದಾಗಿ ವರದಿಯಾಗಿದೆ.

ಏನೇ ಇರಲಿ; ನಾರ್ವೆಯ ದುರ್ಘಟನೆ ಮತ್ತು ಆಂಡ್ರೆಸ್ ಬ್ರೇವಿಕ್‌ನ ಪ್ರಣಾಳಿಕೆಗಳಿಂದ ಭಾರತವು ಕಲಿಯಬೇಕಾದ ಕೆಲವು ಪಾಠಗಳಿರುವುದಂತೂ ನಿಜ. ಯೂರೋಪಿನ ಬಲಪಂಥೀಯ ರಾಜಕೀಯ ಪಕ್ಷಗಳ ಹಾಗೆ, ಬಿ.ಜೆ.ಪಿ. ಕೂಡ ನಾರ್ವೆಯ ಹಿಂಸಾಚಾರಕ್ಕೆ ಪ್ರಚೋದನೆ ನೀಡಿದ ಮನೋಭಾವವನ್ನು ಸ್ಪಷ್ಟವಾಗಿ ಖಂಡಿಸುವುದಿಲ್ಲ, ಗಂಭೀರವಾದ ಆತ್ಮ ನಿರೀಕ್ಷಣೆಯಲ್ಲಿ ತೊಡಗುವುದಿಲ್ಲ. ಕ್ರೈಸ್ತಮತೀಯರ ಭಯೋತ್ಪಾದನೆ ಎಂದೊಡನೆ ಯೂರೋಪು ದೇಶಗಳು ಮತ್ತು ಹಿಂದೂ ಭಯೋತ್ಪಾದನೆ ಎಂದೊಡನೆ ಬಿ.ಜೆ.ಪಿ. ಸಿಡಿದು ಬೀಳುತ್ತವೆ. ಇನ್ನು ಕಾಂಗ್ರೆಸ್ ಸೇರಿದಂತೆ ಉದಾರವಾದಿ ಪಕ್ಷಗಳು ಇಸ್ಲಾಂ ಭಯೋತ್ಪಾದನೆ ಮತ್ತು ಹಿಂದೂ ಭಯೋತ್ಪಾದನೆ ಗಳೆರಡರ ಬಗೆಗೂ ಮೃದುಧೋರಣೆ ಅನುಸರಿಸುತ್ತಿವೆ. ಒಟ್ಟಿನ ಮೇಲೆ ಭಾರತವು ಬಹುಬಗೆಯ ಮೂಲಭೂತವಾದಿಗಳಿಂದ ಕೂಡಿದ ದೇಶವಾಗಿದ್ದು ಯೂರೋಪಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಸಾಮಾಜಿಕ ಸಂಘರ್ಷಕ್ಕೆ ಈಡಾಗುವ ಅಪಾಯವಿದೆ. ಹೀಗಾಗಿ ನಮ್ಮ ದೇಶವು ನಾರ್ವೆಯ ದುರ್ಘಟನೆ ಮತ್ತು ಬ್ರೇವಿಕ್‌ನ ಪ್ರಣಾಳಿಕೆಯನ್ನು ಗಂಭೀರವಾಗಿ ಪರ್ಯಾಲೋಚಿಸಬೇಕಾದ ಅಗತ್ಯವಿದೆ ಎನಿಸುತ್ತದೆ.

*(ಮಾಹಿತಿ ಸಂಗ್ರಹ ವಿವಿಧ ಮೂಲಗಳಿಂದ)*

**ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

ರುದ್ರಯ್ಯ ವಿ. ಗದಗ



# ಹೊಸ ತಲೆಮಾರಿನವರು ಹೀಗೂ ಉಂಟಾ?

**ಒ**ಮ್ಮೆ ನಾನು ಬ್ಯಾಂಕ್ ಸಂಬಂಧದ ಕಾರ್ಯನಿಮಿತ್ತ ಗದುಗಿನ ಸ್ಟೇಟ್ ಬ್ಯಾಂಕಿಗೆ ಪಾದ ಬೆಳೆಸಿದ್ದೆ. ಬ್ಯಾಂಕ್ ಕಾರ್ಯಾರಂಭ ವಾಗುವುದಕ್ಕೆ ಇನ್ನೂ ಸಾಕಷ್ಟು ಸಮಯಾವಕಾಶವಿತ್ತು. ಪರ ಊರಿನಿಂದ ಬಂದ ಜನರು, ಬ್ಯಾಂಕಿನ ಬಾಗಿಲು ತೆರೆಯುವ ದಾರಿ ಕಾಯುತ್ತ ಆವರಣದಲ್ಲೆ ಗುಂಪುಗುಂಪಾಗಿ ಕುಂತು, ಪಂಟು ಹೊಡೆಯುವುದರಲ್ಲಿ ತಲ್ಲೀನರಾಗಿದ್ದರು. ನಾನು ಒಂದೆಡೆ ಸ್ಥಳ ಗಿಟ್ಟಿಸಿಕೊಂಡು ಕುಂತೆ. ಅಕಸ್ಮಾತ್ ಒಂದು ವಿಲಕ್ಷಣ ಘಟನೆ ಸಂಭವಿಸಿತು!

ಸುಮಾರು ಇಪ್ಪತ್ತರ ಪ್ರಾಯದ, ಪ್ಯಾಂಟುಧಾರಿ ಯುವಕನೋರ್ವನು ನನ್ನ ಬಳಿ ಬಂದು, ಹೊಸದಾಗಿ ಎಟಿಎಂ ಕಾರ್ಡ್ ಪಡೆಯುವ ವಿಧಾನದ ಬಗ್ಗೆ ನನ್ನಲ್ಲಿ ಮಾಹಿತಿ ಕೇಳಿದ.

''ಸಾಹೇಬ್ರ ನನ್ಗೊಂದ ಎಟಿಎಂ ಕಾರ್ಡ್ ಮಾಡಿಸ್ಬೇಕಾಗೈತಿ. ನನ್ಗೆ ಅಗ್ದಿ ಜರೂರತ ಐತಿ. ಅದು ನನ್ ಕೈಸೇರಬೇಕಾದ್ರ ನಾನೇನ್ ಮಾಡ್ಬೇಕು? ಒಂದೀಟು ಬಿಡ್ಸಿ ಹೇಳ್ತೀರಾ? ನಿಮ್ಗೆ ಪುಣ್ಯ ಸಿಗ್ತದ'', ಎಂದು ದಯನೀಯವಾಗಿ ಬೇಡಿಕೊಂಡ. ಅಷ್ಟೇನೂ ಕಲಿಯದ ಮುಗ್ಧ ತರುಣ. ಅವನ ಮಾತು ಕೇಳಿ ನನ್ನ ಕರುಳು ಚುರ್ ಅಂತು. ಅವನ ಮೇಲೆ ಕರುಣೆ ಉಕ್ಕಿತು. ಕೈಲಾದಷ್ಟು ಸಹಾಯ ಮಾಡಿದರೆ ನನ್ನ ಗಂಟೇನು ಹೋಗುತ್ತೆ?

''ನೋಡಪ್ಪಾ, ನಾ ಹೇಳಾದೀಟು ಗಮ್ನ ಕೊಟ್ಟು ಕೇಳು. ಬ್ಯಾಂಕ್ ಬಾಗ್ಲು ತಗದ ಕೂಡ್ಲೆ ಒಳಗಡೆ ಹೋಗಿ, ಎಟಿಎಂ ಕೇಸ್ ವರ್ಕರ್‌ನ ಕಾಣು. ನೀ ಬಂದ ವಿಷ್ಯ ಅವ್ರಿಗೆ ತಿಳಿಸು. ಅವ್ರು ನಿನ್ಗೊಂದು ಖಾಲಿ ಅರ್ಜಿ ಫಾರ್ಮ್ ಕೊಟ್ಟು, ತುಂಬ್ಸಿಕೊಂಡು ಬರಾಕ ಹೇಳ್ತಾನ. ಹಾಗೆ ಅದ್ರ ಜೊತೆಗೆ ಇರಿಸ್ಬೇಕಾದ ದಾಖಲೆ ಪತ್ರಗಳ ಪಟ್ಟಿ ಕೊಡ್ತಾನ. ಅವ್ರು ಹೇಳಿದ್ಹಾಂಗ ಮಾಡಿಬಿಟ್ರ ಮುಗೀತು. ತಿಂಗಳೊಪ್ಪತ್ನಾಗ ಎಟಿಎಂ ಕಾರ್ಡ್ ನಿನ್ ಕೈಯಾಗ ರಾರಾಜಿಸ್ತದ ನೋಡು'' ಎಂದು ಸಂಪೂರ್ಣ ಮಾಹಿತಿ ಒದಗಿಸಿದೆ.

ಒಮ್ಮೆಲೆ ನನಗೆ ಏನೋ ಹೊಳೆಯಿತು. ತಲೆಯಲ್ಲಿ ಥಟ್ಟನೆ ಮಿಂಚೊಂದು ಕೋರೈಸಿತು. ನಾನು ಹುಡುಗನತ್ತ ಕಿರುನಗೆ ಬೀರಿ, ಒಂದು ಪ್ರಶ್ನೆ ಎಸೆದೆ.

''ಅಲ್ಲಪ್ಪಾ, ಈ ಬ್ಯಾಂಕಿನಾಗ ಉಳಿತಾಯ ಖಾತೆ ಏನಾರ ತಗದೀಯಾ? ಉಳಿತಾಯ ಖಾತೆ ಎಟಿಎಂ ಕಾರ್ಡ್‌ಗೆ ಕಡ್ಡಾಯ,'' ಎಂದು ಅವನನ್ನು ಎಚ್ಚರಿಸಿದೆ. ಅದನ್ನು ಕೇಳಿ ಅವನು ಗಾಬರಿಗೊಳಗಾದ!

''ಅದೇನ ಹೇಳಿದ್ರಿ? ಉಳಿತಾಯ ಖಾತೇನ...? ಇಲ್ಲೀವರೆಗೆ ನಾನ್ಯಾವ ಖಾತೇನು ತಗದಿಲ್ಲ ತಗಿರಿ, ನನ್ಗೆ ಇದು ಗೊತ್ತಿರಲಿಲ್ಲ ಬಿಡ್ರಿ'', ಎಂದು ಸಹಜವಾಗಿ ಹುಡುಗ ಪ್ರತಿಕ್ರಿಯಿಸಿದ.

''ಅಲ್ಲಪ್ಪಾ, ಪ್ರಪಂಚಕ್ಕ ತಿಳಿದ ವಿಷ್ಯ. ನಿನ್ಗೆ ಗೊತ್ತಿಲ್ಲಂದ್ರ ಹ್ಯಾಂಗ? ಹಾಗಾದ್ರ ನಿನ್ಗೆ ಎಟಿಎಂ ಕಾರ್ಡ್ ಯಾತಕ್ಕೆ ಬೇಕು'' ಎಂದು ಒರೆಗೆ ಹಚ್ಚಿದೆ.

''ಬ್ಯಾಂಕ್ನಿಂದ ರೊಕ್ಕ ಹಿರಿಯಾಕ ಬೇಕ್ರಿ. ಅಲ್ಲ ಎಟಿಎಂ ಕಾರ್ಡ್‌ಗೂ, ಉಳಿತಾಯ ಖಾತೆಗೂ ಅದ್ಯಾವ ಬಾದರಾಯಣ ಸಂಬಂಧ'', ಎಂದು ನನ್ನನ್ನೇ ಪ್ರಶ್ನಿಸಬೇಕೆ! ನಾನು ಸುಸ್ತಾದೆ.

''ಎಟಿಎಂ ಕಾರ್ಡ್ ಬ್ಯಾಂಕ್ನಿಂದ ರೊಕ್ಕ ಹಿರಿಯಾಕ ಬರ್‍ತದಂತ ನಿನ್ಗೆ ಯಾವ ಹುಚಖೋಡಿ ಹೇಳ್ಯಾನ?'' ನಯವಾಗಿ ಹುಡುಗನನ್ನು ಕೇಳಿದೆ.

''ನನ್ ಜಿಗ್ರಿ ದೋಸ್ತ ಹೇಳ್ಯಾನರೀ. ಖಾಲಿ ಕಿಸೆದಾಗ ಎಟಿಎಂ ಕಾರ್ಡ್ ಇದ್ರ ಸಾಕು. ಯಾವಾಗಂದ್ರ ಆವಾಗ ರೊಕ್ಕ ಹಿರಿಯಾಕ ಬರ್‍ತದ. ಅಷ್ಟ ಯಾಕ, ಪರಸ್ಥಳಕ್ಕ ಹೋದಾಗ ಅಲ್ಲಿರೋ ಬ್ಯಾಂಕ್ನಿಂದನೂ ರೊಕ್ಕ ಹಿರ್‍ಕೋಬೌದು ಅಂತಾನೂ ಹೇಳ್ಯಾನರಿ.''

''ದುಡಿಯದೇ - ದುಕ್ಕು ಬಡಿಯದೇ ಹಣ ಬಾಚ್ಕೊಳ್ಳೋ ಸುಲಭ ಹಾದಿ. ಯಾರ ಹಂಗಿಲ್ದ ಸುಖ ಸುರ್‍ಕೊಳ್ಳೋ ಸುಲಭ ಮಾರ್ಗ. ಎಲ್ಲಾ ಪುಕ್ಕಟೆ. ಇಂಥಾ ಸುಖ ಯಾರಿಗುಂಟು ಯಾರಿಗಿಲ್ಲ! ಎಟಿಎಂ ಕಾರ್ಡ್ ತಗೊಳ್ಳೋದು ಬೆಸ್ಟೈತಲ್ವಾ ಸಾರ್. ಇವತ್ತ ನಾ ಬ್ಯಾಂಕಿಗೆ ಬಂದಿರೋದು ಎಟಿಎಂ ಕಾರ್ಡಾ ಮಾಡಿಸಾಕ.''

ಅವನ ಹೇಳಿಕೆಯಲ್ಲಿರುವುದು ಬರಿ ಮುಗ್ಧತೆಯೋ ಇಲ್ಲಾ ಮೋಸದಾಟವೋ ಒಂದೂ ಸ್ಪಷ್ಟವಾಗಲಿಲ್ಲ.

''ಹಾಗಿದ್ರ ನಿನ್ಗೆ ಎಟಿಎಂ ಕಾರ್ಡ್ ಸಿಗೋದು ದೂರದ ಮಾತು'' ಎಂದು ಘಂಟಾಘೋಷಿತವಾಗಿ ಘೋಷಿಸಿದೆ. ಅದನ್ನು ಕೇಳಿದ ತರುಣನ ಮುಖ ಕಪ್ಪಿಟ್ಟಿತು! ಸತ್ಯ ಯಾವತ್ತೂ ಕಠೋರ ಹಾಗೂ ಕಹಿ!

ಎಂಥಾ ಕೇಡುಗಾಲ ಬಂತಪ್ಪಾ! ಆ ಮುಗ್ಧ ತರುಣನ ಮೇಲೆ ನನಗೆ ಕರುಣೆ ಮೂಡಿತು. ಇನ್ನು ಅವನಿಗೆ ಏನು ಹೇಳಿದರೂ ಪ್ರಯೋಜನವಿಲ್ಲ ಎಂಬ ಅಭಿಪ್ರಾಯ ನನ್ನಲ್ಲಿ ಗಟ್ಟಿಯಾಯಿತು.

ಎಟಿಎಂ ಕಾರ್ಡ್ ಅವನಿಗೆ ಮರೀಚಿಕೆಯಾಗಿ ತೋರಿತು. ತನ್ನ ಮನದಾಸೆ ಈಡೇರುವುದು ಅಸಾಧ್ಯವೆನಿಸಿದಾಗ, ಮುಖ ಚಿಕ್ಕದು ಮಾಡಿಕೊಂಡ ಹುಡುಗ ತಿರುಗಿ ನೋಡದೆ, ಬಂದ ದಾರಿಗೆ ಸುಂಕವಿಲ್ಲ ಎಂಬಂತೆ, ಮನೆಯತ್ತ ಫೇರಿ ಕಿತ್ತ. ಹುಡುಗನ ಮುಗ್ಧ ಮುಖ ನನ್ನ ಮನದಾಳದಲ್ಲಿ ಇನ್ನೂ ಮಾಸದೆ ಉಳಿದಿದೆ.

* * *

ರುಕ್ಕು ನಮ್ಮ ಮನೆಯ ಮೇಡ್ ಸರ್ವೆಂಟ್. ಸದಾ ಪಾದರಸದಂತೆ ಚುರುಕಾದ ಕೆಲಸ. ಕೈಯಲ್ಲಿ

ಬಿಡಿಗಾಸಿಲ್ಲದ ಬಡಿಗ್ಯೆ ದಾಸಿ. ಕೊರಳಲ್ಲಿ ಇಲ್ಲ ಕರಿಮಣಿ. ಹೊಸ ಬಟ್ಟೆ, ಚಿನ್ನಾಭರಣ, ಪಾತ್ರೆ-ಪಗಡಿ ಖರೀದಿಸುವ ಗೀಳು. ಕಂಡದ್ದನ್ನೆಲ್ಲ ಕೊಳ್ಳುವ ಚಾಳಿ. ಸಾಲ ಮಾಡಿಯಾದರು ಜೀವನದ ಸರ್ವ ಸುಖ-ಸಂತೋಷ ಸವಿಯುವ ಅದಮ್ಯ ಅಪೇಕ್ಷೆ.

ಇತ್ತೀಚೆಗೆ ಚಿಗುರೊಡೆದ ಹೊಸ ಬಯಕೆಯೆಂದರೆ ಮೊಬೈಲ್ ಗ್ರಾಹಕರ ಪಟ್ಟಿಯಲ್ಲಿ ತನ್ನ ಹೆಸರನ್ನು ಸೇರಿಸುವುದು. ರುಕ್ಕು ಇತರರಂತೆ, ಮೊಬೈಲ್ ಮೋಡಿಗೆ ಮಾರುಹೋಗಿದ್ದಳು.

ಮುಂಜಾನೆ ಮನೆ ಕೆಲಸಕ್ಕೆ ಬಂದಾಗ, ''ಸಾಹೇಬ್ರ ನಂಗೊಂದ ಮೊಬೈಲ್ ಯಾವಾಗ ತಂದ ಕೊಡ್ತೀರಾ ?'' ಹೇಳಿದ್ದನ್ನೇ ಹೇಳೋ ಕಿಸಬಾಯಿ ದಾಸನಂತೆ, ಪ್ರತಿದಿನ ಅದನ್ನೇ ಹೇಳಿ ಹೇಳಿ ನನ್ನನ್ನು ಪೀಡಿಸುತ್ತಿದ್ದಳು.

ಮೊಬೈಲ್ ಖರೀದಿಸಲು ಅವಳಲ್ಲಿ ಬಿಡಿಕಾಸಿಲ್ಲ. ನಾನೇ ಸಾಲದ ರೂಪದಲ್ಲಿ ಅವಳಿಗೆ ಮೊಬೈಲ್ ಕೊಡಿಸಬೇಕೆಂಬುದು ಅವಳ ಇರಾದೆ.

ದಿನಾಲು ಹಾಡುವ ಅದೇ ಹಾಡು, ಅದೇ ರಾಗ ಕೇಳಿ ನನ್ನ ಕಿವಿ ತೂತು ಬೀಳೋದೊಂದು ಬಾಕಿ ! ಹೇಗಾದರೂ ಮಾಡಿ, ಆದಷ್ಟು ಬೇಗನೆ, ಅವಳಿಗೆ ಮೊಬೈಲ್ ತಂದುಕೊಟ್ಟು, ಚಟ್ಟನೆ ಚಕ್ರವ್ಯೂಹದಿಂದ ಹೊರಗೆ ಹಾರುವ ತವಕ.

ಒಂದು ದಿನ ಮಾರ್ಕೆಟ್‌ಗೆ ಹೋಗಿ ಸೋವಿ ಬೆಲೆಯ ಏರ್‌ಟೆಲ್ ಮೊಬೈಲ್ ಸೆಟ್ ಖರೀದಿ ಮಾಡಿ ರುಕ್ಕುವಿನ ಕೈಯಲ್ಲಿರಿಸಿದಾಗ... ನೋಡಬೇಕು ಅವಳ ಸಡಗರ-ಸಂಭ್ರಮ ! ಮುಖದಲ್ಲಿ ಭಗ್ಗನೆ ಬೆಳಗಿತು ಸಾವಿರ ಕ್ಯಾಂಡಲ್ ಬೆಳಕು ! ಮುಗಿಲು ಮುಟ್ಟುವ ಹಿಗ್ಗು! ಸಾಧನೆ ಮಾಡಿದ ಸಂತೃಪ್ತಿ! ಅಂತು ಇಂತು ರುಕ್ಕುವಿನ ವರಾತಕ್ಕೆ ಕೊನೆ ಪರದೆ ಬಿತ್ತು.

ಮೊಬೈಲ್ ಬಂದಮೇಲೆ, ರುಕ್ಕುವಿನಿಂದ ಮತ್ತೆ ಯಾವುದೇ ಕೋರಿಕೆ ಬರಲಿಲ್ಲ. ಮನೆಯಲ್ಲಿ ಪ್ರಶಾಂತ ವಾತಾವರಣ. ಒಂದು ದಿನ ರುಕ್ಕು ಮುಂಜಾನೆ ಮನೆಕೆಲಸಕ್ಕೆ ಬಂದಾಗ –

''ಸಾಹೇಬ್ರ, ಇವತ್ತ ನನ್ನೊಂದ ಕೆಲ್ಸ ಮಾಡಿಕೊಡ್ತೀರಾ'' ಎಂದು ಕೇಳಿದಾಗ ನನ್ನ ಎದೆ ದಸಕ್ ಎಂದಿತು ! ಮತ್ತೆ ಯಾವ ಪೀಕಲಾಟ ಕಾದಿದೆ ಎಂದು ಹೌಹಾರಿದೆ ! ನಾನು ಹುಲಿಗೆ ಹೆದರಿದ ಜಿಂಕೆಯಂತಾದೆ.

''ಅದೇನ್ ಕೆಲ್ಸ ಅನ್ನೋದು ಮೊದ್ಲು ಹೇಳು ಮಾರಾಯಿ. ನನ್ನ ಹೃದಯ ಢಬ ಢಬಾ ಅಂತ ಹೊಡಕೊಳ್ಳಾಕ ಹತ್ತೈತಿ. ಮೊಬೈಲ್ ತಂದ ಕೊಟ್ಟಾಗೀತಲ್ಲ ಈಗ ಮತ್ಯಾವ ಹೊಸ ಬೇಡಿಕೆ'', ಎಂದು ಕೇಳಿದೆ.

''ಅದೇನ ಕೊಡತಗಳ್ಳೂ ವ್ಯವಹಾರ ಅಲ್ಲ ಬಿಡ್ರಿ. ನನ್ ಮೊಬೈಲ್ ಚಾರ್ಜ್ ಅಪೂಟಹೋಗೇತಿ'' ಇವತ್ತ ಒಂದಿವ್ಸ ಅದನ ನೀವ ಚಾರ್ಜ್ ಮಾಡಿಕೊಡ್ತೀರಾ ಎಂದು ಕಳಕಳಿಯಿಂದ ಕೇಳಿದಳು. ಹೋದಜೀವ ಬಂದಂತಾಯಿತು ನನಗೆ.

''ಮೊಬೈಲ್ ಚಾರ್ಜ್ ಮಾಡೋದಾ ? ಮಾಡಿದ್ರಾಯ್ತು ಬಿಡು. ಅದೇನ ಮಹಾ ಕೆಲ್ಸ, ಮನಿ ಕೆಲ್ಸ-ಬಗಸಿ ಮುಗ್ಸೋ ಹೊತ್ತಿಗೆ ಮೊಬೈಲ್ ಫುಲ್ ಚಾರ್ಜ್ ಆಗುತ್ತೆ'', ಎಂದು ಹೇಳಿದೆ. ಅವಳು ತಕ್ಷಣ ಮೊಬೈಲ್‌ನ್ನು, ಸೇಫ್ಟಿ ಪಾಕೇಟ್‌ನಿಂದ ಹೊರಗೆ ಹಿರಿದು, ನನ್ನ ಕೈಗೆ ಕೊಟ್ಟಳು.

''ಮೊಬೈಲ್ ಒಂದ ಕೊಟ್ಟೀಯಲ್ಲೆ ಮಾರಾಯಿ, ಚಾರ್ಜರ ಎಲ್ಲದ ? ಅದ ಇಲ್ಲಂದ್ರ ಮೊಬೈಲ್ ಚಾರ್ಜ್ ಮಾಡೋದಾದ್ರು ಹ್ಯಾಂಗ'', ಎಂದು ಕೇಳಿದೆ.

''ಅಯ್ಯ ಶಿವನೆ ! ನಿಮ್ದೊಳ್ಳೆ ಕತೆಯಾಯ್ತಲ್ಲ! ನಿಮ್ ಮನಿಯಾಗ ಎಲ್ಡು ಚಾರ್ಜರ ಕಾಲ್ಮುರ್‍ಕೊಂಡ ಬಿದ್ದಾವು. ನಿಮ್ದು ಚಾರ್ಜರ ಹಾಕಿದ್ರ ಅದೇನ್ ಸವ್ವುಹೋಗುತ್ತಾ ?'' ರುಕ್ಕು ನಿಸೂರಾಗಿ ನುಡಿದಳು.

''ನೋಡಮ್ಮ, ಇದ್ದ ಸಂಗ್ತಿ ಹೇಳಿಬಿಡ್ತೀನಿ. ಒಂದ ಕಂಪ್ನಿ ಚಾರ್ಜರ ಮತ್ತೊಂದ ಕಂಪ್ನಿ ಮೊಬೈಲ್‌ಗೆ ಹೊಂದುದಿಲ್ಲ. ಎಲ್ಲ ಚಾರ್ಜರ ಡಿಸಾಯಿನ್ ಒಂದಾ ನಮೂನಿ ಇರುದಿಲ್ಲ. ನಮ್ ಮನ್ಯಾಗ ಇರಾವು ನೋಕಿಯಾ ಹಾಗೂ ಸ್ಯಾಮಸಂಗ್ ಚಾರ್ಜರ. ನಿನ್ ಏರ್‌ಟೆಲ್ ಮೊಬೈಲ್‌ಗೆ ಹ್ಯಾಂಗ ಫಿಕ್ಸ್ ಆಗ್ತಾವು ? ಏರ್‌ಟೆಲ್ ಮೊಬೈಲ್ ಚಾರ್ಜ್ ಮಾಡ್ಬೇಕಂದ್ರ ಏರ್‌ಟೆಲ್ ಚಾರ್ಜರ ಬೇಕು ನೋಡು'', ಎಂದು ವಿವರಿಸಿ ಹೇಳಿದೆ. ತಲೆತುಂಬ ಸಗಣಿ ತುಂಬಿರುವಾಗ ನಾನು ಹೇಳಿದ್ದೆಲ್ಲಿ ನುಸಳಬೇಕು ?

''ಅಲ್ಲರಿ, ನಿಮ್ ಎಲ್ಡೂ ಚಾರ್ಜರ ನನ್ ಮೊಬೈಲ್‌ಗೆ ಫಿಕ್ಸ ಆಗುದಿಲ್ಲ ಅಂತ ಬರಿ ಬಾಯಿ ಮಾತ್ನಾಗ ಹೇಳಿದ್ರ ಮುಗೀತಾ ? ಒಂದ್ಸಲ ಅವನ್ ಪರೀಕ್ಷೆಗೆ ಒಡ್ಡಿದ್ರ ಹೂರಣ ಹೊರಬೀಳುತ್ತೆ. ಒಮ್ಮೆ ಪರೀಕ್ಷೆ ಮಾಡಿದ್ರ ನಿಮ್ ಗಂಟೇನ್ ಹೋಗುದಿಲ್ಲ. ಒಂದಲ್ಲಾ ಒಂದು ಹೊಂದಾಣಿಕೆ ಆಗಬೌದು'', ಎಂದು ರುಕ್ಕು ನನ್ನನ್ನೆ ತರಾಟೆಗೆ ತೆಗೆದುಕೊಂಡಳು. ನನಗೆ ಕೋಪ ಪಾದರಸದಂತೆ, ಜಗ್ಗನೆ ಮೇಲೇರಿತು.

''ರುಕ್ಕು, ನೀ ಭಾರಿ ಘಟವಾಣಿ ಹೆಣ್ಣು ನೋಡು. ನಾನೇನ ಹೇಳ್ಲಿ ನೀ ಕೇಳುವಾಕಿನ ಅಲ್ಲ ಬಿಡು. ನಿಂದಾ ಹಠ ಸಾದಸ್ತೀಯಾ : ಈಗ ಒಂದ ಕೆಲ್ಸ ಮಾಡು. ಎಲ್ಡೂ ಚಾರ್ಜರ ನಿನ್ ಕೈಯಾಗ ಕೊಡ್ತೀನಿ. ಪರೀಕ್ಷೆ ಮಾಡಿ ಅದ್ರಾಗ ಯಾವ್ದು ಸರಿಹೊಂದುತ್ತೊ ಹೇಳ್ಬಿಡು. ನಾ ಅದ್ರಿಂದ್ಲೆ ನಿನ್ ಮೊಬೈಲ್ ಚಾರ್ಜ್ ಮಾಡಿಕೊಡ್ತೀನಿ'', ಎಂದು ಹೇಳಿ ನನ್ನ ಎರಡೂ ಚಾರ್ಜರ ಅವಳ ಕೈಗೆ ಕೊಟ್ಟೆ.

ರುಕ್ಕು ಒಂದಾದನಂತರ ಇನ್ನೊಂದು ಚಾರ್ಜರನ್ನು ತನ್ನ ಮೊಬೈಲ್‌ಗೆ ಹೊಂದಿಸಲು, ಸಣ್ಣ ಮಕ್ಕಳ ತರಹ, ಸರ್ಕಸ್ ಮಾಡಿದಳು. ಒಂದೂ ಚಾರ್ಜರ ಫಿಕ್ಸ್ ಆಗದೆ ಹೋದದ್ದು ಅವಳ ದೌರ್ಭಾಗ್ಯ ! ರುಕ್ಕು ಹಲ್ಲು ಕಿತ್ತ ಹಾವಾದಳು.

''ಹೌದಲ್ರಿ ಸಾಹೇಬ್ರ. ನಿಮ್ ಮಾತು ಅಗ್ದಿ ಬರೋಬರಿ ಐತ್ರಿ. ನಾನು ಸುಮ್ನೆ ಗಾಳಿ ಗುದ್ದಿ ಮೈಕೈ ನೋಯಿಸಿಕೊಂಡ್ಹಾಂಗಾಯ್ತು. ರಾತ್ರಿ ಮನಿಗ ಹ್ವಾದಮ್ಯಾಗ ನಾನ ಏರ್‌ಟೆಲ್ ಚಾರ್ಜರ ಹಾಕಿ ಚಾರ್ಜ್ ಮಾಡ್ಕೊಂತೀನಿ.'' ಎಂದು ಹೇಳಿ ತನ್ನ ಮೊಬೈಲ್‌ನ್ನು ಸೇಫ್ಟಿ ಪಾಕೇಟ್‌ನಲ್ಲಿ ಇಟ್ಟುಕೊಂಡು, ಮುಂದಿನ ಮನೆಯ ಕೆಲಸಕ್ಕೆ ಹೋದಳು.

* * *

ಸಾಯಂಕಾಲ ಐದರ ಹೊತ್ತು. ನಾನು ಟಿವಿ ಮುಂದಿನ ಸೋಫಾದ ಮೇಲೆ ಶೋಭಾಯಮಾನ ನಾಗಿದ್ದೆ. ಸಂಜೆ ಆರರ ಸುಮಾರಿಗೆ ಮನೆಯ ಬೆಲ್ ಸದ್ದು ಮಾಡಿತು. ನಾನು ಥಟ್ಟನೆ ಮೇಲೆದ್ದು, ದಡಬಡಿಸಿ ಹೋಗಿ ತಲೆಬಾಗಿಲು ತೆರೆದು ನೋಡಿದರೆ... ಇತ್ತೀಚೆಗೆ ಪರಿಚಯವಾದ, ಕರಿಕೋಟುಧಾರಿ, ಲಾಯರ್ ನಿಂತಿದ್ದ.

''ನೀ ಮನೀಗ್ಯಾಕ ಬಂದಿಯೋ ಮಾರಾಯ ? ಮನಿಮಟ ಬರೋವಂತ ಹರಕತ್ತೇನಿತ್ತು ? ಹೋಗ್ಲಿಬಿಡು. ನೀ ಬಂದ ಸಂಗ್ತಿ ಬಿಡಾನ ಹೇಳ್ಬಿಡು. ನನ್ಗೆ ವ್ಯಾಳೆ ಇಲ್ಲ'', ಎಂದು ಲಾಯರ್‌ಅನ್ನು ವಿಚಾರಿಸಿದೆ.

''ಸಾರ್, ನಿಮ್‌ತಾವ ತೀರಾ ಮುಖ್ಯ ವಿಷ್ಯದ ಬಗ್ಗೆ ಮಾತಾಡ್ಬೇಕಿತ್ತು, ನಾನೀಗ ಒಂದ ಪೇಚ್ನಾಗ ಬಿದ್ದು, ಒದ್ದಾಡಕ ಹತ್ತೀನಿ. ನನ್ ಕಾಪಾಡೋ ಭಾರನೆಲ್ಲ ನಿಮ್ಯಾಗ ಹೇರಿ, ಕಾಪಾಡ್ತಿರಿ ಎಂಬ ನಂಬ್ಗೆ ಮ್ಯಾಗ ಬಂದೀನಿ.

''ಈಗಿಂದೀಗೇ ನನ್ಗೆ ಮೂರ್ನೂರು ರೂಪಾಯಿ ಬೇಕಾಗೈತಿ. ನಿಮನ್ ನಂಬಿ ಬಂದೀನಿ. ಕೈ ಎತ್ತಬ್ಯಾಡ್ರಿ. ಬರಿಗೈಲಿ ನನ್ ವಾಪಸ್ ಕಳಿಸಬ್ಯಾಡ್ರಿ ಸಾರ್'', ಎಂದು ಗೋಗರೆದ.

ಅವನ ಮಾತಿನಲ್ಲಿ ನನಗೆ ನಂಬಿಕೆ ಬರಲಿಲ್ಲ. ಅದರಲ್ಲಿರೋದು ನೈಜತೆಯೋ ಇಲ್ಲಾ ದಗಲ್ಬಾಜಿಯೋ ಒಂದೂ ತಿಳಿಯಲಿಲ್ಲ.

''ನೋಡಪಾ, ನಿನ್ಗೆ ಸಾಲ ಕೊಡಾಕ ಮನಸಿದ್ರೂ ಸೈತ ನನ್ ಹಂತೇಕ ರೊಕ್ಕನ ಇಲ್ಲ ತಗಿ. ನಾಳೆ ಬೆಳಗ್ಗೇನೆ ಬೆಳಗಾವಿಗೆ ಬೇರೆ ಹೋಗೋ ಕಾರ್ಯಕ್ರಮ ಹಾಕ್ಕೊಂಡೀನಿ. ಊರಿಂದ ಬಂದಮ್ಯಾಗ ನೋಡೂಣಂತ. ಅರ್ಜಂಟಿದ್ರ ನೀ ಬ್ಯಾರೆ ಕಡೆ ನೋಡ್ಕೊ. ಒಂದಲ್ಲ ಒಂದ ಕಡೆ ಸಿಕ್ಕ ಸಿಗ್ತದ'', ಎಂದು ಅವನಲ್ಲಿ ಭರವಸೆ ಹುಟ್ಟಿಸಿ, ನಾನು ನುಣಿಚಿಕೊಳ್ಳುವ ಪ್ರಯತ್ನ ಮಾಡಿದೆ.

ಆದರೆ ನಕ್ಷತ್ರಿಕನಾಗಿ ನನ್ನನ್ನು ಬೆಂಬತ್ತಿರುವ ಈ ಶನಿಯನ್ನು ಸಾಗಹಾಕುವುದು ನನಗೊಂದು ಸವಾಲು ! ಲಾಯರ್ ಜಿಗಣಿ ಗೋತ್ರದವನು ಬೇರೆ.

''ಸಾರ್ ಹಾಂಗ್ ಅನ್‌ಬ್ಯಾಡ್ರಿ. ನನ್ ಮರ್ಯಾದೆ ಸವಾಲು ! ನನ್ ಉಳಿಸೋದು, ಬೀಳಿಸೋದು ಎಲ್ಲೂ ನಿಮ್ ಕೈಯಾಗ ಇರೋದು. ನಿಮ್ ಸಾಲನ ನಾಳೆ ಎಷ್ಟೊತ್ತಿದ್ರು ವಾಪಸ್ ಮಾಡ್ತೀನಿ ಸಾರ್. ಮನ್ಯಾಗ ನೀವಿರದಿದ್ರ, ನಿಮ್ ಮನಿಯಾಕಿ ಕೈಯಾಗ, ನಮ್ಮಪ್ಪಾಣೆಗೂ, ಕೊಟ್ಟು ಹೊಗ್ತೀನಿ ಸಾರ್. ರೊಕ್ಕದ ಚಿಂತಿ ಮರ್ತುಬಿಡ್ರಿ.''

ಹೀಗೆ ದಮ್ಮಯ್ಯಂತ ಬೇಡಿಕೊಂಡಾಗ ಇಲ್ಲವೆನ್ನಲಾದೀತಾ ! ಅದೂ ಅಲ್ಲದೆ ಸಾಲವನ್ನು ನಾಳೆಯೇ ತೀರಿಸುವ ಭರವಸೆ ಬೇರೆ. ಅವನ ಮಾತು ಕೇಳಿ, ಬಿಸಿಲಿಗೆ ಕರಗುವ ಬೆಣ್ಣೆ ತರ, ನನ್ನ ಮನಸ್ಸು ಕರಗಿತು.

ನಿಂತ ಕಾಲಮೇಲೆ ರೊಕ್ಕ ಎಣಿಸಿ, ನಾಳೆ ಸಾಲ ವಾಪಸ್ ಮಾಡುವುದನ್ನು ಮರೆಯಬೇಡವೆಂದು ಕಡ್ಡಿ ಮುರಿದಂತೆ ಹೇಳಿ ಅವನನ್ನು ಮನೆಯಿಂದ ಸಾಗಹಾಕಿದೆ.

ಮಾರನೇ ದಿನ ಮುಂಜಾನೆ ನಾನು ಬೆಳಗಾವಿಗೆ ಪ್ರಯಾಣಿಸಿದೆ. ನಾಲ್ಕು ದಿವಸ ಅಲ್ಲಿ ಕಳೆದು, ಐದನೆಯ ದಿನ ಗದುಗಿಗೆ ವಾಪಸ್ ಆದೆ. ಮನೆಯೊಳಗೆ ಕಾಲಿರಿಸುತ್ತಿದ್ದಂತೆ ಮನದನ್ನೆಯನ್ನು ಕೇಳಿದೆ.

''ಅಲ್ಲ ಮಾರಾಯ್ತಿ ಯಾರಾರ ಬಂದು ನಿನ್ ಕೈಯಾಗ ಮೂರ್ನೂರು ರೂಪಾಯಿ ಏನಾರ ಕೊಟ್ಟ ಹೋಗ್ಯಾರೇನು ?''

''ಯಾವ ಬಿಕನಾಸಿನೂ ಮನಿಗೆ ಬಂದಿಲ್ಲ, ಬಿಡಿಗಾಸು ಕೊಟ್ಟಿಲ್ಲ. ನನಗ್ಯಾಕ ಬೇಕ್ರಿ ಇಲ್ಲದ ಉಸಾಬರಿ'', ಎಂದು ಹರಿತವಾಗಿ ಪ್ರತಿಕ್ರಿಯಿಸಿದಳು.

ಅದನ್ನು ಕೇಳಿ ನಾನು ಬೆಚ್ಚಿಬಿದ್ದೆ! ಹೊಟ್ಟೆಯಲ್ಲಿ ಹಸಿ ಖಾರ ಕಲಸಿದಂತಾಯಿತು ! ಕುಡುಕ ಲಾಯರ ಕಡೆಗೂ ತನ್ನ ನೈಜ ಬಣ್ಣ ತೋರಿಸಿಬಿಟ್ಟಿದ್ದ.

ಒಂದು ವಸಂತಕಾಲ ಗತಿಸಿಹೋದರೂ, ಕರಿಕೋಟಿನ ಲಾಯರ್, ಹೇಳಿಹೋದ ಆ 'ನಾಳೆ ದಿನ', ಈವರೆಗೂ ಬಂದಿಲ್ಲ. ಬರುವ ಸಾಧ್ಯತೆಗಳು ಅಪರೂಪ! ಅವನ ಭರವಸೆ ಹಸಿ ಸುಳ್ಳೆಂದು ನನಗೆ ಮನವರಿಕೆಯಾಯಿತು.

ಪ್ರತಿದಿನ ಸಿಟಿಗೆ ಹೋಗುವ ಹತ್ತರ ಸಿಟಿಬಸ್‌ಅನ್ನು ನನ್ನೊಟ್ಟಿಗೆ ಹತ್ತುತ್ತಿದ್ದವನು, ಮುಂದೆಂದೂ ಈ ಕಡೆ ತಲೆ ಹಾಕಲಿಲ್ಲ. ಎಲ್ಲಿಯೂ ಮುಖ ತೋರಿಸಲಿಲ್ಲ. ಮುಖ ಮರೆಸಿಕೊಂಡು ತಿರುಗಾಡುತ್ತಿದ್ದ.

ಒಂದು ದಿನ ಸ್ನೇಹಿತರ ಕೂಟದಲ್ಲಿ ಕರಿಕೋಟಿನ ಲಾಯರಿಗೆ ನಾನು ಕೊಟ್ಟ ಸಾಲದ ವಿಷಯವನ್ನು ಪ್ರಸ್ತಾಪಿಸಿದೆ.

''ನಿನ್ ತಲಿಮ್ಯಾಗ ಚಪ್ಪಡಿಕಲ್ಲ ಎಳ್ಕೊಂಡಬಿಟ್ಟೆಲ್ಲೊ ಮಾರಾಯ ! ಹೋಗಿ ಹೋಗಿ ಆ ದಗಲ್ಬಾಜಿ ಕುಡುಕನಿಗೆ ನೀ ಸಾಲ ಕೊಟ್ಟೀಯಲ್ಲ ನಿನ್ ತಲಿಗಿಲಿ ಕೆಟ್ಟೇತೇನ್ಲೆ? ಸಾಲ ಕೊಡಾಕ ಮುಂಚೆ ನಮನ್ ಒಂದ ಮಾತ ಕೇಳಾಕ ನಿನ್ಗೇನ್ ಧಾಡಿಯಾಗಿತ್ತು ?

''ಸದ್ಯ, ಸಾವಿರ ಗಟ್ಲೆ ಹಣ ಕೊಡ್ಲಿಲ್ಲ. ಅದ ನಿನ್ನ ಪುಣ್ಯ ಅಂತ ತಿಳ್ಕೊ ನನ್ಮಗನೆ. ಇಲ್ಲದ್ದೆಲ್ಲ ತಲಿಗೆ ಹಚ್ಕೊಬ್ಯಾಡ ಮಾರಾಯ.''

''ಆದದ್ದು ಆಯ್ತು ಹೋದದ್ದುಹೋಯ್ತು. ನೀ ಸಾಲ ಕೊಟ್ಟ ಹಣ ಸ್ಮಶಾನಕ್ಕ ಹೋದ ಹೆಣ ಅಂತ ತಿಳ್ಕೊಂಡು ಅದಕ್ಕ ತಿಲಾಂಜಲಿ ಬಿಟ್ಟುಬಿಡು.''

''ಆ ತಲೆತಿರುಕ ಲಾಯರ್ ನಮ್ ತಾವನು ಸಾಲ ಇಸ್ಕೊಂಡು ಹ್ವಾದವ ಇವತ್ತಿನ ವರೆಗೂ ಪತ್ತೇನ ಇಲ್ಲ! ಸಾಲ ತೀರಿಸೋದು ಅವ್ನ ಜಾಯಮಾನದಾಗನ ಇಲ್ಲ ತಗಿ.''

''ಎಂಥ ಕೇಡುಗಾಲ ಬಂತಪಾ ಶಿವನೆ! ನವಪೀಳಿಗೆಯ ಯುವಕರನ್ನು ನಂಬುವುದು ಕಷ್ಟ. ವ್ಯವಹಾರದೊಳಗ ನಾವ ಒಂಚೂರು ಹುಷಾರಾಗಿರಬೇಕು ನೋಡು'' ಎಂದು ಬೈದು ಬುದ್ಧಿವಾದ ಹೇಳಿದರು.

ಇತ್ತೀಚೆಗೆ ಬಂದ ಬಿಸಿಬಿಸಿ ಸುದ್ದಿ ಏನಂದರೆ ಕರಿಕೋಟಿನ ಲಾಯರ್, ಭವಿಷ್ಯತ್ಕಾಲದಲ್ಲಿ ಯಾರ ಬಳಿಯೂ ಸಾಲ ಕೇಳಲು ಬರುವುದಿಲ್ಲವಂತೆ. ಅಷ್ಟೇ ಅಲ್ಲ, ಹಿಂದೆ ತೆಗೆದುಕೊಂಡು ಹೋದ ಸಾಲವನ್ನು ವಾಪಸ್ ಮಾಡುವ ಚಾನ್ಸ್ ಇಲ್ಲವಂತೆ. ಯಾಕೆಂದರೆ, ಈಗ ಅವನು ಕೈಲಾಸವಾಸಿಯ ಹತ್ತಿರ ಬೃಹತ್ತು ಮೊತ್ತದ ಸಾಲ ಕೇಳಲು ಕೈಲಾಸಕ್ಕೆ ಜಿಗಿದಿರುವನಂತೆ ! ಕುಡುಕನ ಜೀವ ನೀರಮೇಲಿನ ಗುಳ್ಳೆಯಂತೆ !

ನಾನು ಕರಿಕೋಟಿನ ಲಾಯರಿಗೆ ಸಾಲಕೊಡುವಾಗ 'ಅತಿ ವಿನಯಂ ಚೋರ ಲಕ್ಷಣಂ' ಎಂಬ ಸುಭಾಷಿತ ನನಗೇಕೆ ಜ್ಞಾಪಕಕ್ಕೆ ಬರಲಿಲ್ಲ? ನನಗೆ ಯಾವ ಮಂಕು ಕವಿದಿತ್ತೊ ನಾ ಕಾಣೆ !


ರುದ್ರಯ್ಯ ವಿ. ಗದಗ

ನಂ. ೨೪೦/೪೨, 'ಪಂಚವಟಿ', ವಿವೇಕಾನಂದ ನಗರ, ನೀರಿನ ಟ್ಯಾಂಕ್ ಹತ್ತಿರ

ಗದಗ - ೫೮೧ ೧೦೧



ನಭಾವಲೋಕನ

# ಶುಕ್ರದ ಪುನರಾಗಮನ

**ಸೂ**ರ್ಯಾಸ್ತವಾಗುತ್ತಿದ್ದ ಹಾಗೆ ಪಶ್ಚಿಮದ ಅಂಚಿನಲ್ಲಿ ಕಾಣುವ ಪ್ರಕಾಶಮಾನವಾದ ಚುಕ್ಕೆಯೇ ಶುಕ್ರ. ಇನ್ನು ಮುಂದೆ ಅದು ಸಂಜೆಯ ಆಕಾಶದಲ್ಲಿ ಕಂಗೊಳಿಸಲಿದೆ. ತಿಂಗಳ ಆರಂಭದಲ್ಲಿ ಅದನ್ನು ಹುಡುಕುವುದು ಕಷ್ಟವಾದರೂ ತಿಂಗಳ ಕೊನೆಗೆ ಸಾಕಷ್ಟು ಸ್ಫುಟವಾಗಿ ಕಂಡುಬರುವುದು. ೨೮ರ ಸಂಜೆ ರೇಖಾ ಚಂದ್ರನ ಪಕ್ಕದಲ್ಲಿ ಕಾಣುವುದು.

ಸೂಕ್ಷ್ಮವಾಗಿ ಗಮನಿಸಿದರೆ ಇನ್ನೂ ಒಂದು ಚುಕ್ಕೆ ಕಾಣುವುದು. ಅದು ಬುಧ ಗ್ರಹ. ಹಗಲಿನಲ್ಲಿ ಚಂದ್ರ ಇದರ ಮುಂದೆ ಹಾದುಹೋಗುವ ಆಚ್ಛಾದನೆ ಎಂಬ ಘಟನೆ ನಡೆಯುತ್ತದೆ. ಅದನ್ನು ನೆಲದಿಂದ ವೀಕ್ಷಿಸುವುದು ಸಾಧ್ಯವಿಲ್ಲ. ಆದರೆ ಸೋಹೋ ಎಂಬ ಬಾಹ್ಯಾಕಾಶ ವೀಕ್ಷಣಾಲಯ ಒದಗಿಸುತ್ತಿರುವ ಚಿತ್ರಗಳಲ್ಲಿ ಕಾಣಬಹುದು. (http://sohowww.nascom.nasa.gov/date/reatime-images.html)

ಹುಣ್ಣಿಮೆ ೧೨ರಂದು ಬೆಳಗಿನ ೭:೩೬ಕ್ಕೆ ; ಇದಾದ ಕೆಲವೇ ಗಂಟೆಗಳಲ್ಲಿ ಚಂದ್ರ ಭೂಮಿಯ ಅಂತರ ಗರಿಷ್ಠವಾಗುತ್ತದೆ. (೧೭:೧೨ಕ್ಕೆ) ಆದ್ದರಿಂದ ಅಂದಿನ ಚಂದ್ರ ಅತಿ ಪುಟ್ಟ ಹುಣ್ಣಿಮೆ ಚಂದ್ರ ಆಗಲಿದೆ ಎನ್ನಬಹುದು. ಇದು ಲೆಕ್ಕಾಚಾರಕ್ಕೆ ಮಾತ್ರ. ಬರಿಗಣ್ಣಿನಿಂದ ನೋಡಿ ಆನಂದಿಸುವವರಿಗೆ ಹುಣ್ಣಿಮೆ ಚಂದ್ರ ಯಾವಾಗಲೂ ದೊಡ್ಡದೇ; ಪ್ರಕಾಶಮಾನವಾದದ್ದೇ. ತಾತ್ಪರ್ಯವೆಂದರೆ ಈ ಬಗೆಯ ವ್ಯತ್ಯಾಸಗಳನ್ನು ಬರಿಗಣ್ಣು ಗುರುತಿಸಲಾರದು. ಆದರೆ ಅಂದಿನ ಉಬ್ಬರ ಇಳಿತಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಮಾತ್ರ ಪ್ರಮಾಣ ಕಡಿಮೆ ಎಂದು ತಿಳಿಯಬಹುದು.

ಮಂಗಳ ಗ್ರಹ ಬೆಳಗಿನ ಜಾವ ಕಾಣುವುದು. ಅದು ಕಟಕವನ್ನು ದಾಟಿ ಸಿಂಹದತ್ತ ಚಲಿಸುತ್ತಿದೆ. ೨೨ರಂದು ಅದು ರೇಖಾ ಚಂದ್ರನೊಡನೆ ಮಘ ನಕ್ಷತ್ರದ ಸಮೀಪ ಇರುವುದನ್ನು ಕಾಣಬಹುದು.

ಗುರುಗ್ರಹ ೨೯ರಂದು ಸೂರ್ಯನಿಗೆ ವ್ಯಾಸೀಯವಾದ ಬಿಂದುವಿನಲ್ಲಿರುತ್ತದೆ. ಇದನ್ನೇ ವಿಯುತಿ ಎಂದು ಕರೆಯುತ್ತೇವೆ. ಭೂಮಿ ಅದನ್ನು ಹಿಂದೆ ಹಾಕಿ ಮುಂದೆ ಓಡುವ ಕಾರಣ ಅದು ಹಿಂದಕ್ಕೆ ಚಲಿಸುತ್ತಿದೆಯೋ ಎನ್ನಿಸುತ್ತದೆ. ಇದೇ ಹಿನ್ನಡೆ ಅಥವಾ ವಕ್ರ ನಡೆ. ಈ ಘಟನೆಯ ಕಾರಣ ಗುರು ಮತ್ತು ಭೂಮಿಯ ನಡುವಿನ ಅಂತರ ಕನಿಷ್ಠ ಅಂದರೆ ಗುರು ಗ್ರಹ ಅತಿ ಪ್ರಕಾಶಮಾನವಾಗಿ ಕಾಣುತ್ತದೆ. ಅಲ್ಲದೆ ರಾತ್ರಿ ಇಡೀ ನೋಡಲು ಸಿಗುತ್ತದೆ. ಆದ್ದರಿಂದ ದೂರದರ್ಶಕ ಬಳಸಿ ಅದರ ಕೆಂಪು ಮಚ್ಚೆಯನ್ನು ನೋಡಬಹುದು. ಆವರ್ತನಾವಧಿ ೧೦ಗಂಟೆ ಮಾತ್ರ ಆದ್ದರಿಂದ ಒಂದೇ ರಾತ್ರಿಯಲ್ಲಿ ಅದರ ಚಲನೆಯನ್ನು ಗುರುತು ಮಾಡಬಹುದು.



೧೩ರ ಸಂಜೆ ಚಂದ್ರ ಮತ್ತು ಗುರು

ಇನ್ನುಳಿದ ಗ್ರಹ ಶನಿ; ಈ ತಿಂಗಳು ಕಾಣುವುದಿಲ್ಲ. ೧೩ರಂದು ಅದರ ಯುತಿ ಅಂದರೆ ಸೂರ್ಯನ ನೇರಕ್ಕೆ ' ರುತ್ತದೆ. ಸೂರ್ಯನೊಡನೆ ಉದಯಿಸಿ ಕಂತುವುದರಿಂದ ನಮಗೆ ನೋಡಲು ಸಿಗುವುದಿಲ್ಲ.

ಆಕಾಶಗಂಗೆಯ ವೈಭವವನ್ನು ನೋಡಲು ಇದೀಗ ಕೊನೆಯ ಅವಕಾಶ. ನೈಋತ್ಯದ ಅಂಚಿನಲ್ಲಿ ಸಂಜೆ ವೃಶ್ಚಿಕ ಕಾಣುತ್ತದೆ. ಅದರ ಪಕ್ಕಕ್ಕೆ ಧನು – ಈ ಭಾಗ ಬಹಳ ಆಕರ್ಷಕವಾದದ್ದು. ಮೋಡಗಳು ಬಿಡುವು ಕೊಟ್ಟಾಗ ಮರೆಯದೆ ವೀಕ್ಷಿಸಿ. ಹಾಗೆಯೇ ನೆತ್ತಿಯ ಮೇಲೆ ಕಾಣುವ ಗರುಡ, ವೀಣಾ ಮತ್ತು ರಾಜಹಂಸಗಳ ನಡುವೆ ಆಕಾಶಗಂಗೆಯ ಇನ್ನೊಂದು ಭಾಗವನ್ನೂ ಕಾಣಬಹುದು. ಇವುಗಳಿಗೆ ಹೋಲಿಸಿದರೆ ಪೂರ್ವದ ಮಕರ, ಕುಂಭ ಮತ್ತು ಮೀನಗಳ ಭಾಗ ಖಾಲಿ ಎನ್ನಿಸಬಹುದು.

ಉ
ಲಘು ಸಪ್ತರ್ಷಿ ಮಂಡಲ
ಕುಂತಿ
ದ್ರೌಪದಿ.
ಗುರು
ರಾಜಹಂಸ
ವೀಣಾ
ನಕುಲ
ಭೀಮ
ಪೂ
ಮೀನ
ಗರುಡ
ಉರಗಧರ
ಕುಂಭ
ಮಕರ
ಶುಕ್ರ
ಪ
ವೃಶ್ಚಿಕ
ಧನು
ದಕ್ಷಿಣ ಮೀನ
ಬಕ
ದ

ಹ್ಯಾಲೀ ಧೂಮಕೇತುವಿನ ತುಣುಕುಗಳು ಈ ತಿಂಗಳು ಉಲ್ಕಾವೃಷ್ಟಿಯಾಗಿ ಕಾಣಲಿವೆ. ೧೭ರಿಂದ ೨೪ರ ಅವಧಿಯ ಬೆಳಗಿನ ಜಾವದಲ್ಲಿ ಒರೈಯನ್ (ಮಹಾವ್ಯಾಧ) ನಕ್ಷತ್ರಪುಂಜದ ದಿಕ್ಕಿನಿಂದ ಗಂಟೆಗೆ ಸುಮಾರು ೨೦ ಉಲ್ಕೆಗಳು ಕಾಣುವ ಸಾಧ್ಯತೆ ಇದೆ. ಚಂದ್ರನ ಬೆಳಕು ಈ ಅವಧಿಯಲ್ಲಿ ಅಡಚಣೆಯಾಗುವುದಿಲ್ಲ.

ಜೆರಾಡ್ ಧೂಮಕೇತು ಹರ್‌ಕ್ಯುಲಿಸ್ (ಭೀಮ) ಪುಂಜದಲ್ಲಿ ಕಾಣಲಿದೆ. ಅದರ ಪ್ರಕಾಶ ಕ್ರಮೇಣ ಹೆಚ್ಚುತ್ತಿದ್ದರೂ ಬರಿಗಣ್ಣಿಗೆ ಕಾಣಲಾರದು; ಅದರ ಸ್ಥಾನ ವಿವರಗಳನ್ನು ನ್ಯೂಝಿಲೆಂಡ್‌ನ http://www.rasnz.org.nz/Comets/2011 Garradd.htm ಈ ವೆಬ್‌ಸೈಟ್‌ನಿಂದ ಪಡೆಯಬಹುದು.

ಕೆಲವು ತಿಂಗಳುಗಳ ಹಿಂದೆ ಸುದ್ದಿಯಲ್ಲಿದ್ದ ಎಲಿನಿನ್ ಎಂಬ ಧೂಮಕೇತು ಈ ತಿಂಗಳ ೧೬ರಂದು ಭೂಮಿಗೆ ಸಮೀಪ (ಅಂದರೆ ೯೦ ಮಿಲಿಯನ್ ಕಿ. ಮೀ. ಮಾತ್ರ !) ಹಾದುಹೋಗಲಿದೆ. ಇದು ೨೦೧೨ರ ''ಪ್ರಳಯ''ಕ್ಕೆ ಕಾರಣವಾಗುತ್ತದೆ ಎಂಬೆಲ್ಲಾ ಊಹಾಪೋಹಗಳಿದ್ದವು. ಇದು ಸೂರ್ಯನಿಂದ ಹೊರಬೀಳುವ ಶಕ್ತಿಶಾಲೀ ಕಿರಣಗಳ ಮಾರುತಕ್ಕೆ ಗುರಿಯಾಗಿ ಕ್ರಮೇಣ ತುಂಡು ತುಂಡಾಗಿ ಒಡೆದುಹೋಗುತ್ತಿದೆ. ಆದ್ದರಿಂದ ಬರಿಗಣ್ಣಿಗೆ ಕಾಣುವ ಅವಕಾಶವೂ ಸಿಗಲಾರದು.

**ಖಗೋಳ ದಿನಚರಿ**

೪ ಚಾಂದ್ರಮಾಸದ ಪ್ರಥಮ ಪಾದ
೯ ಬುಧ - ಚಿತ್ರಾ ಜೋಡಿ
೧೨ ಹುಣ್ಣಿಮೆ ೦೭:೩೬ಕ್ಕೆ;
ಚಂದ್ರ - ಭೂಮಿ ನಡುವೆ ಕನಿಷ್ಠ ದೂರ ೧೭:೧೨ಕ್ಕೆ
೧೩ ಸಂಜೆ ಚಂದ್ರ ಮತ್ತು ಗುರು ಜೋಡಿ*
ಶನಿಗ್ರಹದ ಯುತಿ (ಸೂರ್ಯನೊಡನೆ ಉದಯ ಮತ್ತು ಅಸ್ತಮಾನ)
೧೭-೨೪ ಮುಂಜಾವು ಓರಿಯೊನಿಡ್ಸ್ ಉಲ್ಕಾವೃಷ್ಟಿ
೨೦ ಚಾಂದ್ರಮಾಸದ ಕೊನೆಯ ಪಾದ
೨೨ ಮುಂಜಾವು ಮಂಗಳ, ಮಘ ಮತ್ತು ಚಂದ್ರ ಪುಟ್ಟ ಗುಂಪು*
೨೬ ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
೨೭ ಅಮಾವಾಸ್ಯೆ ೦೧:೨೪ಕ್ಕೆ
೨೮ ಸಂಜೆ ಶುಕ್ರ, ಬುಧ ಮತ್ತು ರೇಖಾ ಚಂದ್ರ ಪುಟ್ಟ ಗುಂಪು*
೨೯ ಗುರುಗ್ರಹದ ವಿಯುತಿ

(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

### ವೈ. ಎಸ್. ಗುಂಡೂರಾವ್

# ಮಾತೇ ಶಕ್ತಿಯ ಮೂಲವಯ್ಯ...

**ಮ**ನುಷ್ಯ ತನ್ನ ಭಾವನೆಗಳಿಗೆ ಮಾತಿನ ರೂಪ ಕೊಟ್ಟಾಗಿನಿಂದಲೂ ಪ್ರಪಂಚದಲ್ಲಿ ಮಾತಿಗೆ ಎಂತಹ ಮಹತ್ವ ಬಂದಿದೆ! ಮಾತೇ ಇಲ್ಲದಿದ್ದರೆ... ಊಹಿಸಲಸಾಧ್ಯ. ಆದರೆ ಹೀಗೆ ಆಡುವ ಮಾತು ಮೃದುವಾಗಿರಬೇಕು, ಎಲ್ಲರಿಗೂ ಪ್ರಿಯವಾಗುವಂತಿರಬೇಕು. ಕಠಿಣವಾಗಿ, ಬಿರುಸಾಗಿ ಮಾತನಾಡುವುದರಿಂದ ವಿರೋಧಿಗಳು ಹುಟ್ಟಿಕೊಳ್ಳುತ್ತಾರಷ್ಟೆ. ಆದ್ದರಿಂದ ಹಿತಮಿತವಾಗಿ, ಸಮಯ ಸಂದರ್ಭಗಳಿಗೆ ತಕ್ಕಂತೆ ಮಾತನಾಡಿದಾಗಲೇ ಮಾತಿಗೆ ಬೆಲೆ ಬರುತ್ತದೆ.

ಬಸವಣ್ಣನವರು ತಮ್ಮ ವಚನದಲ್ಲಿ ನುಡಿಯನ್ನು ಮುತ್ತಿನ ಹಾರಕ್ಕೆ ಹೋಲಿಸಿದ್ದಾರೆ. ''ನುಡಿದರೆ ಮುತ್ತಿನ ಹಾರದಂತಿರಬೇಕು, ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು'', ಎಂದಿದ್ದಾರೆ. ಮಾತು ಶುದ್ಧ ದ್ರವ, ಇಬ್ಬನಿ, ತುಂತುರು, ವರ್ಷಧಾರೆ. ಆದರೆ ನುಡಿದರೆ ಮುತ್ತಿನ ಹಾರದಂತಿರಬೇಕೇ ವಿನಾ ಎಂಜಲು ಹಾರದಂತೆಯೂ ಇರಬೇಕು! ಕೆಲವರು ಮಾತು ಪ್ರಾರಂಭಿಸಿದರೆ ಸಾಕು, ಎಂಜಲಿನ ವರ್ಷಧಾರೆ ಹಾರತೊಡಗುತ್ತದೆ.

ಒಮ್ಮೆ ನಾಡಿಗೇರ ಕೃಷ್ಣರಾಯರು ಅಪರೂಪಕ್ಕೆ ಸಂಗೀತ ಕಚೇರಿಗೆ ಹೋದರಂತೆ. ಇವರು ಹೋಗಿ ನೋಡಿದರೆ ಕಿಕ್ಕಿರಿದ ಸಭಾಗೃಹ. ಸಂಚಾಲಕರೊಬ್ಬರು ಓಡಿ ಬಂದು, ಬನ್ನಿ ಬನ್ನಿ ಎಂದು ಮುಂದೆ ಕರೆದೊಯ್ದರಂತೆ. ಆಹಾ! ಎಂತಹ ಆತಿಥ್ಯ, ನನ್ನನ್ನೂ ಗಣ್ಯವ್ಯಕ್ತಿಯೆಂದು ಭಾವಿಸಿದ್ದಾರಲ್ಲ ಎಂದು ಬೀಗುತ್ತ ಮುಂದೆ ಹೋಗಿ ಕುಳಿತರಂತೆ. ಸಂಗೀತಗಾರರ ಎದುರಿಗೇ ಕೆಲ ಅಡಿಗಳ ಅಂತರದಲ್ಲಿ ಕೂಡುವ ಭಾಗ್ಯ! ಯಾರಿಗುಂಟು ಯಾರಿಗಿಲ್ಲ ಈ ಸೌಭಾಗ್ಯ, ಎಂದು ಕೂತರು. ಸಂಗೀತಗಾರರು ಹಾಡುಗಾರಿಕೆಯನ್ನು ಪ್ರಾರಂಭಿಸಿದರು. ಕೆಲ ನಿಮಿಷಗಳು ಕಳೆದಿರಬಹುದು. ತುಪು ತುಪು ತುಂತುರ ಹನಿ. ಅವರು ಹಾಡುವುದಕ್ಕಿಂತ ಎಂಜಲು ಹಾರಿಸಿದ್ದೇ ಜಾಸ್ತಿ. ಎಂಥ ಅದೃಷ್ಟವೆಂದು ಕೊಂಡಿದ್ದರ ಭಾಗ್ಯವೆಂತಹದ್ದು ಎಂಬುದು ಈಗ ಅರ್ಥವಾಗಿತ್ತು. ಅಂದಿನಿಂದ ಇನ್ನು ಮುಂದೆ ಸಂಗೀತ ಸಭೆಗೆ ಬಂದರೆ ಎಂದಿಗೂ ಮುಂದೆ ಕೂಡುವುದಿಲ್ಲ ಎಂದು ಶಪಥ ಮಾಡಿದರಂತೆ.



ಇನ್ನು ಕೆಲವರಿರುತ್ತಾರೆ. ಅಂಥವರಿಗೆ ಮಾತಿನ ಮೇಲೆ ಹಿಡಿತವೇ ಇರುವುದಿಲ್ಲ, ಏನು ಮಾತನಾಡಬೇಕು, ಎಷ್ಟು ಮಾತನಾಡಬೇಕು ಎಂಬ ಸಮಯ, ಸಂದರ್ಭವನ್ನರಿಯದೆ ಸುಮ್ಮನೆ ಮಾತನಾಡಲು ಪ್ರಾರಂಭಿಸಿಬಿಡುತ್ತಾರೆ. ಬರೇ ಮಾತನಾಡಿದರೆ ಏನೂ ನಷ್ಟವಾಗುವುದಿಲ್ಲ, ಅದರಿಂದಾಗಿ ಕೇಳುಗರಿಗೆ ಕಿವಿ ಚಿಟ್ಟುಹಿಡಿಯಬಹುದು, ಅಷ್ಟೆ. ಆದರೆ ಇತರರ ಬಗ್ಗೆ ಅನವಶ್ಯಕವಾಗಿ ಜರೆದು ಮಾತನಾಡಿದಾಗ, ಅವರ ಬಗ್ಗೆ ಗೌರವ ಭಾವನೆ ತಾಳಿದ್ದವರ ಮನಸ್ಸಿನ ಮೇಲೆ ಎಂತಹ ಪರಿಣಾಮ ಬೀರುತ್ತದೆ ಎಂದು ಅರ್ಥ ಮಾಡಿಕೊಳ್ಳದೆ ಲಘುವಾಗಿ ಮಾತನಾಡಿಬಿಡುತ್ತಾರೆ. ಇವರ ಲಘುವಾದ ಮಾತಿನ ಹವ್ಯಾಸ ತಿಳಿದವರಾದರೆ ಸರಿ, ಇಲ್ಲದಿದ್ದರೆ ಮೂರನೆಯವರ ಬಗ್ಗೆ ಕೇಳುಗರಿಗೆ ಇಲ್ಲದ ಸಂಶಯಕ್ಕೆಡೆ ಮಾಡಿಕೊಡುತ್ತದೆ. ಅದಕ್ಕೇ ಹೇಳುವುದು; ಒಬ್ಬ ವ್ಯಕ್ತಿಯ ಬಗ್ಗೆ ಅರಿಯಬೇಕೆಂದರೆ ಅವನ ಚರಿತ್ರೆಯನ್ನೆಲ್ಲ ಓದಬೇಕಿಲ್ಲ, ಆತನ 'ನಡೆ', 'ನುಡಿ' ಎರಡರಿಂದಲೇ ನಿರ್ಧರಿಸಿಬಿಡಬಹುದು. ಅಂತರಂಗ ಪರಿಶುದ್ಧವಾಗಿದ್ದು, ನಿಷ್ಕಲ್ಮಶ ಭಾವನೆಗಳನ್ನು ಹೊಂದಿದ್ದರೆ ಖಂಡಿತ ಅಂತಹವರ ಮಾತಿಗೆ ಬೆಲೆ ಇದ್ದೇ ಇರುತ್ತದೆ. ಆತ ಏನು ಹೇಳುತ್ತಾನೆಂದು ಆತನ ಮಾತಿಗೆ ಕಾಯುತ್ತಾರೆ. ಕೆಲವರಿಗಂತೂ ಮನಶ್ಶುದ್ಧಿ, ವಾಕ್‌ಶುದ್ಧಿ ಎರಡೂ ಇರುವುದಿಲ್ಲ, ಬಾಯಿಬಿಟ್ಟರೆ ಸಾಕು, ಹಿರಿ-ಕಿರಿಯರೆನ್ನದೆ ಲಘುವಾಗಿ ಮಾತನಾಡತೊಡಗುತ್ತಾರೆ. ಇವರ ಸ್ವಭಾವ ತಿಳಿದವರು ಯಾರೂ ಇಂತಹವರ ಮಾತಿಗೆ ಕಿವಿಗೊಡಬಯಸುವುದಿಲ್ಲ. ಕೋಪದಿಂದ ನುಡಿಯುವ ಮಾತಿನ ಪರಿಣಾಮವೇನೆಂಬುದು ಕೋಪಗೊಂಡವರಿಗೇ ತಿಳಿಯದು. ಅದಕ್ಕೆ ಹೇಳುವುದು, 'ಮಾತೇ ಮುತ್ತು - ಮಾತೇ ಮೃತ್ಯು' ಎಂದು. ಇಂತಹವರ ಬಾಯಿಂದ ಕೇಳಿದವರು, ಅವಮರ್ಯಾದೆಗೊಳಗಾದೆನೆಂದು ತಿಳಿದಾಗ, ಏನು ಬೇಕಾದರೂ ನಿರ್ಧರಿಸಿಬಿಡಬಹುದು. ಒಮ್ಮೆ ಆಡಿದ ಮಾತನ್ನು ಪುನಃ ಹಿಂದೆ ಪಡೆಯಲಾಗದು. ಮಾತು ಆಡಿದರೆ ಹೋಯಿತು, ಮುತ್ತು ಒಡೆದರೆ ಹೋಯಿತು.

ಮನುಷ್ಯ ತನ್ನ ಸಂವೇದನೆಗಳನ್ನು ವ್ಯಕ್ತಪಡಿಸಲು ಬಳಸಿಕೊಳ್ಳುವ ಮಾಧ್ಯಮವೇ ಮಾತು. 'ಮಾತು' ಬಲು ಸೂಕ್ಷ್ಮವಾದ ಅಭಿವ್ಯಕ್ತಿ, ಮನಸ್ಸಿನಾಳದಲ್ಲಿ ಆಲೋಚನೆಗಳು ಹೇಗೆ ಆವಿರ್ಭವಿಸುತ್ತವೆಯೋ, ಹಾಗೆಯೇ ಪದಗಳ ಮೂಲಕ ಬಾಯಿಂದ ಹೊರಬರುತ್ತವೆ. ಒಬ್ಬ ವ್ಯಕ್ತಿಯ ವ್ಯಕ್ತಿತ್ವವನ್ನು ಆತನ ಮಾತಿನಿಂದಲೇ ನಿರ್ಧರಿಸಿಬಿಡಬಹುದು. ಆತನು ಉಪಯೋಗಿಸುವ ಶಬ್ದಗಳಿಂದ ಆತನ ವ್ಯಕ್ತಿತ್ವ, ಸಂಸ್ಕೃತಿಯನ್ನು ಅರಿಯಬಹುದು. ಆಡುವ ಮಾತು ಒಬ್ಬನ ಘನತೆ, ಗೌರವಗಳನ್ನು ಹೆಚ್ಚಿಸುತ್ತದೆ. ಅಂತೆಯೇ ಇನ್ನೊಬ್ಬರ ಬಗ್ಗೆ ನುಡಿದಾಗಲೂ ಅವರ ಘನತೆ-ಗೌರವಗಳನ್ನು ಕಳೆದೂಬಿಡುತ್ತವೆ.

ಮಾತಿನಿಂ ನಗೆ ನುಡಿಯು, ಮಾತಿನಿಂ ಹಗೆಕೊಲೆಯು
ಮಾತಿನಿಂ ಸರ್ವ ಸಂಪದವು ಲೋಕಕ್ಕೆ
ಮಾತೆ ಮಾಣಿಕವು ಸರ್ವಜ್ಞ

– ಎಂದು ಸರ್ವಜ್ಞ ನುಡಿದಿದ್ದಾನೆ.

ಇನ್ನೂ ಕೆಲವರಿರುತ್ತಾರೆ. ಮಾತೇ ಆಡುವುದಿಲ್ಲ. ಮನಸ್ಸಿನಲ್ಲೇ ಎಲ್ಲವನ್ನು ಲೆಕ್ಕ ಹಾಕ ತೊಡಗುತ್ತಾರೆ. ಅಂದರೆ ಅವರ ಮಾತಿಗೆ ಬರ ಬಂದುಬಿಡುತ್ತದೆ. ಅಂತಹವರನ್ನು ಕಂಡಾಗ, ''ಅಹಹಾ! ಮಾತಾಡೋಕೆ ಸಾಯ್ತಾನೆ ನೋಡು!'' ಎನ್ನುತ್ತಾರೆ. ಇದು ಮಾತನಾಡ ದಿರುವವರ ಬಗ್ಗೆ ಉಪಯೋಗಿಸುವ ಸಾಮಾನ್ಯ ವಾಚಕವಷ್ಟೆ. ಮಾತನಾಡುವುದಕ್ಕೆ ಸಾಯ ಹೊರಡುವವನ ಬಾಯಲ್ಲಿ ಮಾತಾದರೂ ಹೇಗೆ ಬಂದೀತು ? ಇನ್ನು ಕೆಲವರು ಮಾತೇ ಆಡದಿದ್ದಾಗ, ''ಮಾತಾಡಕ್ಕೇನಾಗಿತ್ತು ರೋಗ, ಮಾತಾಡಿದ್ರೆ ನಿನ್ನ ಬಾಯಿಂದ ಮುತ್ತು ಸುರಿದು ಹೋಗ್ತಿತ್ತ'', ಎಂದು ಬೈಯುತ್ತಾರೆ. ಅಂದರೆ ಸಂದರ್ಭ ಬಂದಾಗ ನಾವು ಮಾತನಾಡಿದಾಗ ಬಿಗುವಿನಿಂದ ಕೂಡಿದ್ದ ಸನ್ನಿವೇಶ ತಿಳಿಯಾಗಬಹುದಿತ್ತು, ಅಪಾರ್ಥಕ್ಕೆಡೆ ಯಾಗುತ್ತಿರಲ್ಲಿಲ್ಲ ಎಂಬ ಅರ್ಥದಿಂದ ಈ ರೀತಿ ಹೇಳುತ್ತಾರೆ. ಇದು ಸರಿಯೇ. ಸಂದರ್ಭ ಬಂದಾಗ ಯಾರಿಗೂ ಸಂಶಯಕ್ಕೆ ಎಡೆಮಾಡಿಕೊಡದೆ ಅನ್ನಿಸಿದ್ದನ್ನು ಸ್ಪಷ್ಟವಾಗಿ ಹೇಳುವು ದೊಳಿತು. ಆದರೆ ಕೆಲವರು ಸಂದರ್ಭ ಬಂದರೂ ಮಾತೇ ಆಡದೆ ಪರಿಸ್ಥಿತಿಯನ್ನು ಮತ್ತಷ್ಟು ಜಟಿಲಗೊಳಿಸುತ್ತಾರೆ. ಮಾತನಾಡುವ ಸಂದರ್ಭ ಬಂದಾಗ ಮಾತಿಗೆ ದಾರಿದ್ರ್ಯವೇಕೆ ?

*ಪ್ರಿಯವಾಕ್ಯ ಪ್ರದಾನೇನ*
*ಸರ್ವೇ ತುಷ್ಯಂತಿ ಜಂತವಃ*
*ತಸ್ಮಾತ್ತ ದೇವ ವಕ್ತವ್ಯಂ*
*ವಚನೇ ಕಾ ದರಿದ್ರತಾ ?*

– ಪ್ರಿಯವಾಕ್ಯದಿಂದ, ಮೃದು ವಾಕ್ಯದಿಂದ ಎಲ್ಲರನ್ನೂ ಸಂತೋಷಗೊಳಿಸುವಂತಹ ಒಂದು ಸುಯೋಗ ಒದಗಿಬಂದಾಗ ಮಾತಿಗೇಕೆ ದಾರಿದ್ರ್ಯ ತರಬೇಕೆನ್ನುವುದೇ ಚಾಣಕ್ಯ ನೀತಿಸಾರ.

ಯಾವಾಗಲೂ ಮಾತು ಸೊಗಸಾಗಿರಬೇಕು, ಮೃದುವಾಗಿರಬೇಕು, ಪ್ರಿಯವಾಗಿರ ಬೇಕು. ಅಂತಹ ಮಾತು ನೊಂದ ಹೃದಯಗಳಿಗೆ ಸಾಂತ್ವನ ನೀಡಬಲ್ಲದು; ದುಃಖಿತ ಮನಸ್ಸಿಗೆ ನೆಮ್ಮದಿ ಕೊಡಬಲ್ಲದು. ಒಳ್ಳೆಯ ಮಾತುಗಳನ್ನು ಕೇಳಿದಾಗ ಯಾರ ಹೃದಯ ತಾನೆ ಅರಳು ವುದಿಲ್ಲ? ಮೃದುವಾದ ಮಾತುಗಳಿಂದ ಯಾರ ಹೃದಯ ತಾನೆ ಸಂತಸದಿಂದ ಬೀಗುವುದಿಲ್ಲ?

ಒಂದೂರಿನಲ್ಲಿ ಬಡದಂಪತಿಗಳು ಒಂದು ಹಸುವನ್ನು ಸಾಕಿಕೊಂಡಿದ್ದರು. ಆ ಗೃಹಿಣಿ ಪ್ರತಿದಿನ ಗೋವಿಗೆ ಸ್ನಾನಮಾಡಿಸಿ, ಪೂಜೆ ಮಾಡಿ, ''ನಿನ್ನಿಂದಲೇ ನಮ್ಮ ಜೀವನ ನಡೆಯುತ್ತಿರುವುದು, ನೀನೇ ನಮ್ಮ ಪಾಲಿನ ದೇವರು'', ಎಂದು ಹೇಳಿ ಹೊರಗಡೆ ಮೇಯಲು ಬಿಡುತ್ತಿದ್ದಳು. ಮೇಯ್ದು ಸಂಜೆ ಹಿಂದಿರುಗಿ ಬಂದಾಗ ಗೋವಿನ ಪಾದ ಪೂಜಿಸಿ, ''ನಿನ್ನಿಂದಲೇ ನಮ್ಮ ಜೀವನ ನಡೆಯುತ್ತಿರುವುದು, ನೀನೇ ನಮ್ಮ ಪಾಲಿನ ದೇವರು'', ಎಂದು ಮತ್ತೊಮ್ಮೆ ಹೇಳಿ ಹಾಲು ಕರೆದು, ಮಾರಿ ಜೀವನ ಸಾಗಿಸುತ್ತಿದ್ದಳು.

ಹೀಗೆ ಪ್ರತಿದಿನವೂ ನಡೆಯುತ್ತಿತ್ತು. ಕೆಲವು ಬಾರಿ ಗೋವು ಹುಲ್ಲು ಮೇಯಲು ಹೋದಾಗ, ಯಾರದ್ದೋ ಹೊಲಕ್ಕೊ, ಗದ್ದೆಗೋ ನುಗ್ಗಿದಾಗ ಏಟು ತಿಂದು ಅರೆ ಹೊಟ್ಟೆಯಿಂದ ಬಂದರೂ ಗೃಹಿಣಿ ಆಡುತ್ತಿದ್ದ ಮಾತಿನಿಂದ ಅದರ ನೋವೆಲ್ಲಾ ಮಾಯವಾಗಿಬಿಡುತ್ತಿತ್ತು. ಹೀಗೆ ಒಂದು ದಿನ ಹತ್ತಿರದ ಹೊಲಗದ್ದೆಗಳಲ್ಲಿ ಮೇವು ದೊರೆಯದಿದ್ದಾಗ, ಆ ಗೋವು ಕಾಡಿನ ಅಂಚನ್ನು ಪ್ರವೇಶಿಸಿತು. ಗೋವಿಗೆ ಆಶ್ಚರ್ಯ. ಅದೆಂತಹ ಸಮೃದ್ಧ ಹುಲ್ಲು ಮೈದಾನ! ಹಿಂದೆ ಹೊಲಗದ್ದೆಗಳಲ್ಲಿ ಅರ್ಧ ಹೊಟ್ಟೆಗೆ ಸಾಕಾಗುವಷ್ಟು ಮೇವೂ ದೊರೆಯುತ್ತಿರಲಿಲ್ಲ. ಇಂದು ಮೇವು ಸಮೃದ್ಧವಾಗಿದ್ದು ಹೊಟ್ಟೆ ತುಂಬ ತಿಂದು ಬಂದಿತು. ಯಥಾಪ್ರಕಾರ ಅದರ ಪಾದ ಪೂಜಿಸಿ ''ನಿನ್ನಿಂದಲೇ ನಮ್ಮ ಜೀವನ ನಡೆಯುವುದು, ನೀನೇ ನಮ್ಮ ಪಾಲಿನ ದೇವರು'', ಎಂದು ಹೇಳಿ ಹಾಲು ಕರೆದಾಗ ಗೋವು ಸಮೃದ್ಧವಾಗಿ ಮೇಯ್ದು ಬಂದಿದ್ದರಿಂದ ಹೆಚ್ಚಿಗೆ ಹಾಲು ನೀಡಿತು. ಗೃಹಿಣಿಯೂ ಸಂತೃಪ್ತಳಾದಳು. ಗೋವಿಗೆ ಕೂಡ ಇವಳ ಮಾತಿನಿಂದ ಅಷ್ಟುದೂರ ಹೋಗಿ ಮೇಯ್ದುಬಂದಿದ್ದರ ಶ್ರಮ ಪರಿಹಾರವಾಯಿತು.

ಮರುದಿನವೂ ಈ ಗೋವು ಅದೇ ಕಾಡಂಚಿಗೆ ಹೋದಾಗ ಅಲ್ಲಿ ಆಗಲೇ ಇನ್ನೊಂದು ಗೋವು ಹುಲ್ಲು ಮೇಯುತ್ತಿತ್ತು. ಎರಡೂ ಗೋವುಗಳು ಪರಸ್ಪರ ಪರಿಚಯ ಮಾಡಿಕೊಂಡು ಸ್ನೇಹಿತರಾದವು. ಕಾಡಿನಲ್ಲೇ ವಾಸವಾಗಿದ್ದ ಗೋವು ಒಂದು ದಿನ ''ನೀನೇಕೆ ವೃಥಾ ಅಷ್ಟು ದೂರ ಹೋಗಿ ಹಾಲು ನೀಡಿ ಶ್ರಮಪಡುತ್ತೀಯಾ ? ಇಲ್ಲೇ ನನ್ನ ಜೊತೆ ಇದ್ದು ಬಿಡು'', ಎಂದಿತು. ಆಗ ಈ ಊರಿನ ಗೋವಿಗೆ ಸಂದಿಗ್ಧಕ್ಕಿಟ್ಟುಕೊಂಡಿತು. ಹೋಗುವುದೋ ಬಿಡುವುದೋ ಎಂದು ಯೋಚಿಸತೊಡಗಿತು. ಕಡೆಗೆ ನಿರ್ಧರಿಸಿ ಆ ಗೃಹಿಣಿಯ ಮನೆಗೇ ಬಂದು ಹಾಲು ನೀಡಿ ಬೆಳಗಾಗೆದ್ದು ಮೇಯಲು ಹೊರಟಿತು. ಕಾಡಿನ ಗೋವನ್ನು ಸಂಧಿಸಿದಾಗ, ''ನೀನೆಂತಹ ಬುದ್ಧಿಗೇಡಿ, ಅವರೇನು ಹುಲ್ಲು ನೀಡುವುದಿಲ್ಲ ಏನಿಲ್ಲ, ನೀನೇಕೆ ಹೋಗುತ್ತೀಯಾ'', ಎಂದಾಗ, ''ನೋಡು, ಆ ಗೃಹಿಣಿ ನಿನ್ನಿಂದಲೇ ನಮ್ಮ ಜೀವನ ನಡೆಯು ತ್ತಿರುವುದು, ನೀನೇ ನಮ್ಮ ಪಾಲಿನ ದೇವರು, ಎಂದು ಹೇಳುವಾಗ ಎಂತಹ ಆನಂದವಾಗುತ್ತದೆ ಗೊತ್ತಾ! ಕಾಡಿನಲ್ಲೇ ಇದ್ದುಬಿಟ್ಟರೆ ಇಂತಹ ಮಾತುಗಳಿಂದ ವಂಚಿತನಾಗಿ ಬದುಕ ಬೇಕಾಗುತ್ತದೆ. ಆ ಗೃಹಿಣಿಯ ಮಾತು ಎಂತಹ ಸಂತೋಷ ನೀಡುತ್ತದೆ, ಅದನ್ನಾಕೆ ತಪ್ಪಿಸಿಕೊಳ್ಳಲಿ!'' ಎಂದಿತಂತೆ. ಇದು ಸಿದ್ದೇಶ್ವರ ಸ್ವಾಮಿಗಳು ತಮ್ಮ ಪ್ರವಚನ ಸಂದರ್ಭದಲ್ಲಿ ಹೇಳಿದ ಕಥೆ. ಆದರೆ ಈ ತರಹದ ಮಾತುಗಳು ಮನುಷ್ಯನಿಗೂ ಎಂತಹ ಸುಖ-ಸಂತೋಷ ಕೊಡಬಲ್ಲುದಲ್ಲವೇ ?



ಆದರೆ ಸ್ಥಿಮಿತ ತಪ್ಪಿದ ಮನುಷ್ಯನು ಕೋಪಗೊಂಡ ಸಂದರ್ಭದಲ್ಲಿ ಮೃದುವಾದ ಮಾತುಗಳಿಗೆ ಅವಕಾಶವೇ ಇರುವುದಿಲ್ಲ, ಎದುರಿಗಿದ್ದವರ ಮೇಲೆ ಕಿರುಚಾಡ ತೊಡಗುತ್ತಾನೆ. ಆಗ ಪ್ರತಿಸ್ಪರ್ಧಿಯು ''ಕಿರುಚಬೇಡ, ನಿನಗಿಂತ ಕಿರುಚಲು ನನಗೂ ಬರುತ್ತೆ'', ಎಂಬಂತಹ ಡೈಲಾಗನ್ನು ಹಲವಾರು ಟಿವಿ ಧಾರಾವಾಹಿಗಳಲ್ಲಿ, ಕೋಪಗೊಂಡ ಇಬ್ಬರ ನಡುವೆ ನಡೆಯುವ ಸಂಭಾಷಣೆಗಳಲ್ಲಿ ನೀವು ಕೇಳಿರಬಹುದು.

ಆದರೆ ಇಂದು ಇಂತಹ ಕಿರುಚಾಟಕ್ಕೂ ಎಂತಹ ಬೆಲೆ ಬಂದಿದೆ ನೋಡಿ. ಇಂದು ಇತರರ ಕಿರುಚಾಟದಿಂದಲೂ ಲಾಭ ಪಡೆಯಬಹುದಾಗಿದೆ ಎಂಬುದನ್ನು ನೀವು ನಂಬಲೇಬೇಕು.

ದೊಡ್ಡ ಗಂಟಲಿನವನೆಂದು ಜರೆಯುವ ಹಾಗೇ ಇಲ್ಲ. ಅಂತಹ ದೊಡ್ಡ ಗಂಟಲಿ ನವರು ಇಂದು ಸಂಪನ್ಮೂಲ ವ್ಯಕ್ತಿಗಳ ಸಾಲಿಗೆ ಸೇರ್ಪಡೆಯಾಗಲಿದ್ದಾರೆ. 'ಬಾಯಿದ್ದರೆ ಮಗ ಬದುಕ್ಯಾನು' ಎಂಬುದು ಹಳೆಯ ಗಾದೆ ಮಾತು ಹಾಗಿರಲಿ, ಇಂದು ಅದನ್ನು ''ಬಾಯಿದ್ದವ ಹಲವರನ್ನು ಬದುಕಿಸ್ಯಾನು'' ಎಂದು ಮಾರ್ಪಡಿಸಿಕೊಳ್ಳಬಹುದಲ್ಲವೇ!

ಹೇಳಿ ಕೇಳಿ ಇದೊಂದು ಮೊಬೈಲ್ ಟೆಲಿಫೋನ್ ಯುಗ. ನಿಮ್ಮ ಕಿರುಚಾಟದ ಧ್ವನಿ ನೂರು ಡೆಸಿಬಲ್‌ಗಿಂತ ಜಾಸ್ತಿಯಿದ್ದರೆ, ಅಂದರೆ ನಿಮ್ಮ ಮನೆಯಿಂದ ಮೂರನೆಯ ಮನೆಯವರೆಗೆ ನಿಮ್ಮ ಶಬ್ದ ತಲುಪುವಷ್ಟು ಜೋರಾಗಿ ಕೂಗುವ ತಾಕತ್ ಇದ್ದರೆ ಅದನ್ನು ಶಕ್ತಿಯಾಗಿ ಮಾರ್ಪಡಿಸಬಲ್ಲ ತಂತ್ರಜ್ಞಾನ ಅಭಿವೃದ್ಧಿಯಾಗುತ್ತಿದೆ. ದಕ್ಷಿಣ ಕೊರಿಯಾದ ವಿಜ್ಞಾನಿಗಳು ಈ ದಿಸೆಯಲ್ಲಿ ಸಾಕಷ್ಟು ಸಾಧನೆ ಮಾಡಿದ್ದು ಶಕ್ತಿಯುತ ಶಬ್ದವನ್ನು 'ಶಕ್ತಿಯಾಗಿ' ಮಾರ್ಪಡಿಸಿದಾಗ ನಿಮ್ಮ ಮೊಬೈಲ್ ಫೋನನ್ನು ಎಲೆಕ್ಟ್ರಿಕ್ ಪ್ಲಗ್‌ಗೆ ಹಾಕಿ ಚಾರ್ಜ್ ಮಾಡುವ ಅವಶ್ಯಕತೆಯೇ ಇರುವುದಿಲ್ಲ. ವಾಹನ ದಟ್ಟಣೆ ಇರುವ ಹೆದ್ದಾರಿಗಳಲ್ಲಿ ವಾಹನಗಳ ಶಬ್ದವೂ ಕೂಡ ಶಕ್ತಿಯ ಮೂಲವಾಗುತ್ತದೆ. ಜೊತೆಗೆ ಜೋರಾಗಿ ಮಾತನಾಡುವವರ ಬಳಿ ಒಂದರ್ಧ ಘಂಟೆ ಕಳೆದರೆ ಸಾಕು, ಕಿವಿಗೆ ಕೊಂಚ ಹತ್ತಿ ತುರುಕಿ, ಮೊಬೈಲ್ ಚಾರ್ಜರನ್ನು ತೆರೆದಿಟ್ಟರೆ ನಿಮ್ಮ ಮೊಬೈಲ್ ಚಾರ್ಜ್ ಆದಂತೆ. ಅಂದ ಹಾಗೆ 'ಇಬ್ಬರ ಜಗಳ ಮೂರನೆಯವನಿಗೆ ಲಾಭ' ಎಂಬ ಮಾತನ್ನು ಕೇಳಿಲ್ಲವೇ ? ಏರುಧ್ವನಿಯಲ್ಲಿ ಜಗಳ ಆಡುವವರ ಹತ್ತಿರ ನಿಂತು ಚಾರ್ಜ್ ಮಾಡಿಕೊಂಡರಾಯಿತು!

ನೋಡಿದಿರಾ! ಮಾತೇ ಮೃತ್ಯು ಎಂದಿದ್ದುದು ಇದೀಗ ಮಾತೇ ಶಕ್ತಿಯಾಗಿ ನಿಮ್ಮ ಮೊಬೈಲ್ ಬ್ಯಾಟರಿಯ ಶಕ್ತಿಯೂ ಆಗಬಲ್ಲದು, ಅಲ್ಲವೇ ?

**ವೈ. ಎನ್. ಗುಂಡೂರಾವ್**
'ಸೌರಭ', ನಂ. ೧೩೩೧, ೧೩ನೇ ಕ್ರಾಸ್, ೨ನೇ ಹಂತ, ಗಿರಿನಗರ, ಬೆಂಗಳೂರು - ೫೬೦ ೦೮೫

# ರಾಮ್ ಶರಣ್ ಶರ್ಮ

ದಿನಾಂಕ ೨೦-೮-೨೦೧೧ರಂದು ನಿಧನರಾದ ಪ್ರೊ॥ ಆರ್. ಎಸ್. ಶರ್ಮ ಭಾರತದ ಪ್ರಖ್ಯಾತ ಇತಿಹಾಸ ವಿದ್ವಾಂಸರು. ಪಾಟ್ನಾ, ದೆಹಲಿ ಹಾಗೂ ಟೊರಾಂಟೊ ವಿಶ್ವವಿದ್ಯಾಲಯಗಳಲ್ಲಿ ಇತಿಹಾಸ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದರು. ಈ ದೇಶದ ಅಗ್ರಮಾನ್ಯ ಇತಿಹಾಸಕಾರರಲ್ಲಿ ಮೊದಲಿಗರಾಗಿದ್ದು ಶುದ್ಧ ವೈಜ್ಞಾನಿಕ ವಿಧಾನವನ್ನು ಇತಿಹಾಸ ಸಂಶೋಧನೆಯ ವಿಶ್ಲೇಷಣೆಯಲ್ಲಿ ಸಮಗ್ರವಾಗಿ ಬಳಸಿದವರಲ್ಲಿ ಅಗ್ರಗಣ್ಯರು. ಮೂಲ ಸಂಶೋಧನೆ ನಡೆಸುವುದರಲ್ಲಿ ಅಪಾರ ಆಸಕ್ತಿ ತೋರಿದ ಶರ್ಮರವರಿಗೆ ಇತಿಹಾಸದಲ್ಲಿ ಮಾತ್ರವಲ್ಲದೆ, ಪುರಾತತ್ವ ಶಾಸ್ತ್ರ, ಶಾಸನ ಶಾಸ್ತ್ರ, ಭಾಷಾ ವಿಜ್ಞಾನದಲ್ಲಿ ಅಪಾರ ಪರಿಶ್ರಮವಿದ್ದಿತು. ಇವರ ಪಾಂಡಿತ್ಯಪೂರ್ಣ ಸಂಶೋಧನೆಯಿಂದ ಸಾಮ್ರಾಜ್ಯವಾದಿ ಹಾಗೂ ಮತಾಂಧ ಇತಿಹಾಸಕಾರರು ಸೃಷ್ಟಿಸಿದ್ದ ಹಲವಾರು ಮಿಥ್ಯೆಗಳನ್ನು ನಿರ್ನಾಮ ಮಾಡಿದರು. ಇತಿಹಾಸವು ಕೇವಲ ವೃತ್ತಿಯಲ್ಲ, ಅದೊಂದು ನಿರ್ದಿಷ್ಟ ಗುರಿಯಿಂದ ಕೂಡಿರುವ ವೈಜ್ಞಾನಿಕ ಅಧ್ಯಯನವೆಂದು ಅವರ ಪ್ರಾಚೀನ ಭಾರತದ ಸಾಮಾಜಿಕ ಮತ್ತು ಆರ್ಥಿಕ ಇತಿಹಾಸ ಕುರಿತ ಹಲವಾರು ಸಂಶೋಧನಾ ಗ್ರಂಥಗಳು ಸಾಬೀತುಪಡಿಸಿವೆ. ಅವರು ಜೀವಿತಾವಧಿಯಲ್ಲಿ ೧೧೫ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಅವರ ೧೫ಕ್ಕಿಂತ ಹೆಚ್ಚಿನ ಕೃತಿಗಳು ವಿವಿಧ ಭಾರತೀಯ ಭಾಷೆಗಳು ಹಾಗೂ ಫ್ರೆಂಚ್, ಜರ್ಮನ್, ಜಪಾನಿ ಮತ್ತು ರಷ್ಯನ್ ಭಾಷೆಗಳಲ್ಲಿ ಪ್ರಕಟವಾಗಿವೆ. ಪ್ರೊ॥ ಆರ್. ಎಸ್. ಶರ್ಮ ಭಾರತ ಇತಿಹಾಸ ಸಂಶೋಧನಾ ಪರಿಷತ್‌ನ ಸ್ಥಾಪಕ ಅಧ್ಯಕ್ಷರಾಗಿ, ಸದಸ್ಯರಾಗಿ, 'ಇಂಡಿಯನ್ ಹಿಸ್ಟಾರಿಕಲ್ ರಿವ್ಯೂ'ದ ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರೆ.



ಪ್ರೊ॥ ಆರ್. ಎಸ್. ಶರ್ಮ ಬಿಹಾರದ ಬೆಗುಸರಾಯ್ ಬಳಿಯ ಬರೈನಿಯಲ್ಲಿ ೨೬ನೇ ನವೆಂಬರ್ ೧೯೧೯ರಂದು ಒಂದು ಸಾಮಾನ್ಯ ಕುಟುಂಬದಲ್ಲಿ ಜನಿಸಿದರು. ಮೆಟ್ರಿಕ್ ಶಿಕ್ಷಣದವರೆಗೆ ಮಾತ್ರ ಇವರ ತಂದೆಗೆ ಶಿಕ್ಷಣ ಕೊಡಿಸಲು ಸಾಧ್ಯವಾಯಿತು.ನಂತರ ವಿದ್ಯಾರ್ಥಿವೇತನ ಹಾಗೂ ಖಾಸಗಿಯಾಗಿ ಪಾಠ ಹೇಳುತ್ತಾ ಶಿಕ್ಷಣ ಮುಂದುವರಿಸಿದರು. ವಿದ್ಯಾರ್ಥಿದೆಸೆಯಲ್ಲಿ ಅಂದಿನ ಪ್ರಖ್ಯಾತ ರೈತ ಚಳುವಳಿ ನೇತಾರರು ಹಾಗೂ ಸ್ವಾತಂತ್ರ್ಯ ಹೋರಾಟಗಾರರೂ ಆದ ಸ್ವಾಮಿ ಸಹಜಾನಂದ ಸರಸ್ವತಿ ಮತ್ತು ಪಂಡಿತ ರಾಹುಲ ಸಾಂಕೃತ್ಯಾಯನ ಅವರಿಂದ ಪ್ರಭಾವಿತರಾದರು. ಸಾಮಾಜಿಕ ಅಸಮಾನತೆ ಹಾಗೂ ಶೋಷಣೆಯ ವಿರುದ್ಧ ಅವರ ಚಿಂತನೆಗಳು ಪ್ರಖರವಾಗಿ ಎಡಪಂಥದತ್ತ ಸಾಗಿದವು. ೧೯೩೭ರಲ್ಲಿ ಮೆಟ್ರಿಕ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಪಾಟ್ನಾ ಕಾಲೇಜಿನಲ್ಲಿ ಪದವಿ ಮತ್ತು ಸ್ನಾತಕೋತ್ತರ ಪದವಿಗಾಗಿ ಅಧ್ಯಯನ ಮಾಡಿದರು. ನಂತರ ಎ. ಎಲ್. ಭಾಷಂರವರ ಮಾರ್ಗದರ್ಶನದಲ್ಲಿ ಲಂಡನ್ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಪದವಿ ಪಡೆದರು. ೧೯೪೬ರಲ್ಲಿ ಪಾಟ್ನಾ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕರಾಗಿ ಸೇರಿದರು. ಅದೇ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ಬಡ್ತಿ ಪಡೆದ ಅವರು ಅಲ್ಲಿನ ಇತಿಹಾಸ ವಿಭಾಗದ ಮುಖ್ಯಸ್ಥರಾಗಿದ್ದರು. ನಂತರ ೧೯೭೩ರಲ್ಲಿ ದೆಹಲಿ ವಿಶ್ವವಿದ್ಯಾಲಯದ ಡೀನ್ ಹಾಗೂ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿದರು. ಇದಲ್ಲದೆ ಅವರು ಟೊರಾಂಟೊ, ಲಂಡನ್ ಹಾಗೂ ವಿಶ್ವದ ಹಲವಾರು ವಿಶ್ವವಿದ್ಯಾಲಯಗಳಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿದ್ದರು. ಅವರಿಗೆ ದೇಶವಿದೇಶಗಳಿಂದ ಸಿಕ್ಕ ಗೌರವ ಹಾಗೂ ಪ್ರಶಸ್ತಿಗಳು ಅಪಾರ. ಅವರ ಮಹತ್ವದ ಕೃತಿಗಳಲ್ಲಿ ಪ್ರಾಚೀನ ಭಾರತದಲ್ಲಿ ಶೂದ್ರರು (ನವಕರ್ನಾಟಕ ಪ್ರಕಾಶನ), ಭಾರತೀಯ ಊಳಿಗಮಾನ್ಯತೆ, ಮಧ್ಯಯುಗೀನ ಭಾರತದಲ್ಲಿ ಸಾಮಾಜಿಕ ಬದಲಾವಣೆಗಳು, ಪ್ರಾಚೀನ ಭಾರತ, ಆರ್ಯರಿಗಾಗಿ ಹುಡುಕಾಟ (ನವಕರ್ನಾಟಕ ಪ್ರಕಾಶನ), ಪ್ರಾಚೀನ ಭಾರತದಲ್ಲಿ ಭೌತಿಕ ಸಂಸ್ಕೃತಿ ಮತ್ತು ಸಾಮಾಜಿಕ ಸಂರಚನೆ ಮುಂತಾದ ಅತಿಮೌಲಿಕ ಗ್ರಂಥಗಳು ಸೇರಿವೆ.

''ಪ್ರಾಚೀನ ಭಾರತದಲ್ಲಿ ಶೂದ್ರರು'' ಎಂಬ ಗ್ರಂಥದಲ್ಲಿ ಸಮಾಜದ ಕೆಳಸ್ತರದ ಜನರ ಸ್ಥಾನಮಾನದ ಬಗ್ಗೆ ಚಾರಿತ್ರಿಕ ದಾಖಲೆಗಳ ಆಧಾರದಿಂದ ಪ್ರಬುದ್ಧವಾದ ವಿಶ್ಲೇಷಣೆ ನಡೆಸಿದ್ದಾರೆ. ಉತ್ಪಾದನಾ ಸಾಧನಗಳ ಒಡೆತನ ಹಾಗೂ ಜನಜೀವನದ ಅಂತರಸಂಬಂಧಗಳ ಬಗ್ಗೆ ವೇದ ಕಾಲದಿಂದ ಹಿಡಿದು ಗುಪ್ತರ ಯುಗದವರೆಗೆ ಆದ ಬೆಳವಣಿಗೆಯನ್ನು ಈ ಕೃತಿಯಲ್ಲಿ ಶರ್ಮ ವಿಶ್ಲೇಷಿಸಿದ್ದಾರೆ.

''ಭಾರತದ ಊಳಿಗಮಾನ್ಯ ಪದ್ಧತಿ'' ಎಂಬ ಅವರ ಕೃತಿಯಲ್ಲಿ ಮಧ್ಯಕಾಲೀನ ಮತ್ತು ಪ್ರಾಚೀನ ಭಾರತದ ಊಳಿಗಮಾನ್ಯ ವ್ಯವಸ್ಥೆಯ ಸಂಬಂಧಗಳನ್ನು ವಿಶ್ಲೇಷಿಸಲಾಗಿದೆ. ಈ ಕೃತಿಯು ಪ್ರಕಟವಾದಾಗ ಶೈಕ್ಷಣಿಕ ವಲಯದಲ್ಲಿ ಭಾರಿ ಚರ್ಚೆಯನ್ನೇ ಆರಂಭಿಸಿತು. ಭಾರತದಲ್ಲಿ ಊಳಿಗಮಾನ್ಯ ವ್ಯವಸ್ಥೆ ಇತ್ತೇ ಅಥವಾ ಇಲ್ಲವೇ ಎಂಬುದರ ಬಗ್ಗೆ ವಾದ-ವಿವಾದಗಳು ನಡೆಯುತ್ತಲೇ ಇವೆ. ಆದರೆ ಶರ್ಮರವರು ಕೇವಲ ಯೂರೋಪಿನ ಸಾಮಾಜಿಕ ಆರ್ಥಿಕ ವ್ಯವಸ್ಥೆಯ ಈ ಬೆಳವಣಿಗೆಗಳು ಭಾರತದ ಸಂದರ್ಭದಲ್ಲೂ ಕೂಡ ಇತ್ತೆಂಬುದನ್ನು ಆಧಾರ ಸಮೇತ ಸ್ಪಷ್ಟಪಡಿಸಿದ್ದಾರೆ. ಭಾರತದ ಭೂಮಿ ಸಂಬಂಧಗಳು, ರೈತರ ಶೋಷಣೆ, ರೈತರಿಂದ ಉತ್ಪಾದನೆಯಾದ ಮಿಗುತಾಯವನ್ನು ಮಧ್ಯವರ್ತಿಗಳು ಮತ್ತು ಪ್ರಭುತ್ವ ಹೇಗೆ ಬಳಸಿಕೊಂಡಿತ್ತು ಎಂಬುದನ್ನು ಈ ಕೃತಿಯಲ್ಲಿ ವಿಸ್ತರಿಸಲಾಗಿದೆ. ಕಂದಾಯ, ಜೀತ ಮುಂತಾದ ರೂಪದಲ್ಲಿ ರೈತರನ್ನು ಹೇಗೆ ಶೋಷಿಸಲಾಗಿತ್ತು ಎಂಬುದರ ವಿವರಣೆ ಈ ಗ್ರಂಥದ ಒಂದು ಮಹತ್ವದ ಭಾಗ. ''ಪ್ರಾಚೀನ ಭಾರತದಲ್ಲಿ ಭೌತಿಕ ಸಂಸ್ಕೃತಿ ಮತ್ತು ಸಾಮಾಜಿಕ ಸಂರಚನೆ'' ಎಂಬ ಕೃತಿಯಲ್ಲಿ ಆದಿ ವೈದಿಕ ಕಾಲದಿಂದ ಅಂತ್ಯವೇದ ಕಾಲದವರೆಗಿನ ಬೆಳವಣಿಗೆಯ ಐತಿಹಾಸಿಕ ವಿಶ್ಲೇಷಣೆ ಇದೆ. ಪ್ರಾಚೀನ ಭಾರತದ ಆರ್ಥಿಕ ಬೆಳವಣಿಗೆಯನ್ನು ಇದರಲ್ಲಿ ಪ್ರಸ್ತುತಪಡಿಸಲಾಗಿದೆ (ಕ್ರಿ.ಪೂ. ೧೦೦೦ದಿಂದ ಕ್ರಿ.ಪೂ. ೫೦೦). ಈ ಸಂದರ್ಭದಲ್ಲಿ ಕಬ್ಬಿಣದ ಬಳಕೆ ಮತ್ತು ಕೃಷಿಯ ವಿಸ್ತರಣೆ, ಚಿತ್ರಿತ ಬೂದು ಬಣ್ಣದ ಮಡಿಕೆ ಬಳಕೆ ಇವುಗಳು ಅಂದಿನ ಭೌತಿಕ ಜೀವನದ ಲಕ್ಷಣಗಳಾಗಿದ್ದವು ಎಂಬುದನ್ನು ಆಧಾರಗಳ ಹಿನ್ನೆಲೆಯಲ್ಲಿ ಬಹಳ ವಿದ್ವತ್‌ಪೂರ್ಣವಾದ ಸಂಶೋಧನೆಗಳ ಮೂಲಕ ತಿಳಿಸಿದ್ದಾರೆ. ಭೌತಿಕ ಬೆಳವಣಿಗೆಯಲ್ಲಾದ ವ್ಯತ್ಯಾಸಗಳು ಹೇಗೆ ಸಾಮಾಜಿಕ ಹಾಗೂ ರಾಜಕೀಯ ವ್ಯವಸ್ಥೆಯ ಮೇಲೆ ಪರಿಣಾಮ ಬೀರಿತ್ತು ಎಂಬುದನ್ನು ಈ ಗ್ರಂಥ ತಿಳಿಸಿಕೊಡುತ್ತದೆ. ವ್ಯಾಪಾರ ಬೆಳವಣಿಗೆ, ಲೋಹದ ಹಣ, ನಗರಗಳ ಬೆಳವಣಿಗೆ, ತೆರಿಗೆ ವ್ಯವಸ್ಥೆ, ಆಡಳಿತ

**ಡಾ॥ ಸಿದ್ದಲಿಂಗ ಸ್ವಾಮಿ**

ಯಂತ್ರ ಇವುಗಳ ಬೆಳವಣಿಗೆಯನ್ನು ಸಹ ಇಲ್ಲಿ ವಿಶ್ಲೇಷಿಸಲಾಗಿದೆ.

ಅವರ ಆಚಾರ್ಯ ಗ್ರಂಥ ''ಆರ್ಯರಿಗಾಗಿ ಹುಡುಕಾಟ.'' ಅದರಲ್ಲಿ ಸಾಕಷ್ಟು ವ್ಯಾಪಕ ಚರ್ಚೆಗಳ ಸಂದರ್ಭದಲ್ಲಿ ಹೊರಬಂದ ಆರ್ಯರನ್ನು ಗುರುತಿಸುವ ಸಮಸ್ಯೆಯನ್ನು ಬಗೆಹರಿಸಲು ಶರ್ಮ ವಿದ್ವತ್ಪೂರ್ಣ ಮಂಡನೆ ಮಾಡಿದ್ದಾರೆ. ಶರ್ಮರವರು ಪುರಾಣವನ್ನು ಇತಿಹಾಸವೆಂದು, ಇತಿಹಾಸ ಪುರಾಣವೆಂದು ಗೊಂದಲ ಉಂಟುಮಾಡುವವರಿಗೆ ಇಲ್ಲಿ ಸಮರ್ಥ ಉತ್ತರ ನೀಡಿದ್ದಾರೆ. ಆರ್ಯ ಸಮಸ್ಯೆಯ ಸಾಂಸ್ಕೃತಿಕ ಆಯಾಮವನ್ನು ಗುರುತಿಸುವ ಮುಖ್ಯ ಚಿಹ್ನೆಗಳನ್ನು, ಅವುಗಳು ಎಲ್ಲಿ ಯಾವಾಗ ಹುಟ್ಟಿದವು ಎಂಬುದನ್ನು ಗ್ರಂಥವು ಕೂಲಂಕಷವಾಗಿ ವಿಶ್ಲೇಷಿಸುತ್ತದೆ. ಕುದುರೆ ಮತ್ತು ಕಡ್ಡಿಗಳುಳ್ಳ (ಅರ) ಚಕ್ರದ ಬಳಕೆ, ಶವಸಂಸ್ಕಾರ ಪದ್ಧತಿ, ಅಗ್ನಿ ಮತ್ತು ಸೋಮರಸದ ಆರಾಧನೆ ಮುಂತಾದ ಆಧಾರಗಳನ್ನು ಇಟ್ಟುಕೊಂಡು ಆರ್ಯರ ಮೂಲ ಭಾರತವಲ್ಲ ಎಂದು ಈ ಕೃತಿಯಲ್ಲಿ ಪ್ರತಿಪಾದಿಸಲಾಗಿದೆ. ಶರ್ಮ ಅವರ ಇತರ ಕೃತಿಗಳು ಮತ್ತು ನೂರಾರು ಸಂಶೋಧನಾ ಪ್ರಬಂಧಗಳು ಅಪಾರ ಮನ್ನಣೆಗೆ ಪಾತ್ರವಾಗಿವೆ.

ಪ್ರೊ|| ಆರ್. ಎಸ್. ಶರ್ಮ ಈ ದೇಶ ಕಂಡ ಅಸಾಮಾನ್ಯ ಇತಿಹಾಸ ವಿದ್ವಾಂಸರು. ಅವರ ಸಂಪರ್ಕಕ್ಕೆ ಬಂದ ವಿದ್ಯಾರ್ಥಿಗಳಾಗಲಿ, ಅಧ್ಯಾಪಕರಾಗಲಿ, ಸಾಮಾನ್ಯ ಜನರಿರಲಿ ಅವರ ಸರಳ ಜೀವನ, ತತ್ವನಿಷ್ಠ ದೃಢಚಿಂತನೆಗಳಿಂದ ಪ್ರಭಾವಿತರಾಗುತ್ತಿದ್ದರು. ದಂತಗೋಪುರದಿಂದ ಸದಾ ಹೊರಗಿದ್ದ ಪ್ರೊ|| ಶರ್ಮ ಸಮಕಾಲೀನ ಸಮಸ್ಯೆಗಳಾದ ಬಡತನ, ಜಾತೀಯತೆ, ಕೋಮುವಾದದಂಥ ವಿಷಯಗಳನ್ನು ಸಾರ್ವಜನಿಕವಾಗಿ ಚರ್ಚೆಗೊಳಪಡಿಸುತ್ತಿದ್ದರು. ಸಮಕಾಲೀನ ಭಾರತದ ಜ್ವಲಂತ ವಿಷಯಗಳ ಪೈಕಿ ಗೊಡ್ಡು ಸಂಪ್ರದಾಯವಾದವನ್ನು ಅತಿ ತೀಕ್ಷ್ಣವಾಗಿ ವಿರೋಧಿಸಿ ಭಾರತದ ಜಾತ್ಯತೀತ ನಿಲುವುಗಳನ್ನು ತಮ್ಮ ಜೀವನ ಹಾಗೂ ಕೃತಿಗಳಲ್ಲಿ ಅಳವಡಿಸಿಕೊಂಡಿದ್ದು, ಅವುಗಳನ್ನು ಸಮರ್ಥಿಸುವ ಅವರ ವೈಖರಿ, ಚಿರಂತನ ಮಾರ್ಗದರ್ಶಿ ಸೂತ್ರಗಳು. ಭಾರತದ ಇತಿಹಾಸ ಲೇಖನ ಕ್ಷೇತ್ರದಲ್ಲಿ ಅವರ ವಿದ್ವತ್ಪೂರ್ಣ ಹೆಜ್ಜೆಗುರುತುಗಳನ್ನು ಅಮರವಾಗಿಸಿದ್ದಾರೆ. ತಮ್ಮಲ್ಲಿ ಆಳವಾಗಿದ್ದ ವಿಶ್ಲೇಷಣೆ, ಸ್ಪಷ್ಟ ಅರ್ಥ ವಿವರಣೆ, ವೈಜ್ಞಾನಿಕ ಹಾಗೂ ವೈಚಾರಿಕ ಸಂಶೋಧನಾ ಕ್ರಮವನ್ನು ಬೆಳೆಸಿ, ಉಳಿದ ಇತಿಹಾಸಕಾರರಿಗೆ ಸ್ಫೂರ್ತಿಯನ್ನು ತುಂಬಿದ್ದಾರೆ. ಇದಲ್ಲದೆ ದೇಶದ ಪ್ರಜಾಪ್ರಭುತ್ವದ ನಿಲುವುಗಳನ್ನು ನಿರ್ಭೀತಿಯಿಂದ ವ್ಯಕ್ತಪಡಿಸುತ್ತಿದ್ದರು. ೧೯೭೫ರ ಭಾರತೀಯ ಇತಿಹಾಸ ಕಾಂಗ್ರೆಸ್‌ನ ಅಧಿವೇಶನದಲ್ಲಿ ತುರ್ತುಪರಿಸ್ಥಿತಿಯನ್ನು ವಿರೋಧಿಸಿ ನಿರ್ಣಯವನ್ನು ಪಾಸುಮಾಡಿಸುವಲ್ಲಿ ಶರ್ಮ ಅವರ ಪಾತ್ರ ಮುಖ್ಯವಾದುದು ಹಾಗೂ ತುರ್ತು ಪರಿಸ್ಥಿತಿ ವಿರೋಧಿಸಿದ ಮೊದಲ ಶೈಕ್ಷಣಿಕ ಸಂಸ್ಥೆ ಅದು ಎಂಬುದು ಪ್ರೊ|| ಶರ್ಮ ಅವರ ಜನಪರ ಕಾಳಜಿಗಳನ್ನು ಸೂಚಿಸುತ್ತದೆ. ಪ್ರೊ|| ಆರ್. ಎಸ್. ಶರ್ಮ ಅವರ ಮಹತ್ವದ ಹಲವು ಕೃತಿಗಳನ್ನು ನವಕರ್ನಾಟಕ ಪ್ರಕಾಶನವು ಕನ್ನಡದಲ್ಲಿ ಪ್ರಕಟಿಸಿದೆ.

ಬೆಂಗಳೂರಿಗೆ ಮತ್ತು ನಮ್ಮ ರಾಜ್ಯದ ವಿಚಾರವಂತರಿಗೆ ಆರ್. ಎಸ್. ಶರ್ಮ ಸುಪರಿಚಿತರು. ಅವರು ನೀಡಿದ ಉಪನ್ಯಾಸಗಳು ಹತ್ತಾರು, ನಡೆಸಿಕೊಟ್ಟ ಚರ್ಚೆಗಳು ನೂರಾರು. ರಘೋತ್ತಮನ್ ಸ್ಮಾರಕ ಪ್ರತಿಷ್ಠಾನದಡಿ ಶರ್ಮ ಅವರು ಬೆಂಗಳೂರಿನಲ್ಲಿ ನೀಡಿದ್ದ ಎರಡು ಉಪನ್ಯಾಸಗಳನ್ನು ಶ್ರೋತೃಗಳು ಇಂದಿಗೂ ನೆನೆಯುತ್ತಾರೆ. ಭಾರತದ ಜಾತಿ ವ್ಯವಸ್ಥೆಯನ್ನು ಕುರಿತಾಗಿದ್ದ ಆ ಉಪನ್ಯಾಸಗಳು ಬಹಳ ಉನ್ನತ ಮಟ್ಟದವಾಗಿದ್ದವು.

ನಮ್ಮ ನೆಚ್ಚಿನ ಪ್ರಾಧ್ಯಾಪಕ ಡಾ|| ಆರ್. ಎಸ್. ಶರ್ಮ ಅವರಿಗೆ 'ಹೊಸತು' ಮತ್ತು ನವಕರ್ನಾಟಕ ಪ್ರಕಾಶನ ಸಂಸ್ಥೆ ಗೌರವಪೂರ್ವಕ ನಮನ ಸಲ್ಲಿಸುತ್ತವೆ.

ಸಿದ್ದಲಿಂಗ ಸ್ವಾಮಿ
ನಂ. ೩೯೦, ೧೦ನೇ 'ಬಿ' ಅಡ್ಡರಸ್ತೆ, ವಿನಾಯಕ ಹೆಚ್.ಬಿ.ಸಿ.ಎಸ್. ಬಡಾವಣೆ, ೯ನೇ ಬ್ಲಾಕ್, ೨ನೇ ಹಂತ, ನಾಗರಭಾವಿ, ಬೆಂಗಳೂರು - ೫೬೦ ೦೭೨



# ಸುನಾಮಿ ಮಳೆ

ಎತ್ತಿಂದೋ ಬಂದು ನೆಲಕಜಡಿತು ಮುಗಲ ತೊಳ್ಳಿ ಹೊಡದು
ಗುಡುಗು ಸಿಡಿಲು ಮಿಂಚಿನಾಟದ ಆರ್ಭಟದ ಅಂಜಿಕ್ಯಾಗತಿತ್ತು
ಗ್ವಾದಲ್ಯಾನದನಕರಾ ದಿಕ್ಕೆಟ್ಟಕೊಳ್ಳುಬಿಚ್ಚಾಕ ಒದರತಿತ್ತ
ಜಂಪಳಿಕ್ಕಿದ ಮನಿಹಾಕಿಡಬಾನಿ ಅಳ್ಳಾಕ ಹಚ್ಚಿತ್ತ ||

ಎದಿ ಒಡದ ಊರೆಲ್ಲ ಕಂಗಾಲಾಗಿತ್ತ ಜಲಪ್ರಳಯಕ
ಕೂಸುಬಾಣಂತಿ, ಪ್ವಾರಗೋಳು ನಡಗತಿದ್ವು ಅಂಜಿ ಒದ್ದಿಯಾಗಿ
ಕೂಳಿಲ್ಲ ಬೆಚ್ಚನ್ನ ಪಡಿಕಿಯಿಲ್ಲ ನಿಲ್ಲಾಕ ಜಾಗೆಯಿಲ್ಲ ಒಣಿಲ್ಲ ನೀರನೀರ
ಹೊಳಿಹಳ್ಳ ಧುಮುಕಾಸಿಮಂದಿ ಪ್ರಾಣ ಅನ್ನದಲ ಎತ್ತೊಯ್ತು ಬಿಕನಾಸಿ ||

ಯದಿ ಮಟ್ಟ ಬೆಳದ ತೊನೀತಿದ್ದ ವರ್ಷದಾ ಪೀಕ
ಸೊಂಟಾ ಮುರದು ಭೂಮ್ಯಾಗ ಬಿದ್ದು ಆಗೈತಿ ಹಾಳಹಂಪಿ
ಯಾರೀಗೆ ಹೇಳೂದು ಎದ್ಯಾನ ದುಗುಡ ದುಃಕ್ಕ
ಯಾವ ದ್ಯಾವರ ಶಾಪ ಆಗೈತೊ ನೆಮ್ಮದಿ ಬಾಳ ಹರದ ಕೌದಿ ||

ಮಾನದೊಳಗ ಚಂದಂಗ ಸಾಗಿತ್ತ ನಮ್ಮ ಬದುಕಬಂಡಿ
ಜಗಕೆಲ್ಲ ಅನ್ನ ಹಾಕಾವ್ರ ನಾವ ಈಗ ಆಗೇವಿ ಕೂಳಗೇಡಿ
ಕೊಡುವವರು ಕೊಟ್ಟಾರು ದಾನ ಧರ್ಮಕ ಕಣ್ಣೀರು ತುಂಬಿ
ತಿನ್ನಾಕ ಮನಸಿಲ್ಲ ಬೇಡಿ ಬಂದದ್ದೆಂದು ಮನ ಹಿಚಕತೈತಿ ||

ದುಡ್ಯೋದು ಒಂದು ಬಿಟ್ರ ಬ್ಯಾರಾನು ಗೊತ್ತಿಲ್ಲ ನಮಗ
ಪಿರೂತಿಯಿಂದ ಪಿರೂತಿ ಮಾಡತಾವ ಮೂಗಬಸವ ನಮಗ
ನಿಂತ ನೆಲಾನ ನಡಗಿದ ಮ್ಯಾಲೆ ನಾವೆಲ್ಲಿ ಬಾಳಬೇಕ
ಬಂದ ಬರಕ ಬುತ್ತಿ ಏಟಂತ ಹ್ಯಾಂಗ ಕಟ್ಟಬೇಕ ||

ಹಣಮಂತ ತಾಸಗಾಂವಕರ
'ಸುಧನ್ವ' ಸೆಕ್ಟರ್ ನಂ - ೧೮/೨೫ ನವನಗರ, ಬಾಗಲಕೋಟೆ - ೫೮೭೧೦೨

# ಸತ್ತವರ ದಾರಿ



ಮೈಕೇಲ್ ಓಬಿಯ ಆಸೆಗಳು ಅವನು ನಿರೀಕ್ಷಿಸಿದ್ದಕ್ಕಿಂತ ಮೊದಲೇ ನೆರವೇರಿದವು. ೧೯೪೯ರ ಜನವರಿಯಲ್ಲೇ ಎಂಡೂಮನ ಸೆಂಟ್ರಲ್ ಸ್ಕೂಲ್‌ನ ಮುಖ್ಯೋಪಾಧ್ಯಾಯನಾಗಿ ಅವನು ನೇಮಕಗೊಂಡನು. ಅದು ಮೊದಲಿನಿಂದಲೂ ಒಳ್ಳೆಯ ಹೆಸರು ಮಾಡಿರದ ಶಾಲೆಯಾಗಿದ್ದುದರಿಂದ ಮಿಷನರಿಯವರು ಓರ್ವ ಸಮರ್ಥ, ತರುಣನೊಬ್ಬನನ್ನು ಆ ಶಾಲೆ ನಡೆಸಲು ಕಳುಹಿಸಲು ನಿರ್ಧರಿಸಿದ್ದರು. ಅತ್ಯುತ್ಸಾಹದಿಂದಲೇ ಓಬಿ ಈ ಜವಾಬ್ದಾರಿಯನ್ನು ಒಪ್ಪಿಕೊಂಡನು. ಅವನಲ್ಲಿ ಹಲವಾರು ಅದ್ಭುತ ವಿಚಾರಗಳಿದ್ದವು. ಅವುಗಳನ್ನೆಲ್ಲಾ ಅನುಷ್ಠಾನಗೊಳಿಸಲು ಇದು ಒಳ್ಳೆಯ ಅವಕಾಶ ಸಿಕ್ಕಿದಂತಾಯಿತು. ಅವನಿಗೆ ಭದ್ರವಾದ ಸೆಕೆಂಡರಿ ಶಾಲಾ ಶಿಕ್ಷಣವು ಒದಗಿತ್ತು. ಅದರಿಂದ ಸರ್ಕಾರಿ ದಾಖಲೆಗಳಲ್ಲಿ ಅವನೊಬ್ಬ ನಿರ್ಣಾಯಕ ಶಿಕ್ಷಕ ಎಂದು ನಮೂದಿಸಿ, ಇತರ ಮುಖ್ಯೋಪಾಧ್ಯಾಯರಿಗಿಂತ ಅವನು ಭಿನ್ನ ಎಂದು ಮಿಷನರಿ ವಲಯದಲ್ಲಿ ನಿರ್ಧರಿಸಲಾಗಿತ್ತು. ಹಿರಿಯ ಹಾಗೂ ಶಿಕ್ಷಣ ಪಡೆದವರ ಸಂಕುಚಿತ ಅಭಿಪ್ರಾಯಗಳನ್ನು ಅವನು ಮುಚ್ಚುಮರೆಯಿಲ್ಲದೆ ಖಂಡಿಸುತ್ತಿದ್ದ. ''ಅಲ್ಲಿಗೆ ಹೋದ ಮೇಲೆ ಒಳ್ಳೆ ಕೆಲಸಾನೆ ಮಾಡೋಣ ಅಲ್ವಾ'' ಎಂದು ತನ್ನ ತರುಣ ಪತ್ನಿಯನ್ನು ಕೇಳಿದ, ಅವರಿಬ್ಬರೂ ಪದೋನ್ನತಿಯ ಸಮಾಚಾರ ಕೇಳಿದ ತಕ್ಷಣ.

''ಸಾಧ್ಯವಾದಷ್ಟು ಮಾಡೋಣ'', ಅಂದಳು. ''ಅಲ್ಲಿ ಸುಂದರವಾದ ತೋಟವನ್ನು ಬೆಳೆಸೋಣ ಎಲ್ಲಾ ಮಾಡರ್ನ್ ಆಗಿ ಮುದ ಕೊಡೋ ತರಹ''... ಅವರು ಮದುವೆಯಾದ ಎರಡು ವರ್ಷಗಳಲ್ಲಿ ಅವನ 'ಮಾಡರ್ನ್' ಪದ್ಧತಿಯ ಆವೇಶಪೂರ್ಣ ಮಾತನ್ನು ಹಾಗೂ ಕ್ಷೇತ್ರದಲ್ಲಿನ ಈ ವಯಸ್ಸಾದ ಹಾಗೂ ನಿವೃತ್ತ ಜನ ಮಾರ್ಕೆಟ್‌ನಲ್ಲಿ ವ್ಯಾಪಾರಿಗಳಾಗಲು ತಕ್ಕವರೆಂದು ವಿನಾ ಕಾರಣ ಬೈಯುತ್ತಿದ್ದುದನ್ನು ಸಂಪೂರ್ಣವಾಗಿ ತಲೆಯಲ್ಲಿ ತುಂಬಿಕೊಂಡಿದ್ದಳು. ತರುಣ ಮುಖ್ಯೋಪಾಧ್ಯಾಯನ ಪ್ರಶಂಸೆಗೆ ಒಳಪಟ್ಟ ಹೆಂಡತಿಯೆಂದು ಆಗಲೇ ತನ್ನನ್ನು ತಾನೇ ಕಲ್ಪಿಸಿಕೊಳ್ಳಲಾರಂಭಿಸಿದಳು, ಶಾಲೆಯ ರಾಣಿ ಎಂಬಂತೆ.

ಶಾಲೆಯ ಇತರ ಶಿಕ್ಷಕರ ಹೆಂಡತಿಯರು ಅವಳನ್ನು ನೋಡಿ ಕರುಬುವಂತಾಗಬೇಕು. ತಾನೇ ಎಲ್ಲದರಲ್ಲೂ ಮುಂದಿರಬೇಕು ಎಂದು ಆಸೆಪಡುತ್ತಿದ್ದಳು. ಆಗ ಇದ್ದಕ್ಕಿದ್ದಂತೆ ಅವಳಿಗೆ ಹೊಳೆಯಿತು, ಅವಳಂತೆ ಇತರರ ಹೆಂಡತಿಯರು ಯಾರೂ ಇಲ್ಲ ಎಂದು. ನಿರೀಕ್ಷೆ ಹಾಗೂ ಭಯಮಿಶ್ರಿತಳಾಗಿ ಅವಳು ಆತಂಕದಿಂದ ನೋಡುತ್ತಾ ತನ್ನ ಪತಿಗೆ ಹೇಳಿದಳು, ''ನನ್ನ ಜೊತೆಯವರೆಲ್ಲಾ ಇನ್ನೂ ಚಿಕ್ಕವರು, ಮದುವೆಯಾಗದವರು.''

''ಅದು ಒಳ್ಳೆಯದೇ'' ಎಂದ ಓಬಿ.

''ಏಕೆ ?''

ಇಂಗ್ಲಿಷ್ ಮೂಲ : **ಚಿನೂವ ಅಚಿಬೆ**

ಕನ್ನಡಕ್ಕೆ : **ಎಂ. ಎಸ್. ರಘುನಾಥ್**

''ಏಕೆಂದರೆ ಅವರು ಶಾಲೆಗಾಗಿ ತಮ್ಮ ಎಲ್ಲಾ ಸಮಯ ಹಾಗೂ ಸಾಮರ್ಥ್ಯವನ್ನು ಉಪಯೋಗಿಸುತ್ತಾರೆ.''

ನ್ಯಾನ್ಸಿ ಚಿಂತಾಮಗ್ನಳಾದಳು, ಕೆಲವು ನಿಮಿಷಗಳವರೆಗೆ, ಅವಳು ಹೊಸ ಶಾಲೆಯ ಬಗ್ಗೆ ಅನುಮಾನಗೊಂಡಳು, ಅದೂ ಕೆಲವು ನಿಮಿಷಗಳವರೆಗೆ ಮಾತ್ರ. ಅವಳ ಗಂಡನ ಸಂತೋಷದಾಯಕ ಭವಿಷ್ಯಕ್ಕೆ ಅವಳ ಸಣ್ಣ, ವೈಯಕ್ತಿಕ ದುರಾದೃಷ್ಟವು ಕುರುಡಾಗಲು ಸಾಧ್ಯವಾಗಲಿಲ್ಲ. ಕುರ್ಚಿಯಲ್ಲಿ ಮುದುರಿ ಕುಳಿತಿದ್ದ ಅವನ ಕಡೆಗೆ ನೋಡಿದಳು. ಅವನು ಬಾಗಿದ ಹೆಗಲಿನ ತೆಳ್ಳನೆಯ ವ್ಯಕ್ತಿಯಾಗಿದ್ದ. ಆದರೆ ಕೆಲವೊಮ್ಮೆ ಇದ್ದಕ್ಕಿದ್ದಂತೆ ತನ್ನ ಭೌದ್ಧಿಕ ಸಾಮರ್ಥ್ಯದಿಂದ ಜನರಿಗೆ ಆಶ್ಚರ್ಯವನ್ನುಂಟುಮಾಡುತ್ತಿದ್ದ. ಅವನಿಗೆ ಈಗಿನ ಭಂಗಿಯಲ್ಲಿ ಅವನ ಎಲ್ಲಾ ದೈಹಿಕ ಸಾಮರ್ಥ್ಯ, ಅವನ ಗುಳಿಬಿದ್ದ ಕಣ್ಣುಗಳ ಹಿಂದೆ ತಂಗಿದ್ದುದಂತೆ ಕಂಡುಬಂದಿತು : ಅವುಗಳಿಗೆ ಅಸಾಧಾರಣವಾದ ಸೂಕ್ಷ್ಮಗ್ರಹಣ ಶಕ್ತಿಯನ್ನು ನೀಡುತ್ತಾ. ಅವನಿಗೆ ಕೇವಲ ಇಪ್ಪತ್ತಾರು ವರ್ಷ. ಆದರೂ ಮೂವತ್ತು ಅಥವಾ ಇನ್ನೂ ಹೆಚ್ಚಾದಂತೆ ಕಾಣುತ್ತಿದ್ದ. ಒಟ್ಟಿನಲ್ಲಿ ಅವನು ಕುರೂಪಿಯಾಗಿರಲಿಲ್ಲ.

''ನಿನ್ನ ಆಲೋಚನೆಗಳಿಗೆ ಒಂದು ಪೆನ್ನಿ, ಮೈಕ್'', ನ್ಯಾನ್ಸಿ ಹೇಳಿದಳು. ಸ್ವಲ್ಪ ಹೊತ್ತಿನ ನಂತರ, ಅವಳು ಓದಿದ್ದ ವನಿತಾ ಮ್ಯಾಗಸೀನ್‌ನಲ್ಲಿದ್ದುದನ್ನು ಅನುಕರಿಸುತ್ತಾ, ಈ ಜನಗಳಿಗೆ ಹೇಗೆ ಶಾಲೆಯನ್ನು ನಡೆಸಬೇಕು ಅನ್ನೋದನ್ನು ತೋರಿಸಲು ಎಂಥಾ ಒಳ್ಳೆಯ ಅವಕಾಶ ನಮಗೆ ಸಿಕ್ಕಿದೆ ಕೊನೆಗೂ ಅಂತ ಯೋಚನೆ ಮಾಡುತ್ತಿದ್ದೆ ಎಂದಳು.

ಎಂಡೋಮ್ ಶಾಲೆ ಎಲ್ಲಾ ಅರ್ಥದಲ್ಲೂ ಹಿಂದುಳಿದಿತ್ತು. ಓಬಿ ತನ್ನ ಇಡೀ ಜೀವವನ್ನಿಟ್ಟು ಕೆಲಸ ಮಾಡಿದ. ಅದೇ ರೀತಿ ಅವನ ಹೆಂಡತಿ ಕೂಡ. ಉನ್ನತ ಮಟ್ಟದ ಬೋಧನೆ ಇರಲೇಬೇಕು ಹಾಗೂ ಶಾಲಾ ಕಾಂಪೌಂಡನ್ನು ಸುಂದರ ಪ್ರದೇಶವನ್ನಾಗಿ ಮಾಡಬೇಕು ಎಂಬ ಎರಡು ಉದ್ದೇಶಗಳು ಅವನಿಗಿದ್ದವು. ನ್ಯಾನ್ಸಿಯ ಕನಸಿನ ತೋಟಗಳು ಜೀವ ತಳೆದವು. ಮಳೆ ಬಂದದ್ದರಿಂದ ಗಿಡಗಳು ಚೆನ್ನಾಗಿ ಬೆಳೆದವು. ಸುಂದರವಾದ ದಾಸವಾಳ ಹಾಗೂ ಇತರ ಹೂಗಳು ಕಡುಕೆಂಪು ಹಾಗೂ ಹಳದಿ ಬಣ್ಣಗಳಲ್ಲಿ ಬೆಳೆದು ನಿಂತು ಶಾಲಾ ಕಾಂಪೌಂಡ್‌ಅನ್ನು ಅದರ ನೆರೆಹೊರೆಯವರ ಪೊದೆಯಿಂದ ವಿಭಜಿಸಿದವು.

ಒಂದು ಸಂಜೆ ಓಬಿ ತನ್ನ ಕಾರ್ಯಸಾಧನೆಯನ್ನು ಮೆಚ್ಚುತ್ತಿದ್ದಾಗ ಹೂವಿನ ಗಿಡಗಳು ಹಾಗೂ ಪೊದೆಯನ್ನು ದಾಟಿಕೊಂಡು ಕಾಂಪೌಂಡಿನಲ್ಲಿ ಬರುತ್ತಿದ್ದ ಮುದುಕಿಯೋರ್ವಳನ್ನು ನೋಡಿ ಏನೋ ವಿಶೇಷವಿದೆ ಎಂದುಕೊಂಡ. ಅಲ್ಲಿಗೆ ಹೋಗಿ ನೋಡಿದಾಗ ಅವನಿಗೆ ಕಂಡದ್ದು, ಶಾಲಾ ಕಾಂಪೌಂಡ್ ಮುಖಾಂತರ ಹಳ್ಳಿಯಿಂದ ಹಿಂದೆ ಬಳಸುತ್ತಿದ್ದ ಹಾದಿಯ ಕ್ಷೀಣ ಲಕ್ಷಣಗಳು, ಮತ್ತೊಂದು ಪಾರ್ಶ್ವದಲ್ಲಿ ಪೊದೆ.

''ನನಗೆ ಆಶ್ಚರ್ಯವಾಗುತ್ತಿದೆ'' ಎಂದು ಓಬಿ ಹೇಳಿದ, ಮೂರು ವರ್ಷಗಳಿಂದ ಆ ಶಾಲೆಯಲ್ಲಿದ್ದ ಓರ್ವ ಶಿಕ್ಷಕನಿಗೆ. ''ಯಾಕೆಂದರೆ ನೀವುಗಳು ಈ ಹಳ್ಳಿ ಜನರಿಗೆ ಆ ಪಾದಚಾರಿಗಳ ದಾರಿಯನ್ನು ಉಪಯೋಗಿಸಲು ಅವಕಾಶ ಕೊಟ್ಟಿರಿ ಅಂತ ನಂಬಕ್ಕೆ ಆಗ್ತಾಯಿಲ್ಲ ನನಗೆ'' ಎನ್ನುತ್ತ ತಲೆ ಅಲ್ಲಾಡಿಸಿದ.

ಕ್ಷಮೆ ಕೋರುವ ದನಿಯಲ್ಲಿ ಶಿಕ್ಷಕ ಹೇಳಿದ, ''ಆ ದಾರಿ ಅವರಿಗೆ ಬಹಳ ಮುಖ್ಯ ಅನ್ನಿಸುತ್ತೆ. ಅದನ್ನು ಅವರು ಹೆಚ್ಚಾಗಿ ಬಳಸದಿದ್ದರೂ ಅದು ಅವರ ಸ್ಮಶಾನದ ಜಾಗದೊಂದಿಗೆ ಹಳ್ಳಿಯ ಗುಡಿಯನ್ನು ಸಂಪರ್ಕಿಸುತ್ತದೆ.''

''ಮತ್ತೆ ಅದಕ್ಕೂ ಶಾಲೆಗೂ ಏನು ಸಂಬಂಧ ?'' ಮುಖ್ಯೋಪಾಧ್ಯಾಯ ಕೇಳಿದ.

''ಅದು ನಂಗೊತ್ತಿಲ್ಲ'' ಉತ್ತರಿಸಿದ ಮತ್ತೊಬ್ಬ ಭುಜ ಕುಣಿಸುತ್ತ.

''ಆದರೆ ನನಗೆ ನೆನಪಿದೆ, ನಾವು ಅದನ್ನು ಮುಚ್ಚುವ ನಿರ್ಧಾರ ಮಾಡಿದಾಗ ಒಂದು ದೊಡ್ಡ ಗಲಾಟೆಯೇ ಆಯಿತು''.

''ಅದು ಸ್ವಲ್ಪ ದಿನಗಳ ಮೊದಲು. ಆದರೆ ಅದನ್ನು ಈಗ ಉಪಯೋಗಿಸುವುದಿಲ್ಲವಲ್ಲಾ ?''

''ಸರ್ಕಾರಿ ಶಿಕ್ಷಣಾಧಿಕಾರಿಗಳು ಇದರ ಬಗ್ಗೆ ಏನು ತಿಳಿದುಕೊಳ್ತಾರೆ, ಮುಂದಿನ ವಾರ ಶಾಲಾ ತನಿಖೆಗೆ ಬಂದಾಗ ? ಹಳ್ಳಿ ಜನ, ನಂಗೆ ಗೊತ್ತಿರುವ ಹಾಗೆ, ಶಾಲಾ ಕೊಠಡಿಯನ್ನು ಬಳಸಬಹುದು, ತನಿಖೆಯ ಸಮಯದಲ್ಲಿ, ಅಧರ್ಮೀಯರ ವಿಧಿಗಾಗಿ''.

ಆ ಶಾಲೆಗೆ ಹೋಗುವ ಹಾಗೂ ಬರುವ ದಾರಿಯಲ್ಲಿ ಭರ್ಜರಿ ಕೋಲುಗಳನ್ನು ಎರಡೂ ಕಡೆ ನೆಡಿಸಲಾಯಿತು. ಅವುಗಳ ಮೇಲೆ ಮುಳ್ಳುತಂತಿಗಳನ್ನು ಹಾಕಿ ಭದ್ರಪಡಿಸಲಾಯಿತು.

ಮೂರು ದಿನಗಳ ನಂತರ, ಹಳ್ಳಿಯ ಪಾದ್ರಿ ಶಾಲಾ ಮುಖ್ಯೋಪಾಧ್ಯಾಯರನ್ನು ಕಾಣಲು ಬಂದ. ಆತ ವಯಸ್ಸಾದವನು, ಕೊಂಚ ಬಾಗಿ ನಡೆಯುತ್ತಿದ್ದ. ಗಟ್ಟಿಯಾದ ಊರುಗೋಲನ್ನು ಹಿಡಿದುಕೊಂಡು ನೆಲಕ್ಕೆ ಬಡಿಯುತ್ತಾ ಬಂದ. ಪ್ರತಿ ಸಲ ತನ್ನ ವಾದದಲ್ಲಿ ಹೊಸ ವಿಷಯವನ್ನು ಮಂಡಿಸುತ್ತಾ ''ನಮ್ಮ ಪುರಾತನ ಪಾದಚಾರಿಗಳ ದಾರಿಯನ್ನು ಇತ್ತೀಚೆಗೆ ತಾನೆ ಮುಚ್ಚಿದ್ದೀರಿ ಅಂತ ನಾನು ಕೇಳಿದೆ'' ಎಂದ, ಸ್ವಾಗತ ಮಾತುಗಳ ವಿನಿಮಯದ ನಂತರ.

ಓಬಿ, ''ಹೌದು, ನಮ್ಮ ಶಾಲಾ ಕಾಂಪೌಂಡನ್ನು ಹೆದ್ದಾರಿ ಮಾಡೋದಕ್ಕೆ ಜನಗಳಿಗೆ ಅವಕಾಶ ಕೊಡಕ್ಕಾಗಲ್ಲ'' ಎಂದುತ್ತರಿಸಿದ.

ಪಾದ್ರಿ ಹೇಳಿದ, ತನ್ನ ಊರುಗೋಲನ್ನು ಕೆಳಗೆ ಇಡುತ್ತಾ, ''ನೋಡಪ್ಪ ಇಲ್ಲಿ, ಈ ದಾರಿ ನೀನು, ನಿನ್ನ ಅಪ್ಪ ಹುಟ್ಟುವ ಮುಂಚಿನಿಂದಲೂ ಇಲ್ಲೇ ಇತ್ತು. ಈ ಹಳ್ಳಿಯ ಇಡೀ ಜೀವನ ಅದನ್ನು ಅವಲಂಬಿಸಿದೆ. ಕಾಲವಾಗಿರೋ ನಮ್ಮ ಸಂಬಂಧಿಕರು ಅಲ್ಲೇ ಇದ್ದಾರೆ ಹಾಗೂ ನಮ್ಮ ಹಿಂದಿನವರು ಅಲ್ಲಿಂದಲೇ ನಮ್ಮನ್ನು ನೋಡುತ್ತಿರುತ್ತಾರೆ. ಅದಕ್ಕಿಂತ ಮುಖ್ಯವಾಗಿ ಅದು ಮುಂದೆ ಹುಟ್ಟಲಿರುವ ಮಕ್ಕಳು ಓಡಾಡೋ ದಾರಿ.''

ಅದನ್ನೆಲ್ಲಾ ನಗುತ್ತಲೇ ಕೇಳಿಸಿಕೊಂಡ ಓಬಿ ''ನಮ್ಮ ಶಾಲೆಯ ಉದ್ದೇಶವೆಂದರೆ ಇಂಥಾ ನಂಬಿಕೆಗಳನ್ನೆಲ್ಲಾ ನಿರ್ಮೂಲನೆ ಮಾಡಬೇಕು. ಸತ್ತವರಿಗೆ ಪಾದಚಾರಿಗಳ ಮಾರ್ಗ ಬೇಕಿಲ್ಲ. ಆ ವಾದವೇ ವಿಚಿತ್ರವಾಗಿದೆ. ಇಂಥಾ ವಿಚಾರಗಳ ಬಗ್ಗೆ ನಿಮ್ಮ ಮಕ್ಕಳಿಗೆ ಪಾಠ ಹೇಳೋದು ನಮ್ಮ ಕರ್ತವ್ಯ'' ಎಂದು ಹೇಳಿದ.

''ನೀವು ಹೇಳೋದು ನಿಜ ಇರಬಹುದು'' ಪಾದ್ರಿ ಉತ್ತರಿಸಿದ. ''ಆದರೆ ನಾವು ನಮ್ಮ ಹಿಂದಿನವರು ಹೇಳಿದ್ದನ್ನೇ ಅನುಸರಿಸುವುದು. ನೀನು ಆ ದಾರಿಯನ್ನು ಮತ್ತೆ ತೆರೆದರೆ, ನಾವು ನಿನ್ನೊಂದಿಗೆ ಜಗಳವಾಡಲ್ಲ. ನಾವು ಯಾವಾಗಲೂ ಹೇಳೋದೆ ಇದು. ಗಿಡುಗವೂ ಕೂತುಕೊಳ್ಳಲಿ, ಗರುಡನೂ ಕೂತುಕೊಳ್ಳಲಿ'' ಎಂದು ಹೇಳಿ ಹೊರಡಲು ಸಿದ್ಧನಾದ.

''ಕ್ಷಮಿಸಿ'', ಆ ತರುಣ ಮುಖ್ಯೋಪಾಧ್ಯಾಯ ಹೇಳಿದ. ''ಆದರೆ ಶಾಲಾ ಕಾಂಪೌಂಡನ್ನು ಸಾರ್ವಜನಿಕ ದಾರಿಯನ್ನಾಗಿ ಮಾಡಕ್ಕಾಗಲ್ಲ. ಅದು ನಮ್ಮ ನೀತಿ ನಿಯಮಗಳಿಗೆ ವಿರುದ್ಧವಾದುದು. ನಾನು ನಿಮಗೆ ಹೇಳೋದು ಇಷ್ಟೆ. ನೀವು ಬೇರೆ ಒಂದು ದಾರಿಯನ್ನು ಕಟ್ಟಿಕೊಳ್ಳಿ, ನಮ್ಮ ಆವರಣದ ಪಕ್ಕದಲ್ಲಿ. ಬೇಕಾದರೆ ಅದನ್ನು ಕಟ್ಟುವುದಕ್ಕೆ ಸಹಾಯ ಮಾಡಲು ನಮ್ಮ ಹುಡುಗರಿಗೆ ಹೇಳ್ತೀನಿ. ನಿಮ್ಮ ಪೂರ್ವಿಕರಿಗೆ, ದಾರಿ ಪಕ್ಕಕ್ಕೆ ಹೋದರೆ ಏನೂ ಹೊರೆಯಾಗಲ್ಲಾ ಅಂದುಕೋಳ್ತೀನಿ.''

''ನಾನು ಹೇಳೋದು ಏನೂ ಉಳಿದಿಲ್ಲ'' ಅಂದ ಆ ವೃದ್ಧ ಪಾದ್ರಿ ಹೊರಗಡೆ ಕಾಲಿಡುತ್ತ.

ಎರಡು ದಿನಗಳ ನಂತರ ಓರ್ವ ತರುಣಿ ಆ ಹಳ್ಳಿಯಲ್ಲಿ ಸತ್ತಳು, ಮಗುವಿಗೆ ಜನ್ಮ ಕೊಟ್ಟ ನಂತರ. ಜ್ಯೋತಿಷಿಯೋರ್ವನನ್ನು ವಿಚಾರಿಸಲಾಗಿ, ಅವನು ಬೇಲಿಯ ನಿರ್ಮೂಲನದಿಂದ ಆಗಿರುವ ನಷ್ಟಕ್ಕೆ ಮಾಲೀಕರಿಗೆ ಮಾಡಬೇಕಾದ ಅನೇಕ ಶಾಸ್ತ್ರೋಕ್ತ ಪರಿಹಾರಗಳನ್ನು ಹೇಳಿದನು.

ಮಾರನೇ ದಿನ ಓಬಿ ತನ್ನ ಕೆಲಸಗಳನ್ನು ಮಾಡುತ್ತಲೇ ಎದ್ದು ನಿಂತು ನೋಡಿದ. ಸುಂದರವಾದ ಬೇಲಿಗಳೆಲ್ಲಾ ಎಳೆದುಹಾಕಲ್ಪಟ್ಟದ್ದವು. ಆ ದಾರಿಯ ಬಳಿ ಮಾತ್ರವಲ್ಲ, ಆ ಶಾಲೆಯ ಸುತ್ತಲೂ ಇದ್ದ ಹೂವಿನ ಗಿಡಗಳೆಲ್ಲಾ ನೆಲಕಚ್ಚಿದ್ದವು. ಅಲ್ಲದೆ ಶಾಲೆಯ ಕಟ್ಟಡಗಳಲ್ಲೊಂದನ್ನು ನೆಲಸಮ ಮಾಡಲಾಗಿತ್ತು. ಅಂದು ಬಿಳಿಯ ಮೇಲ್ವಿಚಾರಕನೊಬ್ಬನು ಶಾಲೆಗೆ ತನಿಖೆ ಮಾಡಲು ಬಂದ. ಆ ಶಾಲೆಯ ಪ್ರಾಂಗಣದ ಬಗ್ಗೆ ಕೆಟ್ಟ ವರದಿಯೊಂದನ್ನು ಬರೆದಿದ್ದ. ಅದರಲ್ಲಿ ಬರೆದ ಒಕ್ಕಣಿಕೆ ಹೀಗಿತ್ತು. ''ಶಾಲೆಯ ಹಾಗೂ ಹಳ್ಳಿಯ ನಡುವೆ ವಲಸೆಯವರ ಮೇಲಿನ ಯುದ್ಧೋಪಾದಿ ಸನ್ನಿವೇಶ ಉಂಟಾಗಿರುವುದು ಹೊಸ ಮುಖ್ಯೋಪಾಧ್ಯಾಯನ ದಾರಿ ತಪ್ಪಿದ ಉತ್ಸಾಹದಿಂದ.''

ಇಂಗ್ಲಿಷ್ ಮೂಲ : **ಚಿನೂವ ಅಚಿಬೆ**
ಕನ್ನಡಕ್ಕೆ : **ಎಂ. ಎಸ್. ರಘುನಾಥ್**
ಹೆಚ್.ಐ.ಜಿ.೪೦, ೬ನೇ ಮುಖ್ಯರಸ್ತೆ, ಕೆ.ಹೆಚ್.ಬಿ. ಕಾಲೋನಿ
೨ನೇ ಹಂತ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯.



ವಿ. ಚಂದ್ರಶೇಖರ ನಂಗಲಿ

# ಕುವೆಂಪು ಕಾದಂಬರಿಗಳು : ಹೊಸ ಓದು ತತ್ವ

'ದೆಹಲಿ' ಎಂಬ ಶಬ್ದವು ಸಂಸ್ಕೃತದ 'ದೇಹಲಿ' (=ದ್ವಾರಬಂಧ, ದಾರಂದ, ದಾಲ ಬಂದರ, ಚೌಕಟ್ಟು, ನಿಲ, ತಲೆಬಾಗಿಲು ಎಂಬರ್ಥದ) ಶಬ್ದದಿಂದ ನಿಷ್ಪನ್ನಗೊಂಡಿದೆಯೆಂದು ಲೋಹಿಯಾ ಬರೆದಿದ್ದಾರೆ. ಭಾರತವನ್ನು ಆಕ್ರಮಿಸಿಕೊಳ್ಳಲು ಬಯಸಿದವರಿಗೆ, ದೆಹಲಿಯೇ ಹೆಬ್ಬಾಗಿಲಾಗಿತ್ತು ಎಂಬುದು ಲೋಹಿಯಾ ಅಭಿಪ್ರಾಯ. 'ದೇಹಲಿ - ದೀಪ ನ್ಯಾಯ' ಎಂದರೆ ದ್ವಾರಬಂಧದ ಚೌಕಟ್ಟಿನ ಮೇಲಿಟ್ಟ ದೀಪದಂತೆ ಸಮದರ್ಶಿಯಾದ ನ್ಯಾಯ ಎಂದರ್ಥ. ಅಡ್ಡಗೋಡೆಯ ಮೇಲಿಟ್ಟ ದೀಪವು ಬೆಳಕನ್ನು ಸಮದರ್ಶಿಯಾಗಿ ಕೊಡುವುದಿಲ್ಲ. ಅದೇ ದೀಪವನ್ನು ಪ್ರವೇಶ ದ್ವಾರದ ಚೌಕಟ್ಟಿನ ಮೇಲಿಟ್ಟರೆ, (= ದೇಹಲಿ ದೀಪ) ಎಲ್ಲೆಡೆ ಬೆಳಕು ಹರಡುತ್ತಾ ಸಮದರ್ಶಿಯಾಗಿರುತ್ತದೆ.

'ಕುವೆಂಪು' ಎಂಬ ದೀಪವನ್ನು ಹಲವು ಸಂಘ ಸಂಸ್ಥೆಗಳ ಸಹಯೋಗದಲ್ಲಿ ದೆಹಲಿಯ ದಾಲಬಂದರದ ಮೇಲಿಟ್ಟ ಕೀರ್ತಿಯು ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ - ಕುಪ್ಪಳಿಯ ಶ್ರೀ ಕಡಿದಾಳ್ ಪ್ರಕಾಶ್ ಅವರಿಗೆ ಸಲ್ಲುತ್ತದೆ. ಕಾಳಿದಾಸನಲ್ಲಿ ಪೂರ್ವ ಶಾಕುಂತಲೆ ಮತ್ತು ಉತ್ತರ ಶಾಕುಂತಲೆ ಇರುವಂತೆ, ಕುವೆಂಪು ಕಾದಂಬರಿಗಳಲ್ಲಿ ಮೊದಲು ಬರೆದ 'ಕಾನೂರು ಹೆಗ್ಗಡಿತಿ' ಉತ್ತರ ಶಾಕುಂತಲೆಯಾಗಿದ್ದರೆ, ನಂತರ ಬರೆದ 'ಮಲೆಗಳಲ್ಲಿ ಮದುಮಗಳು' ಪೂರ್ವ ಶಾಕುಂತಲೆ ಎಂದು ಹೇಳಬಹುದು. ಪ್ರಸ್ತುತ, ಈ ಕಾದಂಬರಿಗಳಿಗೆ ಹೊಸಬಗೆಯ ಓದನ್ನು ಕಂಡುಕೊಳ್ಳುವ, ತನ್ಮೂಲಕ ಸ್ಥಾವರವಾದ ಚಿಂತನೆಗಳನ್ನು ಜಂಗಮಗೊಳಿಸುವ ಇರಾದೆ ನನ್ನಲ್ಲಿದೆ.

ಸಾಮಾಜಿಕ ಜೀವನದಲ್ಲಿ ಮುಂಚೂಣಿ (= ಮುಂದಿನ ಸಾಲು) ಮತ್ತು ಹಿಂಚೂಣಿ (= ಹಿಂದಿನ ಸಾಲು) ಎಂಬ ಉಭಯ ವಿರುದ್ಧವಾದ ಇಬ್ಬಗೆಯ ಮನೋಧರ್ಮಗಳು ಚಾಲ್ತಿಯಲ್ಲಿರುತ್ತವೆ. ಇವುಗಳ ಆವರಣ ಕೂಡ ಬೇರೆ ಬೇರೆ ಎಂಬುದನ್ನು ಇಲ್ಲಿ ನೆನಪಿನಲ್ಲಿಡಬೇಕು. ಪಂಚತಂತ್ರದ 'ಎರಡು ಗಿಳಿಗಳ ಕತೆ'ಯಲ್ಲಿ ಬೇರೆ ಬೇರೆ ಆವರಣದಲ್ಲಿ ಬೆಳೆದ ಆದರೆ, ರೂಪ - ವಯಸ್ಸು -ಚೇಷ್ಟೆಗಳಲ್ಲಿ ಸಮಾನವಾಗಿರುವ ಎರಡು ಗಿಳಿಗಳ ವೃತ್ತಾಂತವಿದೆ. ಈ ಎರಡು ಗಿಳಿಗಳ "ಗುಣದೋಷಂಗಳ್ ಸಂಸರ್ಗಜನ್ಯಂಗಳ್" ಎಂಬ ಮಾತು ಬರುತ್ತದೆ. ಈ ಗಿಳಿಗಳಂತೆಯೇ ಎರಡು ಬಗೆಯ ಆವರಣಗಳು ಮುಂಚೂಣಿ ಮತ್ತು ಹಿಂಚೂಣಿಯ ಸಂಸ್ಕೃತಿಗಳು, ಸಾಹಿತ್ಯಗಳು, ಜೀವನಶೈಲಿಗಳಲ್ಲಿ ಮನಗಾಣಬಹುದು. ಸಾಮಾಜಿಕ ಜೀವನದ ವಿವಿಧ ಸ್ತರಗಳಾದ ಆರ್ಥಿಕ-ರಾಜಕೀಯ-ಶೈಕ್ಷಣಿಕ-ಧಾರ್ಮಿಕ-ಸಾಂಸ್ಕೃತಿಕ ಕ್ಷೇತ್ರಗಳನ್ನು ಆಕ್ರಮಿಸಿ ಕೊಂಡಿರುವವರು ಮತ್ತು ಇವುಗಳ ಮೇಲೆ ಭದ್ರವಾದ ಹಿಡಿತವನ್ನು ಹೊಂದಿರುವವರು ಮುಂಚೂಣಿ ವರ್ಗ

ಕುವೆಂಪು ಕಾದಂಬರಿಗಳಲ್ಲಿ 'ಏಕೈಕ'ವೆನ್ನಬಹುದಾದ ಕ್ರಿಯೆ - ಕಾಲ - ದೇಶಗಳಿಲ್ಲ... ಈ ಕಾದಂಬರಿಗಳಿಗೆ 'ಪ್ರಾದೇಶಿಕ' ಎಂಬ ಹಣೆಪಟ್ಟಿ ಹಚ್ಚಿರುವ ವಿಮರ್ಶೆಯ ವಾಗ್‌ವಿಲಾಸಗಳಿಗೆ ಧಿಕ್ಕಾರವಿರಲಿ ! ಮಲೆನಾಡಿನ ಕುಗ್ರಾಮದಲ್ಲಿ ನಡೆಯುವ ಕರಿಪಾದ್ರಿ ಜೀವರತ್ನಯ್ಯನ ಉಪದೇಶಗಳಿಂದ ಹಿಡಿದು, ಭಾರತದ ಅಷ್ಟಮಠಗಳು, ತಿರುಪತಿ, ಧರ್ಮಸ್ಥಳಗಳಲ್ಲಿ ನಡೆಯುತ್ತಿರುವ ಅಡ್ಡಪಲ್ಲಕ್ಕಿ ಉತ್ಸವಗಳು, ಜಗದ್ಗುರು ಪಾದಪೂಜೆಗಳನ್ನು ವಿಡಂಬಿಸುತ್ತಾ , ಅಮೇರಿಕಾ ದೇಶದ ಚಿಕಾಗೋ ನಗರದಲ್ಲಿ ನಡೆಯುತ್ತಿರುವ ಸ್ವಾಮಿ ವಿವೇಕಾನಂದರ ಭಾಷಣದವರೆಗೆ ಸರ್ವವ್ಯಾಪಿಯಾಗಿ ಹಬ್ಬಿಕೊಳ್ಳುತ್ತಾ ಪ್ರಾದೇಶಿಕ - ರಾಷ್ಟ್ರೀಯ - ವಿಶ್ವಾತ್ಮಕ ನೆಲೆಗಳ ಕೂಡಲ ಸಂಗಮದಂತಿರುವ ಕಾದಂಬರಿಯನ್ನು 'ಪ್ರಾದೇಶಿಕ' ಎನ್ನುವುದು ಅಸಂಬದ್ಧವಾಗಿದೆ. ಆದರೆ, ಕುವೆಂಪು ಅವರನ್ನು ಅನುಕರಿಸುತ್ತಾ 'ಏಕೈಕ'ವೆನ್ನಬಹುದಾದ ಕ್ರಿಯೆ - ಕಾಲ - ದೇಶಗಳಿಗೆ ನಿಷ್ಠರಾದವರು ಪ್ರಾದೇಶಿಕ ಕಾದಂಬರಿಗಳನ್ನು ಬರೆದಿದ್ದಾರೆಂಬುದನ್ನು ನೆನೆದರೆ, ಕುವೆಂಪು ಕಾದಂಬರಿಗಳ ಮಹತ್ವದ ಅರಿವಾಗಬಹುದು.

ಎನಿಸಿಕೊಳ್ಳುತ್ತಾರೆ. ಮೇಲ್ಕಾಣಿಸಿದ ಎಲ್ಲ ಕ್ಷೇತ್ರಗಳಲ್ಲಿ ಮುನ್ನೆಲೆಗೆ ಬಾರದೆ, ತಮ್ಮ ಪಾಡಿಗೆ ತಾವೆಂಬಂತೆ ಬದುಕುವವರು ಮತ್ತು ನುಡಿದಂತೆ ನಡೆದು ಕೊಳ್ಳುವವರು ಹಿಂಚೂಣಿ ವರ್ಗದವರಾಗುತ್ತಾರೆ. 'ಮುಂಚೂಣಿ ವರ್ಗ'ವನ್ನು ಹಳೆಯ ಫ್ರೆಂಚ್‌ನಲ್ಲಿ 'ಅವಾಂತ್ ಗಾರ್ದ್' ಎಂದು ಕರೆಯುತ್ತಾರೆ. 'ವ್ಯಾನ್‌ಗಾರ್ಡ್' ಎಂಬುದು ಇದಕ್ಕೆ ಸಂಬಂಧಿಸಿದೆ.

ಆ ಪದದ ಅರ್ಥಗಳಲ್ಲಿ ಮೊದಲಿಗೆ ಮಿಲಿಟರಿ ಶಕ್ತಿಯ ವಿವರಣೆಯನ್ನು ನೀಡಿ,ನಂತರ ಇದರ ವಿಸ್ತರಣೆಯಂತೆ ಸುಭದ್ರ ಹಿಡಿತವನ್ನು ಸ್ಥಾಪಿಸಿಕೊಳ್ಳುವ ಯಾವುದೇ ಚಳುವಳಿ, ಕ್ಷೇತ್ರ, ಜನರು ಎಂದು ನಿರೂಪಿಸಿರುವುದು ಹೆಚ್ಚು ಉಚಿತವಾಗಿದೆ. ಏಕೆಂದರೆ, ಮಿಲಿಟರಿಯು ಒಂದು ರಾಷ್ಟ್ರದ ಗಡಿಗಳನ್ನು ಕಾಯ್ದುಕೊಂಡಿರುವ ನಿಯಂತ್ರಕ ಶಕ್ತಿಯಾಗಿದ್ದರೆ, ಈ ಮುಂಚೂಣಿ ವರ್ಗವು ಸಾಮಾಜಿಕ ಜೀವನದ ನಿಯಂತ್ರಕ ಶಕ್ತಿಯಾಗಿರುತ್ತದೆ. ಮುಂಚೂಣಿಯ ಸಂಸ್ಕೃತಿ ಮತ್ತು ಮುಂಚೂಣಿಯ ಸಾಹಿತ್ಯಗಳು ಸದಾ ಮುಂಚೂಣಿಯ ಓದುಗಳನ್ನು ಹುಟ್ಟುಹಾಕುತ್ತಾ ಪಟ್ಟಭದ್ರ ಹಿತಾಸಕ್ತಿಗಳ ಸಂರಕ್ಷಣೆ ಮಾಡುತ್ತಿರುತ್ತವೆ. ಮಿಲಿಟರಿ ಶಕ್ತಿಗಳಿಗೂ ಮುಂಚೂಣಿ ವರ್ಗಕ್ಕೂ ವ್ಯತ್ಯಾಸವೊಂದಿದೆ : ಯುದ್ಧ ಭೂಮಿಯಲ್ಲಿ ಮುಂಚೂಣಿಯೆಂದರೆ ಸಾವಿಗೆ ಆಹ್ವಾನ ಕೊಟ್ಟಂತೆಯೇ! ಸಾಂಸ್ಕೃತಿಕ ಕ್ಷೇತ್ರದಲ್ಲಿ ಮುಂಚೂಣಿಯೆಂದರೆ ಸದವಕಾಶಗಳ ಸುಗ್ಗಿ ಎಂದೇ ಅರ್ಥ. ಮುಂಚೂಣಿಯ ಓದುಗಳ ಪ್ರಮುಖ ಲಕ್ಷಣಗಳಿವು :

೧. ಅಧಿಕಾರ ಕೇಂದ್ರಗಳಿಂದ ಪ್ರಸಾರಗೊಳ್ಳುತ್ತಿರುತ್ತವೆ.

೨. ಏಕರೂಪಾತ್ಮಕ ಚೌಕಟ್ಟುಗಳಿಂದ ಕೂಡಿರುತ್ತವೆ.

೩. ಯಾಂತ್ರಿಕ ವಿಧಾನಗಳ ಅನುಸರಣೆಯಾಗಿರುತ್ತವೆ.

ಶೈಕ್ಷಣಿಕ ವ್ಯಾಸಂಗದಲ್ಲಿ ಬೋಧಿಸಲ್ಪಡುವ ಮೆತಡಾಲಜಿಯ ಲಕ್ಷಣಗಳು ಕೂಡ ಇವೇ ಆಗಿದೆ. ಅಧಿಕಾರಕೇಂದ್ರ, ಸ್ಥಿರೀಕೃತ ಚೌಕಟ್ಟುಗಳು, ಯಾಂತ್ರಿಕ ವಿಧಾನಗಳೇ ಮೆತಡಾಲಜಿಯ ತಿರುಳು ಎನ್ನಬಹುದು. ಕನ್ನಡದ ಓದಿನಲ್ಲಿ ಇಂದಿಗೂ ಯುರೋಪಿಯನ್ ಮತ್ತು ಏಷಿಯನ್ ಎಂಬ ಅಧಿಕಾರಕೇಂದ್ರ, ಸ್ಥಿರೀಕೃತಚೌಕಟ್ಟು, ಯಾಂತ್ರಿಕ ವಿಧಾನಗಳ ಆಧಿಪತ್ಯ ಅಳಿದಿಲ್ಲ. ಕುವೆಂಪು ಮತ್ತು ಬೇಂದ್ರೆಯವರ ಸಾಹಿತ್ಯ ಪರಿಶೀಲನೆ ಮಾಡುವಾಗ ಕನ್ನಡದಲ್ಲಿ ಅನುಸರಿಸುತ್ತಿರುವ ತೌಲನಿಕ ವಿಮರ್ಶೆಯು ಯೂರೋಪಿಯನ್ ಮಾದರಿಗಳ ಜೊತೆಗಿಟ್ಟು ೧. ಡಿಟೋ (=ಅದೇ) ವಿಮರ್ಶೆಗಳು ಮತ್ತು ೨. ಗೈರು ವಿಮರ್ಶೆಗಳನ್ನು ಬರೆಯುತ್ತಾ ಬಂದಿದೆ. ಇಂಗ್ಲಿಷ್ ಕವಿಗಳ ಸಾಹಿತ್ಯದ ಲಕ್ಷಣಗಳನ್ನು ಅಭ್ಯಾಸ ಮಾಡಿ, ಇದಕ್ಕನುಗುಣವಾದ ರೀತಿಯಲ್ಲೆ ಕನ್ನಡ ಕವಿಗಳನ್ನು ಅರ್ಥೈಸುವುದನ್ನೇ ನಾನಿಲ್ಲಿ ಡಿಟೋವಿಮರ್ಶೆ ಮತ್ತು ಗೈರುವಿಮರ್ಶೆ ಎಂದು ಕರೆದಿದ್ದೇನೆ. ಉದಾಹರಣೆಗೆ, ಬಿ.ಎಂ.ಶ್ರೀ. ಅವರು ಕನ್ನಡದಲ್ಲಿ ಗ್ರೀಕ್ ದುರಂತ ನಾಟಕಗಳ ಗೈರುಹಾಜರಿಯನ್ನು ಗುರುತಿಸಿದ್ದರೆ, ಡಿ. ಆರ್. ನಾಗರಾಜ ಅವರು ಕನ್ನಡದಲ್ಲಿ ಮಹಾನ್ ವಾಸ್ತವವಾದಿ ಕಾದಂಬರಿಗಳ ಗೈರುಹಾಜರಿಯನ್ನು ಗುರುತಿಸಿದ್ದಾರೆ. ಹಾಗೆಯೇ ವರ್ಡ್ಸ್ ವರ್ತ್‌ನನ್ನು 'ನೇಚರ್ ಪೊಯೆಟ್' ಎಂದು ಕರೆದು ಅವನ ಕಾವ್ಯದ ಲಕ್ಷಣಗಳನ್ನು ನಿರೂಪಣೆ ಮಾಡುತ್ತಾ, ಕುವೆಂಪು ಅವರಲ್ಲೂ ಇಂಥ ಲಕ್ಷಣಗಳ ಹಾಜರಿ ಮತ್ತು ಗೈರುಹಾಜರಿಯನ್ನು ಗುರುತಿಸಿರುವುದುಂಟು. ಇಂಥದೇ ನಿರೂಪಣೆಗಳನ್ನು ಬೇಂದ್ರೆ, ಕೆ.ಎಸ್.ನ. ಕಾವ್ಯಕ್ಕೂ ಅನ್ವಯಿಸಲಾಗಿದೆ.

**ಹತ್ತುಮೀನು ಪರಂಪರೆ**

ಕುವೆಂಪು ಕಾದಂಬರಿಗಳಲ್ಲಿ ಹತ್ತು ಮೀನು ಕಡಿಯುವುದರ ಪ್ರಸಕ್ತಿಯಿದೆ. ಮಳೆಗಾಲದಲ್ಲಿ ನದಿಗಳು, ಸಣ್ಣಪುಟ್ಟ ತೊರೆಗಳು, ಹಳ್ಳಗಳಲ್ಲಿ ನೀರಿಗೆದುರಾಗಿ ಈಜುತ್ತಾ ಸಾಗುವುದು ಮೀನುಜಾತಿಯ ಪ್ರಕೃತಿಧರ್ಮ. ಇವೇ ಹತ್ತುಮೀನುಗಳು. ಸ್ವಂತ ಚಲನೆಯಿಲ್ಲದ ಕಸಕಡ್ಡಿಗಳು ನದಿಯ ಸೆಳವಿಗೆ ಸಿಕ್ಕು ಕೊಚ್ಚಿಕೊಂಡು ಹೋಗುವುದು ಸಾಮಾನ್ಯ. ಆದರೆ, ಮುಂದೆ ಎದುರಾಗುವ ಅಪಾಯಗಳನ್ನು ಲೆಕ್ಕಿಸದೆ, ಜೀವದ ಹಂಗು ತೊರೆದು ಹರಿವ ನೀರಿಗೆದುರಾಗಿ ಈಜುತ್ತಾ ಸಾಗುವ ಹತ್ತುಮೀನುಗಳು ನಮ್ಮೂರಿನ ತೊರೆಯಿಂದ ಹಿಡಿದು ಮಹಾನದಿ ನೈಲ್‌ವರೆಗೆ ಸರ್ವಸಾಮಾನ್ಯ ಸಂಗತಿಯಾಗಿದೆ. ಕನ್ನಡ ಸಾಹಿತ್ಯದ ಪರಿಸ್ಥಿತಿಯೂ ಹೀಗೆ ಇದೆ. ಮುಂಚೂಣಿಯ ಸಂಸ್ಕೃತಿ ಮತ್ತು ಮುಂಚೂಣಿಯ ಸಾಹಿತ್ಯಗಳು ಆಯಾಕಾಲದ ಚಳುವಳಿಗಳು, ವಿವಿಧ ಪಂಥಗಳು ಇವುಗಳ ಸೆಳವಿಗೆ ಸಿಕ್ಕು ಗೊತ್ತುಗುರಿಯಿಲ್ಲದ ಕಸಕಡ್ಡಿಗಳಂತೆ ಸ್ವಂತ ಚಲನೆಯಿಲ್ಲದೆ, ಕೊಚ್ಚಿಕೊಂಡು ಹೋಗುತ್ತಿರುತ್ತವೆ. ಆದರೆ, ಸತ್ವಶಾಲಿಗಳಾದ ಮಹಾಕವಿಗಳು ಮುಂಚೂಣಿಯ ಪ್ರವಾಹಕ್ಕೆ ಎದುರಾಗಿ ಈಜುವ ಹತ್ತು ಮೀನುಗಳಂತೆ, ಹೋರಾಡುತ್ತಾ ತಮ್ಮ ಸ್ವಂತಿಕೆಯನ್ನು ಉಳಿಸಿಕೊಂಡು ಜೀವಂತಿಕೆಯನ್ನು ಮೆರೆಯುತ್ತಾರೆ. ಈ ಬಗೆಯನ್ನು ನಾನು 'ಹತ್ತು ಮೀನು ಪರಂಪರೆ' ಎಂದು ಕರೆಯುತ್ತೇನೆ. ಸಾವಿರದ ಇನ್ನೂರು ವರ್ಷಗಳ ಇತಿಹಾಸವನ್ನು ಹೊಂದಿರುವ ಕನ್ನಡದ ಲಿಖಿತ ಸಾಹಿತ್ಯ ಪರಂಪರೆಯಲ್ಲಿ (= ಮೌಖಿಕ ಸಾಹಿತ್ಯವು ಒಟ್ಟು ಸತ್ವದಲ್ಲಿ ಹತ್ತು ಮೀನು ಪರಂಪರೆಯೇ ಆಗಿದೆ.) ಪಂಪ-ರನ್ನ, ವಚನಕಾರರು, ಹರಿಹರ - ರಾಘವಂಕ, ಕುಮಾರವ್ಯಾಸ, ಚಾಮರಸ, ಸರ್ವಜ್ಞ, ಪುರಂದರದಾಸ - ಕನಕದಾಸರು, ತತ್ವಪದಕಾರರು ಮುಂತಾದವರೆಲ್ಲ ಹತ್ತು ಮೀನು ಪರಂಪರೆಗೆ ನಿದರ್ಶನವಾಗಿದ್ದಾರೆ.

ಕನ್ನಡ ಸಾಹಿತ್ಯದಲ್ಲಿರುವ ಹತ್ತುಮೀನು ಪರಂಪರೆಯ ಸಾಲಿನಲ್ಲಿ ದಾರ್ಶನಿಕ ಪ್ರತಿಭೆಯ ಮಹಾಕವಿಗಳೆನಿಸಿಕೊಂಡವರು ಕೆಲವರು ಮಾತ್ರ! ಇವರ ಕೃತಿಗಳೇ ಕನ್ನಡ ಸಾಹಿತ್ಯ ಪರಂಪರೆಯ ಪ್ರಮುಖ ತಿರುವುಗಳಾಗಿವೆ. ಹತ್ತನೇ ಶತಮಾನದಲ್ಲಿ ಪಂಪ, ಹನ್ನೆರಡನೇ ಶತಮಾನದಲ್ಲಿ ಅಲ್ಲಮಪ್ರಭು, ಹದಿನೈದನೇ ಶತಮಾನದಲ್ಲಿ ಕುಮಾರವ್ಯಾಸ, ಇಪ್ಪತ್ತನೇ ಶತಮಾನದಲ್ಲಿ ಕುವೆಂಪು ಈ ನಾಲ್ವರು ಕನ್ನಡದ ಹತ್ತುಮೀನು ಪರಂಪರೆಯ ಮಹಾಕವಿಗಳಾಗಿದ್ದಾರೆ. ಇವರೆಲ್ಲ ತಮ್ಮ ಕಾಲದ ಮುಂಚೂಣಿಯ ಓದುಗಳು ಮತ್ತು ಮೆತಡಾಲಜಿಯ ವಿರುದ್ಧ 'ಈಸುವೆಂ' ಎಂಬ ಛಲವನ್ನು ಹೊಂದಿರುವವರು. ಅಧಿಕಾರ ಕೇಂದ್ರ ಸ್ಥಿರೀಕೃತ ಚೌಕಟ್ಟು - ಯಾಂತ್ರಿಕ ವಿಧಾನಗಳಿಗೆ ಶರಣಾಗದೆ, (= ಮುಂಚೂಣಿಗೆ ಬಾರದೆ) ಅಗೆನ್‌ಸ್ಟ್ ಮೆತಡಾಲಜಿ ಎಂಬ ಬುದ್ಧಿ-ಭಾವಗಳಿಂದ ವಿಹರಿಸಿದವರು. ಕವಿ ಕುವೆಂಪು ತನ್ನನ್ನು ಯಾವುದೇ ರೀತಿಯ ಮೆತಡಾಲಜಿಗೆ ಅರ್ಪಿಸಿಕೊಂಡಿರಲಿಲ್ಲ. ರಾಮಕೃಷ್ಣಾಶ್ರಮದ ವಿಚಾರಗಳನ್ನು 'ಮೆತಡಾಲಜಿ' ಎನ್ನುವುದಾದರೆ, ಇದರಿಂದಲೂ ಕುವೆಂಪು ಪಾರಾಗಿರುವುದನ್ನು 'ನೆನಪಿನ ದೋಣಿಯಲ್ಲಿ' ಆತ್ಮಕಥನದಲ್ಲಿ ಮನಗಾಣಬಹುದು. ರಾಮಕೃಷ್ಣಾಶ್ರಮದ ಪ್ರಭಾವದಿಂದ ಅದ್ವೈತದ ಗುಂಗಿಹುಳುವಾಗಿದ್ದ ಕುವೆಂಪು ಅವರು ತಾಯಿಯ ಸಾವಿನಿಂದ ಕಂಗೆಟ್ಟಿದ್ದ ತಂಗಿಯರು ತನ್ನೆಡೆಗೆ ಅಳುತ್ತಾ ಧಾವಿಸಿ ಬಂದಾಗ ಸಂತೈಸುವುದಕ್ಕೆ ಬದಲು ತೀವ್ರವಾಗಿ ಗದರಿದ್ದನ್ನು ನೆನೆದು ಪಶ್ಚಾತ್ತಾಪಪಟ್ಟಿರುವುದನ್ನು ಓದಿಕೊಂಡವರಿಗೆ, ಕುವೆಂಪು ಅವರ ಬದಲಾದ ಮನೋಧರ್ಮದ ಅರಿವಾಗುತ್ತದೆ. ರಾಮಕೃಷ್ಣಾಶ್ರಮದ ವಿಚಾರಗಳಿಂದ ಕುವೆಂಪು ತನ್ನನ್ನು ಬಿಡಿಸಿಕೊಳ್ಳದೆ ಇದ್ದಿದ್ದರೆ ಖಂಡಿತವಾಗಿಯೂ ಇವೆರಡು ಕಾದಂಬರಿಗಳು ಹುಟ್ಟುತ್ತಲೇ ಇರಲಿಲ್ಲ. ಒಬ್ಬ ಕಲಾವಿದ ತನ್ನ ಕಾಲದ ಐಡಿಯಾಲಜಿಗಳು ಮತ್ತು ಮೆತಡಾಲಜಿಗಳನ್ನು ಮೀರದೆ ಇದ್ದರೆ, ದಾರ್ಶನಿಕ ಪ್ರತಿಭೆಯ ವಾಹಕವಾಗಿ ಪರಿಣಮಿಸಲಾರ. ಈ ದೃಷ್ಟಿಯಿಂದ ಪಂಪ, ಅಲ್ಲಮಪ್ರಭು, ಕುಮಾರವ್ಯಾಸ, ಕುವೆಂಪು ಕನ್ನಡದ ಹತ್ತುಮೀನು ಪರಂಪರೆಯ 'ಜೀವ ಪ್ರಭೆ' ಆಗಿದ್ದಾರೆ. 'ಕೊಳಲು' ಕವಿತಾ ಸಂಕಲನದಿಂದ ಆರಂಭಿಸಿ, 'ನೆನಪಿನ ದೋಣಿಯಲ್ಲಿ' ಆತ್ಮಕಥನದವರೆಗೆ ಕುವೆಂಪು ಅವರ ಸಮಗ್ರ ಸಾಹಿತ್ಯವನ್ನು ಒಳಹೊಕ್ಕು ನೋಡಿದರೆ, 'ಅಗೆನ್‌ಸ್ಟ್ ಮೆತಡಾಲಜಿ'ಯ ರಚನೆಗಳೆಂಬುದು ಸ್ಪಷ್ಟವಾಗುತ್ತದೆ. ನವ್ಯದ ಅಬ್ಬರ ವಿಶೇಷವಾಗಿದ್ದ ಅರವತ್ತರ ದಶಕದಲ್ಲಿ ಕುವೆಂಪು 'ಮಲೆಗಳಲ್ಲಿ ಮದುಮಗಳು' ಪ್ರಕಟಿಸಿರುವುದು ಕೂಡ ಅಗೆನ್‌ಸ್ಟ್ ಮೆತಡಾಲಜಿಯೇ ಆಗಿದೆ.

**ಕ್ರಿಯೆ - ಕಾಲ - ದೇಶಗಳ ನಿರ್ವಹಣೆ**

ತಾತ್ವಿಕ ದೃಷ್ಟಿಯಿಂದ ವಿವೇಚಿಸಿದರೆ, ಸಾಹಿತ್ಯ ಕಲೆಯ ಮೂಲಭೂತ ವಸ್ತು




ಕುವೆಂಪು ಅವರು ಕುಳಿತುಕೊಳ್ಳಲು ಉಪಯೋಗಿಸುತ್ತಿದ್ದ ಬಂಡೆ

ಕ್ರಿಯೆ-ಕಾಲ-ದೇಶಗಳ ನಿರ್ವಹಣೆಯೆಂಬುದು ಅರಿವಾಗುತ್ತದೆ. ಇದನ್ನೇ ಸಾಹಿತ್ಯ ವಿಮರ್ಶೆಯಲ್ಲಿ 'ವಸ್ತುವಿನ್ಯಾಸ ಕ್ರಮ'ಎಂದು ಕರೆಯುತ್ತಾರೆ. ಒಬ್ಬ ಲೇಖಕ ಕ್ರಿಯೆ-ಕಾಲ-ದೇಶಗಳನ್ನು ಹೇಗೆ ನೋಡುತ್ತಾನೆ ಎಂಬುದೇ ಬಹುಮುಖ್ಯ ಪ್ರಶ್ನೆಯಾಗಿದೆ. ಇದರಲ್ಲಿ ಎರಡು ಬಗೆಗಳಿವೆ :

೧. ಒಡೆದು ನೋಡುವುದು (= ವಿಶ್ಲೇಷಣೆ)

೨. ಕೂಡಿಸಿ ನೋಡುವುದು (= ಸಂಶ್ಲೇಷಣೆ)

ಒಡೆದು ನೋಡುವ ದೃಷ್ಟಿಗೆ ಕ್ರಿಯೆ-ಕಾಲ-ದೇಶಗಳು ಬಿಡಿ-ಬಿಡಿಯಾಗಿ ಮತ್ತು ಪರಸ್ಪರ ಸಂಬಂಧವಿಲ್ಲದ ಪ್ರತ್ಯೇಕ ಘಟಕಗಳಾಗಿ ಕಾಣುತ್ತವೆ. ಈ ಬಗೆಯ ಪ್ರತ್ಯೇಕ ದೃಷ್ಟಿಯಿಂದಾಗಿ ಪ್ರಮಾಣಬದ್ಧತೆ ಏರ್ಪಟ್ಟು, ಕ್ರಿಯೆ- ಕಾಲ-ದೇಶಗಳನ್ನು ಆದಿಮಧ್ಯಾಂತ ಸರಣಿಯಲ್ಲಿ ಗ್ರಹಿಸುವುದು ಅನಿವಾರ್ಯವಾಗುತ್ತದೆ.




ಕೂಡಿಸಿ ನೋಡುವ ದೃಷ್ಟಿಗೆ ಕ್ರಿಯೆ-ಕಾಲ-ದೇಶಗಳು ಅವಿಭಾಜ್ಯವಾಗಿ ಕಾಣುತ್ತವೆ. ಕಾಲ-ದೇಶಗಳ ಹಂಗು ಹರಿದುಕೊಂಡ ಕ್ರಿಯಾ ಮಥನವು ಎಲ್ಲ ಪ್ರಮಾಣಗಳನ್ನು ಮೀರುತ್ತಾ ಅಪ್ರಮಾಣವಾಗಿಬಿಡುತ್ತದೆ. ಆದಿಮಧ್ಯಾಂತ ರಹಿತವಾದ ಕ್ರಿಯೆ, ಕಾಲ, ದೇಶಗಳ ನಿರೂಪಣೆಯಲ್ಲಿ ''ಎತ್ತಣ ಸಂಬಂಧವಯ್ಯ''? – ಎಂಬ ಬೆರಗು ಹುಟ್ಟುತ್ತದೆ. ಆದ್ದರಿಂದಲೇ ಕುವೆಂಪು ಕಾದಂಬರಿಯ ಅರಿಕೆಯಲ್ಲಿ, ''ಇಲ್ಲಿ ಯಾವುದಕ್ಕೂ ಮೊದಲಿಲ್ಲ ಯಾವುದಕ್ಕೂ ಕೊನೆಯಿಲ್ಲ'', ಎಂದು ಹೇಳಿಕೊಂಡಿದ್ದಾರೆ. ಒಡೆದು ನೋಡುವ ದೃಷ್ಟಿಯಲ್ಲಿ ಒಂದೊಂದನ್ನು ಎತ್ತಿ ಹಿಡಿದು ತೋರಿಸುವ ಮನೋಧರ್ಮವಿರುತ್ತದೆ.

ಕೂಡಿಸಿ ನೋಡುವ ದೃಷ್ಟಿಯಲ್ಲಿ ವೈವಿಧ್ಯಮಯ ಕ್ರಿಯೆ - ಕಾಲ - ದೇಶಗಳನ್ನು ಒಳಗೊಳ್ಳುವ ಅಖಂಡವಾದ ಮನೋಧರ್ಮವಿರುತ್ತದೆ.

ಕುವೆಂಪು ಕಾದಂಬರಿಗಳಲ್ಲಿ 'ಏಕೈಕ'ವೆನ್ನಬಹುದಾದ ಕ್ರಿಯೆ - ಕಾಲ - ದೇಶಗಳಿಲ್ಲ... ಈ ಕಾದಂಬರಿಗಳಿಗೆ 'ಪ್ರಾದೇಶಿಕ' ಎಂಬ ಹಣೆಪಟ್ಟಿ ಹಚ್ಚಿರುವ ವಿಮರ್ಶೆಯ ವಾಗ್‌ವಿಲಾಸಗಳಿಗೆ ಧಿಕ್ಕಾರವಿರಲಿ ! ಮಲೆನಾಡಿನ ಕುಗ್ರಾಮದಲ್ಲಿ ನಡೆಯುವ ಕರಿಪಾದ್ರಿ ಜೀವರತ್ನಯ್ಯನ ಉಪದೇಶಗಳಿಂದ ಹಿಡಿದು, ಭಾರತದ ಅಷ್ಟಮಠಗಳು, ತಿರುಪತಿ, ಧರ್ಮಸ್ಥಳಗಳಲ್ಲಿ ನಡೆಯುತ್ತಿರುವ ಅಡ್ಡಪಲ್ಲಕ್ಕಿ ಉತ್ಸವಗಳು, ಜಗದ್ಗುರು ಪಾದಪೂಜೆಗಳನ್ನು ವಿಡಂಬಿಸುತ್ತಾ, ಅಮೇರಿಕಾ ದೇಶದ ಚಿಕಾಗೋ ನಗರದಲ್ಲಿ ನಡೆಯುತ್ತಿರುವ ಸ್ವಾಮಿ ವಿವೇಕಾನಂದರ ಭಾಷಣದವರೆಗೆ ಸರ್ವವ್ಯಾಪಿಯಾಗಿ ಹಬ್ಬಿಕೊಳ್ಳುತ್ತಾ ಪ್ರಾದೇಶಿಕ - ರಾಷ್ಟ್ರೀಯ - ವಿಶ್ವಾತ್ಮಕ ನೆಲೆಗಳ ಕೂಡಲಸಂಗಮದಂತಿರುವ ಕಾದಂಬರಿಯನ್ನು 'ಪ್ರಾದೇಶಿಕ' ಎನ್ನುವುದು ಅಸಂಬದ್ಧವಾಗಿದೆ. ಆದರೆ, ಕುವೆಂಪು ಅವರನ್ನು ಅನುಕರಿಸುತ್ತಾ 'ಏಕೈಕ'ವೆನ್ನಬಹುದಾದ ಕ್ರಿಯೆ - ಕಾಲ - ದೇಶಗಳಿಗೆ ನಿಷ್ಠರಾದವರು ಪ್ರಾದೇಶಿಕ ಕಾದಂಬರಿಗಳನ್ನು ಬರೆದಿದ್ದಾರೆಂಬುದನ್ನು ನೆನೆದರೆ, ಕುವೆಂಪು ಕಾದಂಬರಿಗಳ ಮಹತ್ವದ ಅರಿವಾಗಬಹುದು.

ಕುವೆಂಪು ಕಾದಂಬರಿಗಳು ವೈವಿಧ್ಯಮಯವಾದ ಕ್ರಿಯಾಪ್ರವಾಹ, ಕಾಲಪ್ರವಾಹ, ದೇಶಪ್ರವಾಹಗಳಿಂದ ಮೈದುಂಬಿಕೊಂಡು ಒಟ್ಟು ಪರಿಣಾಮದಲ್ಲಿ ಬದುಕಿನ ಪ್ರವಾಹರೂಪಿ ಚೈತನ್ಯದ ನಿರೂಪಣೆಯಾಗಿವೆ. ನಾನಿಲ್ಲಿ ಬಳಸಿರುವ 'ಕ್ರಿಯಾ ಪ್ರವಾಹ' ಎಂಬುದನ್ನೆ ಕುವೆಂಪು 'ಘಟನಾ ಪರಂಪರೆ' ಎಂಬ ನುಡಿಯಿಂದ ಸೂಚಿಸಿದ್ದಾರೆ. ಸಾವಿರಾರು ವರ್ಷಗಳ 'ಸಾಹಿತ್ಯ ಪರಂಪರೆ' ಇರುವಂತೆಯೇ ಈ ಕಾದಂಬರಿಗಳಲ್ಲಿ ಹಲವು ತಲೆಮಾರುಗಳ ಘಟನಾಪರಂಪರೆ ನಿರೂಪಿತವಾಗಿದೆ. ಜಮೀನಿನಲ್ಲಿ ರೈತಾಪಿ ಜನರು ತೆಗೆಯುವ ಅರ್ಧವಾರ್ಷಿಕ ಅಥವಾ ಏಕವಾರ್ಷಿಕ ಬೆಳೆಯಂತೆ, ಕುವೆಂಪು ಸಜೀವ ನಿರೂಪಣೆಯ ಕಾದಂಬರಿಗಳನ್ನು ನಮಗೆ ಕೊಟ್ಟಿದ್ದಾರೆ. ಉದಾಹರಣೆಗೆ, ಮಳೆಗಾಲದ ಪ್ರಾರಂಭ ಸಮಯದ ವರ್ಣನೆಯಿಂದ ಆರಂಭವಾಗುವ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯು ಅಡಿಕೆ ಕೊನೆ ತೆಗೆಯುವ ಸಮಯದ ವರ್ಣನೆಯಲ್ಲಿ ಕೊನೆಯಾಗಿದೆ. 'ಕೊನೆ ತೆಗೆಯುವುದು' (= ಕತೆ ಕೊನೆಗೊಳ್ಳುವುದು) ಎಂಬ ದೇಸಿ ನುಡಿಗಟ್ಟು ಧ್ವನಿರಮ್ಯವಾಗಿದೆ. ಒಟ್ಟಿನಲ್ಲಿ, ಅರ್ಧ ವಾರ್ಷಿಕ ಬೆಳೆಯಂತೆ ಹ್ರಸ್ವಾವಧಿಯ ಕಥಾನುಕ್ರಮಣಿಕೆಯಲ್ಲಿ ಆದಿ ಮಧ್ಯಾಂತರಹಿತವಾದ, ವೈವಿಧ್ಯಮಯವಾದ, ಕ್ರಿಯೆ-ಕಾಲ- ದೇಶಗಳನ್ನು 'ಬೆಸುಗೆ' ಹಾಕಿರುವ ಈ ಬಗೆಯು ಕನ್ನಡಕ್ಕೆ ಅನನ್ಯವಾದ ಕೊಡುಗೆಯಾಗಿದೆ.

ಕುವೆಂಪು ಕಾದಂಬರಿಗಳಲ್ಲಿರುವ 'ಕಡಗೋಲು ಗಂಬ' ಮತ್ತು 'ಮಸೆಕಲ್ಲು' ಬಹುಮುಖ್ಯವಾದುವು. ಇವುಗಳನ್ನು ಭೌತಿಕ ಪದಾರ್ಥಗಳಂತೆ ನೋಡದೆ, ಪ್ರಜ್ಞಾಸ್ತರದ ಪ್ರತೀಕಗಳಾಗಿಯೂ ನೋಡಬೇಕು. ಇವು ಕಾದಂಬರಿಯ ಒಟ್ಟು ಹರಹಿನಲ್ಲಿ ಲೀನವಾಗಿದ್ದು ಕಾಲ ಪ್ರವಾಹದ ಮೂಕ ಸಾಕ್ಷಿಗಳಾಗಿ ಕಾಣಿಸಿಕೊಂಡಿವೆ. ಮರದ ಪೊಟರೆಯನ್ನು ವರ್ಣಿಸುತ್ತಾ ಕುವೆಂಪು ಆದಿಮಾನವನ ಕಾಲಕ್ಕೆ ಮಾತ್ರವಲ್ಲ ಜುರಾಸಿಕ್ ಯುಗಕ್ಕೆ ನಮ್ಮನ್ನು ಕರೆದೊಯ್ದುಬಿಡುತ್ತಾರೆ ! ...''ಕಾಡಿನಂಚಿನಲ್ಲಿ, ಬೈಗುಗಪ್ಪಿನ ಮಬ್ಬಿನಲ್ಲಿ, ಹೆಮ್ಮರದ ದಿಂಡಿನಲ್ಲಿರುವ ಮರಕುಟಿಗನ ಗೂಡಿನ ಪೊಟರೆ ಅತ್ಯಂತ ಪೂರ್ವಕಾಲದ ಬಾಳಿನ ಯಾವುದೊ ಒಂದು ಕಗ್ಗವಿಯನ್ನೊ ಪೆಡಂಭೂತದ ಕಣ್ಣನ್ನೊ 'ಅಸ್ಮೃತಿ'ಗೆ ತಂದು ಅನಿರ್ವಚನೀಯವಾದ ಭೀತಿಯನ್ನುಂಟುಮಾಡಬಹುದು''... (ಮ.ಮ.೪೪).

ಕಂಬಳಿ ಹುಳು ಚಿಟ್ಟೆಯಾಗಿ ಪರಿವರ್ತನೆಗೊಳ್ಳುವಂತೆ, ಕುವೆಂಪು ಕಾದಂಬರಿಯ ಪ್ರಾದೇಶಿಕ ವರ್ಣನೆಗಳು ವಿಶ್ವಮೈತ್ರಿಯಲ್ಲಿ ವಿಹರಿಸುವುದನ್ನು ಸಹೃದಯರು ಅರ್ಥ ಮಾಡಿಕೊಳ್ಳಬೇಕು. ಇದನ್ನು 'ದೇಶಪ್ರವಾಹ' ಎಂಬ ನುಡಿಯಿಂದ ಸೂಚಿಸಬಹುದು. ಒಂದು ನಿರ್ದಿಷ್ಟ ಪ್ರದೇಶದ ಭೌಗೋಳಿಕ ಚಹರೆಗಳನ್ನು ಮೀರುವುದರಿಂದ 'ದೇಶಪ್ರವಾಹ' ಸಾಧ್ಯವಾಗುತ್ತದೆ. ಸುಬ್ಬಣ್ಣ ಹೆಗ್ಗಡೆಯವರ ಹಂದಿಯೊಡ್ಡಿಯ ವರ್ಣನೆಯು ವಿಶ್ವಲೀನವಾಗುವುದನ್ನು ಗಮನಿಸಿ: ...''ಮಳೆ ತೊಯ್ದ ಮಲೆನಾಡಿನ ಮೇಲೆ ಮೂಡಿದೆಳಬಿಸಿಲಿಗೆ ಮೈಯೊಡ್ಡಿದ ಸುಬ್ಬಣ್ಣ ಹೆಗ್ಗಡೆಯವರಿಗೆ ಸಂಭವಿಸಿದ ಸಂತೋಷಕ್ಕೆ ಬಹುಮಟ್ಟಿಗೆ ಕಾರಣವಾಗಿತ್ತು ಆ 'ಅಸ್ಮೃತಿ'. ಯಾವ ಯಾವ ಕಾಲದಲ್ಲಿ, ಯಾವ ಯಾವ ದೇಶದಲ್ಲಿ, ಯಾವ ಯಾವ ರೂಪದಲ್ಲಿ, ಯಾವ ಯಾವ ಸನ್ನಿವೇಶದಲ್ಲಿ, ಯಾವ ಸಾಗರತೀರದಲ್ಲಿ, ಯಾವ ಪರ್ವತಶಿಖರದಲ್ಲಿ, ಯಾವ ಅರಣ್ಯಕುಂಜ ಸೀಮೆಯಲ್ಲಿ ಅಂತಹ ಸೂರ್ಯೋದಯದ ಸೊಂಪನ್ನು ಹಿಂದೆ ಎನಿತು ಸಾರಿ ಅನುಭವಿಸಿದ್ದರೋ ಏನೋ? ಆ ಸಂಸ್ಕಾರ ಕೋಶದ ಖಜಾನೆಗೆ ಬೀಗದ ಕೈ ಮಾತ್ರವಾಗಿತ್ತು, ಆ ಪೊತ್ತಿನ ಸೂರ್ಯೋದಯ ! ಹಳೆಮನೆಯಾದರೇನಂತೆ ? ಹಂದಿಯೊಡ್ಡಿಯ ಬಳಿಯಾದರೇನಂತೆ ? ಅಕ್ಷರಹೀನ ಅಸಂಸ್ಕೃತ ಒಕ್ಕಲಿಗನಾದರೇನಂತೆ ? ಮುಪ್ಪಡರಿದ್ದರೇನಂತೆ ? ಸುಬ್ಬಣ್ಣ ಹೆಗ್ಗಡೆಯೂ ವಿಶ್ವಪ್ರಜೆ !

''ಬೆನ್ನಿಗೆ ಬಿದ್ದ ಬಿಸಿಲು ನಾಲಗೆಗೆ ಬೀಳುವ ಜೇನಾಗಿತ್ತು. ಹೆಗ್ಗಡೆಯವರು 'ಸ್ ಸ್ ಸ್ ಅಯ್ ' ಎನ್ನುತ್ತಾ ಮುಂದಾಡುವ ರೀತಿಯಲ್ಲಿ ಬೆನ್ನು ನೀವಿಕೊಂಡರು. ಲೋಕವೆಲ್ಲ ಅಶೋಕವಾಗಿ ಸುಖಮಯವಾಯಿತು. ಮನದಲ್ಲಿ ವಿಶ್ವಮೈತ್ರಿ ಮೂಡಿತು. ಹಂದಿ, ಕೋಳಿ, ಕುರಿ, ಮರ, ಕಾಡು, ಆಕಾಶ, ಹಾಡುತ್ತಿದ್ದ ಹಕ್ಕಿಗಳ ಹಿಂಡು, ನೆರೆಹೊರೆ – ಎಲ್ಲದರ ಮೇಲೆಯೂ ಅಕ್ಕರೆವುಕ್ಕಿತು. ಹೆಗ್ಗಡೆಯವರ ಜೀವಮಾನ ಕಟ್ಟಡದಲ್ಲಿ ಆ ಒಂದು ಕ್ಷಣದ ಬಾಳು ಗೋಪುರದ ತುದಿಯ ಕಳಶದ ಚಿನ್ನದ ಡೆಂಕಣಿಯಾಗಿ ಸ್ವರ್ಗದೊಡನೆ ಸರಸವಾಡಿತು'' ..... (ಮ.ಮ. ೪೫)

ಅತ್ಯಂತ ಸಂಕುಚಿತವಾದ ಒಂದು ನಿರ್ದಿಷ್ಟ ಕ್ರಿಯೆ-ಕಾಲ-ದೇಶಗಳಿಗೆ ಬದ್ಧವಾದ ಸೀಮಿತ ದೃಷ್ಟಿಯುಳ್ಳವರು ಸುಬ್ಬಣ್ಣ ಹೆಗ್ಗಡೆಯನ್ನು ವಿಶ್ವಪ್ರಜೆಯಾಗಿ ನೋಡಲಾರರು ! ಹಂದಿಯೊಡ್ಡಿಯ ವರ್ಣನೆಯಿಂದ ವಿಶ್ವಮೈತ್ರಿಗೆ ಸ್ಥಿತ್ಯಂತರವಾಗಲಾರರು ! ಈ ದೃಷ್ಟಿಯಿಂದ ಕುವೆಂಪು ಅವರು 'ಪ್ರಾದೇಶಿಕತೆ' ಎಂಬ ಗಂಜಿಯಲ್ಲಿ ಬಿದ್ದ ನೊಣವಾಗದೆ, 'ಪ್ರಾದೇಶಿಕತೆ' ಎಂಬ ಹೂವನ್ನು ಹೊಕ್ಕು ಮಧುಪಾನ ಮಾಡಿ ಹೊರಬರುವ ದುಂಬಿಯಾಗಿ ಕಾಣಿಸುತ್ತಾರೆ. ಸುಬ್ಬಣ್ಣ ಹೆಗ್ಗಡೆಯ ಬೆನ್ನಿಗೆ ಬಿದ್ದ ಬಿಸಿಲು ಮತ್ತು ಕಾಲುಬೆರಳುಗಳ ಸಂದುಗಳಿಂದ ಪಿಚಕ್ಕನೆ ನುಗ್ಗುವ ಕೆಸರು – ಎರಡನ್ನೂ ಅಖಂಡವಾಗಿ ಗ್ರಹಿಸುವ ಕುವೆಂಪು ಅವರ ಮನೋಧರ್ಮ ಬಹು ವಿಶಿಷ್ಟವಾದುದು.

ಕನ್ನಡ ಕವಿಗಳು ಕಂಡ 'ಕಾಲ'ದ ಪರಿಕಲ್ಪನೆ ಮತ್ತು ಕಾಲಕ್ರಮದ ಚಿಂತನೆ ಈ ಸಂದರ್ಭದಲ್ಲಿ ಸ್ಮರಣೀಯವಾಗಿದೆ :

೧. ಪಂಪ ಪ್ರಜ್ಞೆ : 'ಇದು ನಿಚ್ಚಂ ಪೊಸತು'... ಎಂದು ಕವಿತ್ವವನ್ನು ಮನಗಾಣಿಸುವ

ಪಂಪನು ತನ್ಮೂಲಕ ವಸ್ತು ಸಿದ್ಧಿಯಿಂದ ಆಗುವ 'ನಿತ್ಯನೂತನ ಕಾಲ'ದ ಕಲ್ಪನೆಯನ್ನು ಮುಂದಿಟ್ಟಿದ್ದಾನೆ.

೨. ರನ್ನ ಪ್ರಜ್ಞೆ: ರನ್ನನ 'ಗದಾಯುದ್ಧ' ಕಾವ್ಯದಲ್ಲಿ ಕಾಲಾನುಕ್ರಮಣಿಕೆಯೇ ಇಲ್ಲ! ಕಾಲಕ್ರಮ ಭಂಗಕ್ಕೆ 'ಗದಾಯುದ್ಧ' ಕಾವ್ಯವು ಉತ್ತಮ ನಿದರ್ಶನ. ಇದನ್ನೇ ರನ್ನನು 'ಸಿಂಹಾವಲೋಕನ ಕ್ರಮ'ವೆಂದು ಕರೆದಿದ್ದಾನೆ.

೩. ಅಲ್ಲಮ ಪ್ರಜ್ಞೆ: ಕಾಲವನ್ನು ಪಂಚಾಂಗ ಅಥವಾ ಕ್ಯಾಲೆಂಡರ್‌ನ ಗುಲಾಮನನ್ನಾಗಿ ಮಾಡುವುದು ಮನುಷ್ಯನಿರ್ಮಿತ ಅವಿವೇಕಗಳಲ್ಲಿ ಒಂದು. ಕಾಲವನ್ನು ದಿನ - ವಾರ - ಪಕ್ಷ - ತಿಂಗಳು - ವರ್ಷ ಎಂಬಂತೆ ವಿಭಜಿಸುವುದು ಪಂಚಾಂಗದ ಫಲವೇ ಆಗಿದೆ. ಅಲ್ಲಮನು ಕಾಲವನ್ನು 'ಕಾಲ ಪ್ರವಾಹ' ಎಂಬಂತೆ ಮನಗಾಣಿಸಿದ್ದಾನೆ: ಹಿಂದಣ ಅನಂತವನೂ ಮುಂದಣ ಅನಂತವನೂ ಒಂದು ದಿನ ಒಳಕೊಂಡಿತ್ತು, ನೋಡಾ!

ಕುವೆಂಪು ಕಾದಂಬರಿಗಳೂ ಏಕಕಾಲಕ್ಕೆ ಪಂಪ ಪ್ರಜ್ಞೆ - ರನ್ನ ಪ್ರಜ್ಞೆ - ಅಲ್ಲಮ ಪ್ರಜ್ಞೆಗಳ ಕೂಡಲ ಸಂಗಮ ವಾಗಿದೆ. ಕುವೆಂಪು ಕಾದಂಬರಿಗಳು ವಸಾಹತುಪೂರ್ವ ಮತ್ತು ವಸಾಹತೋತ್ತರ ಎಂಬ ಕಾಲಖಂಡಗಳಿಗೆ ಸೀಮಿತವಾಗದೆ, ನಮ್ಮ ದೇಶದ ರಾಮಾಯಣ-ಮಹಾಭಾರತಗಳಂತೆ, 'ಇದು ನಿಚ್ಚಂ ಪೊಸತು' ಎಂಬಂತೆ ಮೂಡಿಬಂದಿವೆ. ಜಾಗತೀಕರಣದ ಈ ದಿನಗಳಲ್ಲೂ ಕುವೆಂಪು ಕಾದಂಬರಿಗಳು ತುಂಬ ಪ್ರಸ್ತುತವಾಗಿ ಕಾಣುತ್ತಿರುವುದು ಅವುಗಳಲ್ಲಿರುವ ನಿತ್ಯನೂತನತೆಯಿಂದ. ಇದೇ ಪಂಪ ಪ್ರಜ್ಞೆ!

ಕುವೆಂಪು ಕಾದಂಬರಿಗಳಲ್ಲಿ ಸರಳರೇಖಾತ್ಮಕ ಚಲನೆಯ ಕಾಲಾನುಕ್ರಮಣಿಕೆ ಇಲ್ಲ. ಒಂದು ಹಗಲು, ಒಂದು ರಾತ್ರಿಯ ದಿನಮಾನದಲ್ಲಿ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಅರ್ಧಭಾಗದ ನಿರೂಪಣೆಯಿದೆಯೆಂದರೆ, ಇದರ ಕ್ರಿಯಾಮಥನ ಮತ್ತು ಕ್ರಿಯಾಪ್ರವಾಹಗಳ ಅರಿವಾಗಬಹುದು. ರನ್ನನ ಕಾವ್ಯದಲ್ಲಿ ಸಿಂಹಾವಲೋಕನ ಕ್ರಮವಿದ್ದರೆ, ಕುವೆಂಪು ಕಾದಂಬರಿಯಲ್ಲಿ ಜೇಡಾವಲೋಕನ ಕ್ರಮವಿದೆ. ಚಿನ್ನಯ್ಯನ ಮೀನು ಶಿಕಾರಿಯಲ್ಲಿ ಬಣ್ಣ ಬಣ್ಣದ ದೊಡ್ಡ ಸಾಲಗದ (= ಕಾಡು ಜೇಡ) ವರ್ಣನೆಯಿದೆ. ಜೇಡರಹುಳು ಹಲವು ಎಳೆಗಳನ್ನು ಎಳೆದು ನಂತರ, ಆ ಎಳೆಗಳನ್ನೆಲ್ಲ ಬಂಧಿಸಿ ನೇಯ್ದು 'ಜೇಡರ ಬಲೆ' ಕಟ್ಟುವಂತೆ ಕುವೆಂಪು ಈ ಕಾದಂಬರಿಗಳನ್ನು ಬರೆದಿದ್ದಾರೆ.

*ನೆಯ್ದಾಳುತಿದೆ ಜಗವನೊಂದತಿ ವಿರಾಣ್ಮನಂ*
*ಸೂಕ್ಷ್ಮಾತಿಸೂಕ್ಷ್ಮ ತಂತ್ರದಿಂ ಬಿಗಿದು ಕಟ್ಟಿಯುಂ*
*ಜೀವಿಗಳ್ಗಿಚ್ಛೆಯಾ ಸ್ವಾತಂತ್ರ್ಯ ಭಾವಮಂ ನೀಡಿ...*

ಎಂಬ ನುಡಿಗಳು ಕುವೆಂಪು ಕಾದಂಬರಿಗಳಿಗೆ ಬಹು ಚೆನ್ನಾಗಿ ಅನ್ವಯಿಸುತ್ತವೆ. ಈ ಕಾದಂಬರಿಗಳ ಪಾತ್ರಗಳು ಕವಿ ಪ್ರಜ್ಞೆಯ ಪರಿತಂತ್ರಕ್ಕೆ ಅಡಿಯಾಳಾಗದೆ, ಕಲಾಪ್ರಜ್ಞೆಯ ಸ್ವತಂತ್ರಭಾವಕ್ಕೆ ತಮ್ಮನ್ನು ತೆರೆದುಕೊಂಡಿವೆ. ಇದು ಸಾಧ್ಯವಾಗಿರುವುದು ಕಾಲಕ್ರಮ ಭಂಗ (= ರನ್ನ ಪ್ರಜ್ಞೆ) ಮತ್ತು ಕಾಲಪ್ರವಾಹದ (= ಅಲ್ಲಮ ಪ್ರಜ್ಞೆ) ಕವಿ ಮನೋಧರ್ಮದಿಂದ ಎಂಬುದು ಬಹುಮುಖ್ಯ.

'ಕಾಲಮಾನ' ಮತ್ತು 'ಕಾಲಪ್ರವಾಹ' ಎಂಬುದು ನ್ಯಾರೋಗೇಜ್ ಮತ್ತು ಬ್ರಾಡ್‌ಗೇಜ್ ಇದ್ದಂತೆ! ಕಾಲವನ್ನು ಮಾನಕ ಮಾಡುವುದು ಅಥವಾ ಅಳೆಯುವುದು 'ಕಾಲಮಾನ' ದೃಷ್ಟಿಯಾಗುತ್ತದೆ. ಕಾಲವನ್ನು ಅಪ್ರಮಾಣವಾಗಿ ಗ್ರಹಿಸುವುದು 'ಕಾಲ ಪ್ರವಾಹ'ದ ವಿಶೇಷ ದೃಷ್ಟಿಯಾಗಿದೆ. ಕಾಲವನ್ನು ಅಳೆಯಲು ಸಾಧ್ಯವಿಲ್ಲವೆಂದು ಹೇಳುವ ಸ್ವಾಮಿ ವಿವೇಕಾನಂದರು ಇದನ್ನು ಚಮಚೆಯಲ್ಲಿ ಸಾಗರವನ್ನು ಅಳೆಯುವುದಕ್ಕೆ ಹೋಲಿಸಿ ವಿಡಂಬಿಸಿದ್ದಾರೆ. ಆದ್ದರಿಂದ, ಕ್ರಿಯೆ-ಕಾಲ-ದೇಶಗಳ ನಿರ್ವಹಣೆ ಮಾಡುವಾಗ ಅವುಗಳಿಗೆ ಅಂಟಿದ ಮಾನವ ನಿರ್ಮಿತ ಚಹರೆಗಳು ಮತ್ತು ಗಡಿರೇಖೆಗಳನ್ನು ಅಳಿಸಿಹಾಕುವವನೇ ನಿಜವಾದ ಲೇಖಕ! ಈ ದೃಷ್ಟಿಯಿಂದ ನೋಡಿದರೆ ಕನ್ನಡ ಸಾಹಿತ್ಯದಲ್ಲಿ ಕಾಲಮಾನದ ಲೇಖಕರ ಸಂಖ್ಯೆಯೇ ಅಧಿಕ! ಕುವೆಂಪು ಕಾಲ ಪ್ರವಾಹದ ಮಹಾನ್ ಲೇಖಕ. ಸಂಕುಚಿತವಾದ ಕ್ರಿಯೆ-ಕಾಲ-ದೇಶಗಳನ್ನು ಅಳಿಸಿ ಹಾಕುತ್ತಾ ವಿಸ್ತೃತವಾದ ಕ್ರಿಯೆ-ಕಾಲ-ದೇಶಗಳಲ್ಲಿ ವಿಶ್ವಲೀನಗೊಳಿಸುವುದು ಕುವೆಂಪು ಅವರ ಕಲಾ ಪ್ರಜ್ಞೆಯಾಗಿದೆ. ಇದನ್ನು ನಾನು 'ಸೃಜನಾತ್ಮಕ ವಿಶ್ವಲೀನತೆ' ಎಂದು ಕರೆಯುತ್ತೇನೆ. ಗ್ಲೋಬಲೈಸೇಷನ್‌ನಲ್ಲಿಯೂ ಕ್ರಿಯೆ-ಕಾಲ-ದೇಶಗಳ ಅಂತರವನ್ನು ಉಪಗ್ರಹ ಚಾಲಿತ ತಂತ್ರಜ್ಞಾನದಿಂದ ಅಳಿಸಿಹಾಕಲಾಗಿದೆ. ಇದು ಸ್ಪಷ್ಟವಾಗಿ 'ತಂತ್ರಜ್ಞಾನಾಧಾರಿತ ವಿಶ್ವಲೀನತೆ'ಯಾಗಿದೆ.

'ತಂತ್ರಜ್ಞಾನಾಧಾರಿತ ವಿಶ್ವಲೀನತೆ'ಯು ವಿಶ್ವ ಸಾಮ್ರಾಜ್ಯಶಾಹಿಯ ವ್ಯವಸ್ಥಿತ ಹುನ್ನಾರ ಮತ್ತು ಕಪಟ ಲೀಲೆ. ಆದರೆ, ಕುವೆಂಪು ಸಾಧಿಸಿರುವ 'ಸೃಜನಾತ್ಮಕ ವಿಶ್ವಲೀನತೆ'ಯು ಪಟ್ಟಭದ್ರರ ಹಿತಾಸಕ್ತಿಗಳಿಗೆ ವಿರುದ್ಧ ವಾಗಿದ್ದು, ಮನುಕುಲದ ಸಮಷ್ಟಿ ಕಲ್ಯಾಣಕ್ಕೆ ಬದ್ಧವಾಗಿದೆ. ವಿಶ್ವಲೀನತೆಯ ಎರಡು ಸ್ತರಗಳನ್ನು ಪು.ತಿ.ನ. ಮನಮುಟ್ಟುವಂತೆ ನಿರೂಪಿಸಿದ್ದಾರೆ:

..."ಎರಡು ಸ್ತರಗಳಲ್ಲಿ ಮಾತ್ರ ಮನುಷ್ಯ ತನ್ನ ಪ್ರತ್ಯೇಕತಾ ಭಾಗವನ್ನುಳಿದು ವಿಶ್ವಲೀನನಾಗುತ್ತಾನೆ. ೧. ಕೆಳಮಟ್ಟದ ಸುಷುಪ್ತಿಯಲ್ಲಿ. ೨. ಮೇಲುಮಟ್ಟದ ಆನಂದದಲ್ಲಿ. ಸಮಸ್ತ ದೈವಾಗಮಗಳೂ ಆತ್ಮೋತ್ಸವಗಳೂ ಸಕಲ ಕಲೆಗಳೂ ಮನುಷ್ಯನನ್ನು ಈ ಆನಂದದ ನೆಲೆಗೇರಿಸಲು ಯತ್ನಿಸುತ್ತವೆ. ಯಾವ ಕಲೆಗಾರ ಅಥವಾ ಕವಿ ಈ ಯತ್ನದಲ್ಲಿ ಕೃತಕೃತ್ಯನಾಗುತ್ತಾನೋ ಆತನೇ ಧನ್ಯ, ಆತನೇ ಲೋಕಮಾನ್ಯ"...

'ಕಾವ್ಯದ ಚರಿಗೆ'ಯಿಂದ.

ಪು.ತಿ.ನ. ಅವರ ಮಾತುಗಳಿಗೆ ಕುವೆಂಪು ಪ್ರತ್ಯಕ್ಷ ನಿದರ್ಶನವಾಗಿ ಕಾಣುತ್ತಾರೆ.

**ಸಿವಿಕ್ ವಿಸ್‌ಡಮ್ - ಫೋಕ್ ವಿಸ್‌ಡಮ್**

ಈ ಪರಿಭಾಷೆಗಳನ್ನು ಕನ್ನಡದಲ್ಲಿ ಪೌರನೀತಿಯ ಧೀಮಂತಿಕೆ ಮತ್ತು ಜಾನಪದ ಧೀಮಂತಿಕೆ ಎಂದು ಕರೆಯಬಹುದು. ಪೌರನೀತಿಯ ಧೀಮಂತಿಕೆಯು ಶಾಲಾ-ಕಾಲೇಜುಗಳ ಶಿಕ್ಷಣದಿಂದ ಸಿದ್ಧಿಯಾಗುವುದು. ಜಾನಪದ ಧೀಮಂತಿಕೆಯು ಜೀವನಶಾಲೆಯಿಂದ ಪ್ರಾಪ್ತಿಯಾಗುವುದು. ಪೌರನೀತಿಯನ್ನು ಬೋಧಿಸಲು 'ಪೌರನೀತಿ ಶಾಸ್ತ್ರ' ಎಂಬ ಪ್ರತ್ಯೇಕವಾದ ಜ್ಞಾನಶಿಸ್ತು ಶೈಕ್ಷಣಿಕ ವ್ಯಾಸಂಗದಲ್ಲಿದೆ. ಪೌರನೀತಿ, ನಾಗರಿಕ ಹಕ್ಕುಗಳು, ಪ್ರಜಾಪ್ರಭುತ್ವಗಳನ್ನು ಕುರಿತ ಪ್ರಬುದ್ಧ ಚಿಂತನೆ ಕಾಲಕ್ರಮೇಣ ವಿಕಾಸಗೊಂಡ ಬಗೆಗಳನ್ನು ಇಲ್ಲಿ ಕಾಣುತ್ತೇವೆ. 'ಆದರ್ಶರಾಜ್ಯ'ದ ವ್ಯಾಪ್ತಿ ಗೊಳಪಡುವ ಜನತೆ ಹೇಗಿರಬೇಕೆಂಬ ನಿರೂಪಣೆಯನ್ನು ಪ್ಲೇಟೋ ನೀಡಿದ್ದಾನೆ. ಕವಿಗಳನ್ನು ತನ್ನ ಆದರ್ಶ ರಾಜ್ಯದಿಂದ ಪ್ಲೇಟೋ ಹೊರಗಿಡಲು ಇರುವ ಪ್ರಮುಖ ಕಾರಣವೇನೆಂದರೆ, ಕವಿಗಳು ರಾಷ್ಟ್ರಪ್ರಜ್ಞೆಯ ಚೌಕಟ್ಟುಗಳಿಗೆ ಸೀಮಿತರಾಗುವುದಿಲ್ಲವೆಂಬುದೇ ಆಗಿದೆ. ರಾಷ್ಟ್ರಭಕ್ತಿ, ದೇಶಾಭಿಮಾನಗಳನ್ನು ಬಿಂಬಿಸುವ ಕವಿಗಳನ್ನು ಪ್ಲೇಟೋ ಒಪ್ಪಿಕೊಳ್ಳುತ್ತಾನೆ. ಕವಿಗಳು ತಮಗೆ ಸಹಜವಾದ ವಿಶ್ವಮಾನವ ಪ್ರಜ್ಞೆಯಿಂದ ರಾಷ್ಟ್ರಪ್ರಜ್ಞೆಗೆ ಘಾತವನ್ನುಂಟುಮಾಡುವರೆಂಬುದನ್ನು ತತ್ವಜ್ಞಾನಿ ಪ್ಲೇಟೋ ತನ್ನ ಮುಂಗಾಣ್ಕೆಯಿಂದ ಮನಗಂಡಿದ್ದನು. ಪೌರರು, ನಾಗರಿಕರು, ಪ್ರಜೆಗಳು ಕಲಿಕೆಯಿಂದ ಪಡೆದಿರುವ ನೀತಿಸಂಹಿತೆ, ಹಕ್ಕುಗಳು ಮತ್ತು ಕರ್ತವ್ಯಗಳ ಸ್ವರೂಪವನ್ನು ಪ್ರಾಕೃತಿಕರು, ಗ್ರಾಮ್ಯರು, ಜನಪದರು


ಮಲೆಗಳಲ್ಲಿ ಮದುಮಗಳು - ಒಂದು ದೃಶ್ಯ (ನಿರ್ದೇಶನ: ಸಿ. ಬಸವಲಿಂಗಯ್ಯ)

ತಿಳಿದಿರುವುದಿಲ್ಲ. ಎಷ್ಟೋ ವೇಳೆ ಇವರಿಗೆ ತಾವು ಯಾವ ರಾಷ್ಟ್ರದ ಪ್ರಜೆಗಳು ಎಂಬ ಅರಿವು ಇರುವುದಿಲ್ಲ. ಪೌರರಿಗೆ, ನಾಗರಿಕರಿಗೆ ರಾಷ್ಟ್ರ ಪ್ರಜ್ಞೆ ಪ್ರಮುಖವಾಗಿದ್ದರೆ, ಗ್ರಾಮ್ಯರಿಗೆ, ಜಾನಪದರಿಗೆ ಬೂಮ್ತಾಯಿ ಪ್ರಜ್ಞೆಯೇ ಬಹುಮುಖ್ಯವಾಗಿರುತ್ತದೆ. ಪ್ರಮಾಣಬದ್ಧವಾದ ರಾಷ್ಟ್ರ ಪ್ರಜ್ಞೆಯನ್ನು ಹೊಂದಿರುವ ಪೌರರು, ನಾಗರಿಕರು 'ಸುಸಂಸ್ಕೃತರು' ಎನಿಸಿಕೊಂಡಿದ್ದಾರೆ. ಆದರೆ, ಅಪ್ರಮಾಣವೆನ್ನಬಹುದಾದ ಬೂಮ್ತಾಯಿ ಪ್ರಜ್ಞೆಯನ್ನು ಹೊಂದಿರುವ ಗ್ರಾಮ್ಯರು, ಜಾನಪದರು 'ಅಸಂಸ್ಕೃತರು' ಎಂಬ ಬಿರುದಿಗೆ ಪಾತ್ರರಾಗಿರುವುದು ಸಂಸ್ಕೃತಿಯ ಅಣಕವಾಗಿದೆ.

ನಮ್ಮ ದೇಶದ ಜನಸಮುದಾಯವನ್ನು 'ಮೆಕಾಲೆಯ ಮಕ್ಕಳು' (ಸಿವಿಕ್ ವಿಸ್‌ಡಮ್) ಮತ್ತು 'ಮಲೆಯ ಮಕ್ಕಳು' (ಫೋಕ್ ವಿಸ್‌ಡಮ್) ಎಂದು ವಿಂಗಡಿಸಿಕೊಂಡರೆ, ಕುವೆಂಪು ಅವರ ಸಮಗ್ರ ಸಾಹಿತ್ಯ ಎತ್ತಿ ಹಿಡಿಯುವುದು ಮಲೆಯ ಮಕ್ಕಳನ್ನು! ಕುವೆಂಪು ಸಾಹಿತ್ಯದಲ್ಲಿ ಮೆಕಾಲೆಯ ಮಕ್ಕಳು ಟೀಕೆ-ವ್ಯಂಗ್ಯ-ವಿಡಂಬನೆಗಳಿಗೆ ಈಡಾಗಿದ್ದಾರೆ. ಭರತನು ರಾಮ ಪಾದುಕೆಗಳನ್ನು ತಲೆಯ ಮೇಲಿಟ್ಟುಕೊಂಡು ಸಿಂಹಾಸನದಲ್ಲಿ ಪ್ರತಿಷ್ಠಾಪನೆ ಮಾಡಿದಂತೆ, ಕುವೆಂಪು ಅವರು ಮಲೆಯ ಮಕ್ಕಳನ್ನು ತಲೆಯ ಮೇಲಿಟ್ಟುಕೊಂಡು ಸಾಹಿತ್ಯದಲ್ಲಿ ಪ್ರತಿಷ್ಠಾಪನೆ ಮಾಡಿದ್ದಾರೆ. ಇದನ್ನು ಕುವೆಂಪು ಅವರು 'ಮನಸ್ಸಿನ ಪಕ್ಷಪಾತ ಬುದ್ಧಿ' ಎಂದೇ ಕರೆದಿದ್ದಾರೆ :

...''ದೊಡ್ಡ ಅಧಿಕಾರಿಯೊಡನೆಯೊ ಅಥವಾ ಐಶ್ವರ್ಯವಂತರೊಡನೆಯೊ ಕಳೆದ ಕಾಲವನ್ನಾಗಲಿ, ಆಡಿದ ಮಾತುಗಳನ್ನಾಗಲಿ ಮನಸ್ಸು ಸಂಪೂರ್ಣವಾಗಿ ತಿರಸ್ಕರಿಸಿ ಮರೆತುಬಿಡಬಹುದು. ದರಿದ್ರನೊಡನೆಯೊ ಅನಾಮಧೇಯನೊಡನೆಯೊ ಕಳೆದ ಕಾಲವನ್ನೂ ನುಡಿದ ಮಾತುಗಳನ್ನೂ ಪೂಜ್ಯಬುದ್ಧಿಯಿಂದ ಪಾಲಿಸಬಹುದು; ಈ ವಿಷಯದಲ್ಲಿ ಮನಸ್ಸು ಬಹುದೊಡ್ಡ ಪಕ್ಷಪಾತಿ'' ...'ಮಲೆನಾಡಿನ ಚಿತ್ರಗಳು' ಮುನ್ನುಡಿಯಿಂದ. ಕುವೆಂಪು ಅವರ ಸಮಗ್ರ ಸಾಹಿತ್ಯದ ವಸ್ತುವೇನು ಎಂಬ ಪ್ರಶ್ನೆಗೆ ಹೀರೆಯ ಹೂವುಗಳು, ದರಿದ್ರದೇವೋಭವ, ಶ್ರೀ ಸಾಮಾನ್ಯನೇ ಭಗವನ್ ಮಾನ್ಯಂ ಎಂದು ಉತ್ತರಿಸಬೇಕಾಗುತ್ತದೆ. ಕವಿ ಬೇಂದ್ರೆಯವರು ಕೂಡ ಇದೇ ದೃಷ್ಟಿಯನ್ನು ಹೊಂದಿದ್ದರಿಂದಲೇ ''ಬಡತನವು ಸಾಹಿತ್ಯದ ಸಾರ್ವಭೌಮ ವಸ್ತು'' ಎಂದು ಹೇಳಿದ್ದಾರೆ. ಹುಲಿಕಲ್ ನೆತ್ತಿಯ ಎಂಟೆದೆಯ ಬಂಟ ನಾಯಿಗುತ್ತಿಯ ಫೋಕ್ ವಿಸ್‌ಡಮ್, ಇಲಿ ಕಿವಿ ಸೊಪ್ಪಿನ ಹಸೋಳೆ - ಕಾರೆಡಿಯ ಚಟ್ನಿಯನ್ನು ಬಲ್ಲ ಪೀಂಚಲು ಫೋಕ್‌ವಿಸ್‌ಡಮ್‌ಗಳು ಯಾವುದೇ ಬಗೆಯ ಸಿವಿಕ್ ವಿಸ್‌ಡಮ್‌ಗಿಂತಲೂ ಅತ್ಯುನ್ನತವಾಗಿ ಕಾಣುತ್ತದೆ. ಬಹುಶಃ ಈ ಕಾರಣದಿಂದಲೆ – ಓದಿಕೊಂಡವನಿಗಿಂತಲೂ ಅಗಸ ಮೇಲು! – ಎಂಬಗಾದೆ ಮಾತು ಹುಟ್ಟಿರಬಹುದು (= ಅಗಸ ಬಟ್ಟೆಯ ಕೊಳೆಯನ್ನು ತೊಳೆದುಬಿಡುತ್ತಾನೆ; ಓದಿಕೊಂಡವರು ಮನದ ಕೊಳೆಯನ್ನು ಉಳಿಸಿಕೊಂಡಿರುತ್ತಾರೆ).

ಕುವೆಂಪು ಕಾದಂಬರಿಗಳಲ್ಲಿ ಅನಾವರಣಗೊಳಿಸಿದ ಮಲೆಯ ಮಕ್ಕಳ ಜಗತ್ತು ಜೀವಂತವಾದ ಜಾನಪದ ಲೋಕವೆಂಬುದನ್ನು ಮರೆಯಬಾರದು. ಇದು ನಾಗರಿಕರ ದಾಹ ತಣಿಸುವ ಮ್ಯೂಸಿಯಂ ಜಾನಪದ ಲೋಕವಲ್ಲ! ಕುವೆಂಪು ಸಾಹಿತ್ಯದಲ್ಲಿ ಜಾನಪದ ಪ್ರಜ್ಞೆಯ ಗೈರುಹಾಜರಿಯನ್ನು ಮನಗಂಡಿರುವ 'ಮೆಕಾಲೆಯ ಮಕ್ಕಳು' ಮನೋಧರ್ಮದ ವಿಮರ್ಶಕರು ಇನ್ನು ಮೇಲಾದರೂ ಮುಕ್ತ ಮನಸ್ಸಿನಿಂದ ಪ್ರವೇಶಿಸುವುದನ್ನು ಕಲಿಯಬೇಕು. 'ಹಾಡಿದ್ದೇ ಹಾಡೋ ಕಿಸಬಾಯಿ ದಾಸಯ್ಯ' ಎಂಬಂತೆ, ಇಂದಿನ ಹೊಸತಲೆಮಾರಿನ ವಿಮರ್ಶಕರು ಕೂಡ ಕುವೆಂಪು ಅವರಲ್ಲಿ ಜಾನಪದ ಪ್ರಜ್ಞೆಯ ಗೈರುಹಾಜರಿಯನ್ನು ಪ್ರತಿಪಾದಿಸುತ್ತಿರುವುದೊಂದು ದುರಂತವಾಗಿದೆ :

''...'ಮಲೆಗಳಲ್ಲಿ ಮದುಮಗಳು' – ನಾಟಕದಲ್ಲಿ ಸೂತ್ರಧಾರರಾಗಿ ಅರ್ಜುನ ಜೋಗಿಗಳು, ಕಾಡಸಿದ್ಧರು, ಹಾಗೂ ಹೆಳವರು ನಿರೂಪಿಸುತ್ತಾರೆ... ಯಾವ ಕುವೆಂಪು ತಮ್ಮ ಜೀವಿತಾವಧಿಯಲ್ಲಿ ಜಾನಪದವನ್ನು ಮೌಢ್ಯ ಎಂದು ಆ ಕಡೆಗೆ ಹೆಚ್ಚು ಒಲವು ತೋರಲಿಲ್ಲವೋ, ಅದೇ ಜಾನಪದದ ಕಣ್ಣೋಟದಿಂದ 'ಮಲೆಗಳಲ್ಲಿ ಮದುಮಗಳು' ನಾಟಕವನ್ನು ನಿರೂಪಿಸಿದ್ದು ಹೆಚ್ಚು ಅರ್ಥಪೂರ್ಣ !''...

– ಡಾ|| ಅರುಣ್ ಜೋಳದ ಕೂಡ್ಲಿಗಿ : 'ಮಲೆಗಳಲ್ಲಿ ಮದುಮಗಳು - ಸಾಂಸ್ಕೃತಿಕ ಮುಖಾಮುಖಿ', ಸಂ|| ರಹಮತ್ ತರೀಕೆರೆ, ಕನ್ನಡ ವಿಶ್ವವಿದ್ಯಾಲಯ ಪ್ರಕಟಣೆ, ಹಂಪಿ.

'ಜಾನಪದ'ವನ್ನು ಕುರಿತು ಕನ್ನಡದಲ್ಲಿ ಬೇರೂರಿರುವ ಸೀಮಿತ ದೃಷ್ಟಿಯ ಫಲವಿದು. ಸೋಬಾನೆ ಪದ ಹಾಡುವವರು, ಫ್ಯಾನ್ಸಿ ಡ್ರೆಸ್ ಹಾಕುವವರು, ಮ್ಯೂಸಿಯಂ ಪ್ರದರ್ಶನಕಾರರು ಇವರನ್ನು ಮಾತ್ರ 'ಜಾನಪದ' ಎಂದು ತಿಳಿದರೆ ಹೇಗೆ? ಪಂಚತಾರಾ ಸಂಸ್ಕೃತಿಯಲ್ಲಿ ವಿಹರಿಸುತ್ತಿರುವ ಜಾನಪದ ಹಾಡುಗಾರರ, ವೇಷಗಾರರ, ವಸ್ತು ಪ್ರದರ್ಶನಕಾರರ ನಡೆ-ನುಡಿ, ರುಚಿ-ಅಭಿರುಚಿ, ಜೀವನ ಶೈಲಿಗಳೇನು, ಎಂಬ ಪ್ರಶ್ನೆಗೆ ಉತ್ತರವೆಲ್ಲಿದೆ? ಕುವೆಂಪು ಅವರ ಸಮಗ್ರ ಸಾಹಿತ್ಯ ಒಂದು ಮಹಾನ್ ಸಾಗರವಿದ್ದಂತೆ! ಸಾಗರವನ್ನು ಸಾಗರದಂತೆ ಗ್ರಹಿಸಬೇಕು. ಇದನ್ನು ಬಿಟ್ಟು ಸಾಗರದಲ್ಲಿ ಕೆರೆ ಇಲ್ಲ, ಕುಂಟೆ ಇಲ್ಲ ಅಂದರೆ ಹೇಗೆ? ಕುವೆಂಪು ಅವರಲ್ಲಿ ಜಾನಪದವನ್ನು ಕುರಿತ ವ್ಯಾಖ್ಯಾನವೇ ಬದಲಾಗುತ್ತದೆ. ಕುವೆಂಪು ಅವರ ಜಾನಪದ ಪ್ರಜ್ಞೆಯು ಬೃಹದಾರಣ್ಯಕ ಸ್ವರೂಪದ್ದು! ಮಾನವನಿರ್ಮಿತ ನೆಡುತೋಪುಗಳು, ಪಾರ್ಕುಗಳನ್ನು ಮಾತ್ರ 'ಜಾನಪದ'ವೆಂದು ತಿಳಿದವರು ಕುವೆಂಪು ಅವರ ನಿಸರ್ಗಸಹಜವಾದ ಪ್ರಾಕೃತಿಕ ರೂಕ್ಷತಾ ರಮಣೀಯತೆಯ ಜಾನಪದವನ್ನು ಗ್ರಹಿಸಲಾರರು! ಇಂಥ ಅನುಚಿತ ಟೀಕೆಗಳನ್ನು ಹೊಸ ತಲೆಮಾರಿನ ವಿದ್ಯಾರ್ಥಿಗಳು ಅರಿತು ಮುನ್ನಡೆಯಬೇಕೆಂಬ ಸದಾಶಯದಿಂದ ಮಾತನಾಡುತ್ತಿದ್ದೇನೆ.

ಕುವೆಂಪು ಅವರ ಸಮಗ್ರ ಸಾಹಿತ್ಯದ 'ಸಾರ್ವಭೌಮ ವಸ್ತು'ವಾದ ಹೀರೆಯ ಹೂವುಗಳು ಎಂದರೆ ಅನಾದರಕ್ಕೆ ತುತ್ತಾಗಿರುವ 'ಕೀಳು'ಗಳೆಂದೇ ಅರ್ಥ ! ಈ ತಿದ್ದಿದ ವಚನವನ್ನು ಗಮನಿಸಿ :

*ಕೀಳು ನಿಂಗ, ಕೀಳು ಸೋಮ, ಕೀಳು ಕರಿಸಿದ್ಧ - ಗಿಡ್ಡಿಯರು*

*ಕೀಳು ನಾಯಿಗುತ್ತಿ - ತಿಮ್ಮಿ, ಕೀಳು ಐತ- ಪೀಂಚಲು*

*ಕೀಳು ಜಲಗಾರ, ಕೀಳು ಶೂದ್ರತಪಸ್ವಿ*

*ಕೀಳು ಮಂಥರೆ, ಕೀಳು ಕಾಜಾಣಾ*



*ಕೀಳಿಂಗಲ್ಲದೆ ಹಯನು ಕರೆಯದು ಕಾಣಾ.*

ಕೀಳಿಂಗೆ ತುಡಿಯುವ ಮನಸ್ಸು 'ಜಾನಪದ ಪ್ರಜ್ಞೆ' ಅಲ್ಲ ಎಂದು ಹೇಳುವವರು, ಇದಕ್ಕೆ ಸೂಕ್ತ ಸಮಜಾಯಿಷಿಯನ್ನು ಕೊಡಲಿ.

**ಆತ್ಮಾಭಿವ್ಯಕ್ತಿ Vs ಆತ್ಮನಿಷೇಧ**

ವ್ಯಷ್ಟಿ ಪ್ರಜ್ಞೆಯ ಇತಿಹಾಸವೆನ್ನಬಹುದಾದ ಆತ್ಮಚರಿತ್ರೆ, ಜೀವನ ಚರಿತ್ರೆ, ದೇಶ ಚರಿತ್ರೆಗಳನ್ನು ಶರೀರದ ವಿಸ್ತರಣೆಗಳೆಂದು ಕರೆಯಬಹುದು. ಇದನ್ನೇ ಆತ್ಮಾಭಿವ್ಯಕ್ತಿಯೆಂದು ತಿಳಿದ ಪಾಶ್ಚಾತ್ಯರು ಭಾರತೀಯರಿಗೆ ಚಾರಿತ್ರಿಕ ಪ್ರಜ್ಞೆಯಿಲ್ಲವೆಂದು ಭಾವಿಸಿದ್ದರು. 'ನಾನು' ಮತ್ತು 'ನನ್ನದು' ಎಂಬ ಆತ್ಮಾಭಿವ್ಯಕ್ತಿಯನ್ನು ಒಪ್ಪದ ನಮ್ಮ ದೇಶದಲ್ಲಿ ವ್ಯಷ್ಟಿ ಪ್ರಜ್ಞೆಯ ದಾಖಲಾತಿಗಳು ಮುಖ್ಯವಾಗಿರಲಿಲ್ಲ. ಸಮಷ್ಟಿ ಪ್ರಜ್ಞೆಯ ಸಹಸ್ಪಂದನವನ್ನೇ ಮುಖ್ಯವೆಂದು ಭಾವಿಸಿದ್ದ ನಮ್ಮ ದೇಶದಲ್ಲಿ 'ನೀನೆಂಬ ನಾನು' (ಸೂಫಿ ಚಿಂತನೆ), ನಾನು ಹೋದರೆ ಹೋಗಬಹುದು (ಕನಕವಾಣಿ) – ಎಂಬ ಆತ್ಮನಿಷೇಧವನ್ನು ಎತ್ತಿಹಿಡಿಯಲಾಗಿದೆ. ನೆಲಮೂಲದ ಇಂಥ ಧಾತು ಮತ್ತು ಧೋರಣೆಗಳನ್ನು ಹೊಂದಿದ್ದ ಕುವೆಂಪು ಅವರು ಆತ್ಮನಿಷೇಧವನ್ನೇ ಪ್ರತಿಪಾದಿಸಿದ್ದಾರೆ: ''ತನ್ನ ತಾನ್ ಇಲ್ಲಗೈವುದೆ ಎಲ್ಲ ಸಾಧನೆಗೆ ಕೊನೆಯ ಗುರಿ'' – ಎಂಬ ನುಡಿಯ ತಿರುಳು ಆತ್ಮನಿಷೇಧವೇ ಆಗಿದೆ. 'ಬಾಫಾಲ್ಗುಣ ರವಿ ದರ್ಶನಕೆ' ಎಂಬ ಕವಿತೆಯಲ್ಲಿ ''ವ್ಯಕ್ತಿತೆ ಮೈಮರೆವುದು'' – ಎನ್ನುವ ಕುವೆಂಪು ಇತಿಹಾಸದ ದಾಖಲೆಯಾಗಿ ಉಳಿಯುವ ವ್ಯಕ್ತಿತೆಯನ್ನು ಅಥವಾ ಆತ್ಮಾಭಿವ್ಯಕ್ತಿಯನ್ನು ನಿರಾಕರಿಸಿದ್ದಾರೆ. ತನ್ಮೂಲಕ ಈ ನೆಲದ ಸಮಷ್ಟಿಪ್ರಜ್ಞೆಯ ಸಹಸ್ಪಂದನಕ್ಕೆ ಧ್ವನಿಯಾಗಿದ್ದಾರೆ.

'ಇತಿಹಾಸ'ದ ಪರಿಕಲ್ಪನೆಯಲ್ಲಿ ಪಾಶ್ಚಾತ್ಯರಿಗೂ ನಮಗೂ ಇದ್ದ ಈ ಮೂಲಭೂತ ವ್ಯತ್ಯಾಸವನ್ನು ಸ್ವಾಮಿ ವಿವೇಕಾನಂದರು ಎಳೆಎಳೆಯಾಗಿ ಬಿಡಿಸಿ ತೋರಿಸಿದ್ದಾರೆ :

...''ಯಾವ ಜನಾಂಗಕ್ಕೆ ಅದರದೇ ಆದ ಇತಿಹಾಸವಿಲ್ಲವೋ ಅದಕ್ಕೆ ಈ ಜಗತ್ತಿನಲ್ಲಿ ಯಾವ ಸ್ಥಾನವೂ ಇಲ್ಲ... ಆದ್ದರಿಂದ, ಒಂದು ರಾಷ್ಟ್ರದ ಇತಿಹಾಸ

ಆ ರಾಷ್ಟ್ರವನ್ನು ಸರಿಯಾಗಿ ನಿಗ್ರಹದಲ್ಲಿಟ್ಟು ಅದು ಹೀನಗತಿಗೆ ಬರದಂತೆ ತಡೆಯುವುದು... ಇತರ ದೇಶಗಳಿಗಿರುವಂತಹ ಇತಿಹಾಸ ನಮಗಿಲ್ಲವೆಂಬುದೇನೋ ನಿಜ. ನಾವು ಅಕ್ಕಿಯನ್ನು ತಿನ್ನುತ್ತೇವೆಂದುಕೊಳ್ಳೋಣ. ಆಂಗ್ಲೇಯರು ಅದನ್ನು ತಿನ್ನುವುದಿಲ್ಲ, ಈ ಕಾರಣದಿಂದ ಅವರೆಲ್ಲಾ ಉಪವಾಸದಿಂದ ಸಾಯುವರೆಂದೂ, ನಿರ್ನಾಮವಾಗುವರೆಂದೂ ಊಹಿಸುವೆಯೇನು? ತಮ್ಮ ದೇಶದಲ್ಲಿ ಏನು ಸಿಗುವುದೊ, ಯಾವುದನ್ನು ಸುಲಭವಾಗಿ ಉತ್ಪತ್ತಿ ಮಾಡಬಹುದೊ, ಯಾವುದು ಅವರ ದೇಹಸ್ಥಿತಿಗೆ ಅನುಗುಣವಾಗಿರುವುದೋ ಅದನ್ನು ತಿಂದು ಸುಖವಾಗಿ ಜೀವಿಸುವರು. ಅದರಂತೆಯೆ ನಾವೂ ಕೂಡ ನಮಗೆ ಯಾವ ಬಗೆಯ ಇತಿಹಾಸವಿರಬೇಕೊ ಅದೇ ಬಗೆಯ ಇತಿಹಾಸವನ್ನು ಹೊಂದಿದ್ದೇವೆ. ನಾವು ಕಣ್ಣುಮುಚ್ಚಿಕೊಂಡು, ''ಅಯ್ಯೋ! ಇತಿಹಾಸವೇ ಇಲ್ಲ'', ಎಂದು ಕೂಗಿದರೆ ಇತಿಹಾಸವು ನಿರ್ಮೂಲವಾಗುವುದೇನು? ಯಾರಿಗೆ ಕಣ್ಣುಗಳಿವೆಯೊ ಅವರು ಇಲ್ಲಿ ಉಜ್ವಲ ಇತಿಹಾಸವನ್ನು ನೋಡುವರು. ಈ ಶಕ್ತಿಯಿಂದಲೇ ರಾಷ್ಟ್ರವು ಇನ್ನೂ ಜೀವಂತವಾಗಿರುವುದೆಂದು ತಿಳಿದಿರುವರು. ಆದರೆ ಆ ಇತಿಹಾಸವನ್ನು ಪರಿಷ್ಕರಿಸಿ ಬರೆಯಬೇಕು. ಪಾಶ್ಚಾತ್ಯ ಶಿಕ್ಷಣದ ಮೂಲಕ ಆಧುನಿಕ ಯುಗದಲ್ಲಿ ನಮ್ಮವರು ಆರ್ಜಿಸಿರುವ ತಿಳಿವಳಿಕೆ ಮತ್ತು ಆಲೋಚನಾ ಮಾರ್ಗಕ್ಕೆ ತಕ್ಕಂತೆ ಅದನ್ನು ಹೊಸ ರೀತಿಯಲ್ಲಿ ಹೇಳಬೇಕು''...

– ಸ್ವಾಮಿ ವಿವೇಕಾನಂದರ ಸಂಭಾಷಣೆಗಳು, ಶ್ರೀರಾಮಕೃಷ್ಣ ಆಶ್ರಮ, ಮೈಸೂರು, ೯ನೇ ಮುದ್ರಣ, ೨೦೦೯.

– ಮೇಲಿನ ಸಂಭಾಷಣೆಯಲ್ಲಿ ಸ್ವಾಮಿ ವಿವೇಕಾನಂದರು 'ಇತಿಹಾಸ' ಕುರಿತು ಪಾಶ್ಚಾತ್ಯ ಮತ್ತು ಭಾರತೀಯ ದೃಷ್ಟಿಗಳ ವ್ಯತ್ಯಾಸವನ್ನು ನಿರೂಪಿಸಿದ್ದಾರೆ. ಹಿಸ್ಟರಿ ಆಫ್ ಮ್ಯಾಟರ್ ಅಥವಾ ಶರೀರದ ವಿಸ್ತರಣೆ ಎನ್ನಬಹುದಾದ ದಾಖಲೀಕರಣವು ಪಾಶ್ಚಾತ್ಯ ದೃಷ್ಟಿಯಾಗಿದೆ. ಆದರೆ, ಹಿಸ್ಟರಿ ಆಫ್ ಮೈಂಡ್ ಅಥವಾ ಸಮಷ್ಟಿ ಪ್ರಜ್ಞೆಯ ಮಾನಸೀಕರಣವು ಭಾರತೀಯ ದೃಷ್ಟಿಯಾಗಿದೆ. ಇದನ್ನೇ ಲೋಹಿಯಾ ಅವರು 'ಇಂಡಿಯಾದ ಜನಗಳ ಏಕತೆ' ಎಂದು ಕರೆದಿದ್ದಾರೆ.

ವ್ಯಷ್ಟಿ ಪ್ರಜ್ಞೆಯನ್ನು ಮೀರುತ್ತಾ ಸಮಷ್ಟಿ ಪ್ರಜ್ಞೆಯ ಸಹಸ್ಪಂದನವನ್ನು ಮೆರೆಯುವ ಕುವೆಂಪು ತಮ್ಮ ಕಾದಂಬರಿಗಳಲ್ಲಿ ಪ್ರವಾಹರೂಪಿಯಾದ ಚೈತನ್ಯ ಮತ್ತು ಸಮಷ್ಟಿ ಕಲ್ಯಾಣಕ್ಕೆ ಬದ್ಧವಾದ ಆತ್ಮನಿಷೇಧದ ಕಲ್ಪನೆಯನ್ನು ನಮ್ಮ ಮುಂದಿಟ್ಟಿದ್ದಾರೆ.

**ಕೊನೆ ತೆಗೆಯುವುದು**

**ಮಹಾಭಾರತದ ಸಂದೇಶವಿದು :** ಶ್ರೀಕೃಷ್ಣನ ಜೊತೆ ದೈಹಿಕವಾಗಿ ಹತ್ತಿರವಿಲ್ಲದಿದ್ದರೂ ಕೃಷ್ಣನ ಹೃದಯವನ್ನು ಬಲ್ಲ ಆತ್ಮನಿಷೇಧದ ಮಹಾನ್ ಚೇತನಗಳಾಗಿ ಕರ್ಣ, ಏಕಲವ್ಯ, ದುರ್ಯೋಧನ ಕಾಣಿಸಿಕೊಳ್ಳುತ್ತಾರೆ. ಆದರೆ, ಶ್ರೀಕೃಷ್ಣನ ಜೊತೆ ದೈಹಿಕವಾಗಿ ಹತ್ತಿರವಿದ್ದರೂ ಕೃಷ್ಣನ ಹೃದಯದಿಂದ ದೂರವಾಗಿದ್ದವರು ಪಾಂಡವರು... ಕೃಷ್ಣನ ಪರಿನಿರ್ವಾಣದ ನಂತರ ಪಾಂಡವರಿಗೆ ಒದಗುವ ದುರವಸ್ಥೆಗೆ ಕಾರಣ ಅವರಲ್ಲಿದ್ದ ಆತ್ಮಾಭಿವ್ಯಕ್ತಿಯ ಪ್ರಜ್ಞೆಯೇ ಆಗಿದೆ. ಈ ಸತ್ಯವನ್ನು ಅರ್ಥಮಾಡಿಕೊಂಡರೆ, ಮಲೆನಾಡು (= ಶ್ರೀಕೃಷ್ಣ) ಮತ್ತು ಕುವೆಂಪು (= ಕರ್ಣ, ಏಕಲವ್ಯ, ದುರ್ಯೋಧನ) ಸಂಬಂಧವನ್ನು ಸಮರ್ಪಕವಾಗಿ ಅರ್ಥಮಾಡಿಕೊಳ್ಳಬಹುದು. ನಮಸ್ಕಾರ!

*(ದೆಹಲಿಯ ಕರ್ನಾಟಕ ಸಂಘ ಏಪ್ರಿಲ್ ೨೦೧೧ರಲ್ಲಿ ನಡೆಸಿದ ಸಂಕಿರಣದಲ್ಲಿ ಮಾಡಿದ ಭಾಷಣ ಆಧರಿಸಿದ ಲೇಖನ)*

**ಎ. ಚಂದ್ರಶೇಖರ ನಂಗಲಿ**
ನಂ. ೧೬, 'ಶ್ರೀಗೌರಿ', ೪ನೇ ಕ್ರಾಸ್, ಕನಕನಗರ, ಹೊಸಕೋಟೆ
ಬೆಂಗಳೂರು ಗ್ರಾಮಾಂತರ - ೫೬೨ ೧೧೪

## ಲಜ್ಜೆಯೇ ಇಲ್ಲ...

ಅರಿವು ಅಂತಃಸಾಕ್ಷಿಗಿಲ್ಲ
ಈಗ ಜಾಗವಿಲ್ಲ
ಸ್ವಾರ್ಥ ಮನಸುಗಳಿಗೆ
ಲಜ್ಜೆಯೇ ಇಲ್ಲ

ಕುಲದ ನೆಲೆಯನೇನಾದರೂ ಬಲ್ಲಿರಾ?
ಎಂದವನ ಕುಲಮೂಲ ಕೆದಕಲು
ಅಳುಕೇ ಇಲ್ಲ

ದಯವು ಇರಬೇಕು
ಸಕಲ ಪ್ರಾಣಿಗಳೆಲ್ಲರಲಿ
ಎಂದವನ ಕೈಯಲ್ಲಿ 'ತ್ರಿಶೂಲ' ಕೊಡಲು
ಹಿಂಜರಿಕೆಯೇ ಇಲ್ಲ
ಸತ್ಯ, ಅಹಿಂಸೆ ಎಂದವನಿಗೆ
ಗುಂಡಿಟ್ಟವರನ್ನೂ ಈಗ
ಗುಣಗಾನ ಮಾಡಲು
ನಾವು ನಾಚುವುದೇ ಇಲ್ಲ

ಅಹಿಂಸೆಯನ್ನೇ ಅಣಕಿಸುವ
ಅಣುಪರೀಕ್ಷೆಗೆ,
ಬೋಧಿವೃಕ್ಷದ ಬೆಳಕಿನ ಹೆಸರು
ಆದರೂ ಎತ್ತುವುದೇ ಇಲ್ಲ ನಾವು ಉಸಿರು

ಕಲ್ಯಾಣಕ್ರಾಂತಿಯ ನೆಲದಲ್ಲಿಯೇ
ಈಗ ಕೇಸರಿಯ ಕೆಸರು
ವಿಭೂತಿ, ಲಿಂಗಗಳೆಲ್ಲ ಕೇವಲ ಧಾರಣ
ಪಾಲಿಸುತ್ತಲೇ ಇಲ್ಲ ನಾವು 'ಮೌನ'

ನಮಗೀಗ ಲಜ್ಜೆಯೇ ಇಲ್ಲ
ಅರಿವು ಅಂತಃಸಾಕ್ಷಿ ಎಲ್ಲ
ತಬ್ಬಲಿಯೆನಿಸಿವೆಯಲ್ಲ!




**ಮಂಜುನಾಥ ಡಿ. ಡೊಳ್ಳಿನ**
ಪ್ರಸಾರ ನಿರ್ವಾಹಕರು, ಆಕಾಶವಾಣಿ, ಭದ್ರಾವತಿ - ೫೭೭೩೦೨ ಶಿವಮೊಗ್ಗ ಜಿಲ್ಲೆ

ವಿಶ್ವವೀಕ್ಷಣೆ

# ಪ್ಯಾಲಸ್ತೈನ್ : ವಿಶ್ವಸಂಸ್ಥೆ ಸದಸ್ಯತ್ವಕ್ಕೆ ಹಕ್ಕು ಪ್ರತಿಪಾದನೆ

ಆರು ದಶಕಗಳಿಗೂ ಹೆಚ್ಚು ಕಾಲದಿಂದ ಸ್ವತಂತ್ರ ತಾಯ್ನಾಡಿನ ಸ್ಥಾಪನೆಗೆ ಹಂಬಲಿಸುತ್ತಿರುವ ಪ್ಯಾಲಸ್ತೈನ್ ಜನರ ಕನಸು ನನಸಾಗುವುದೇ ? ಈ ಪ್ರಶ್ನೆಗೆ ಉತ್ತರ ಸುಲಭ: ಖಂಡಿತ ಆಗುವುದು. ಆದರೆ ಯಾವಾಗ ಎನ್ನುವ ಪ್ರಶ್ನೆ ಮಾತ್ರ ಇನ್ನೂ ಕಾಡುತ್ತಿದೆ. ಹಲವು ಹೋರಾಟಗಳನ್ನು ನಡೆಸಿ, ನೆತ್ತರು ಕೋಡಿ ಹರಿಸಿ, ನಾನಾ ಬವಣೆಗಳನ್ನು ಅನುಭವಿಸಿರುವ ಪ್ಯಾಲಸ್ತೈನ್ ಜನರು ನಿರಾಶರಾಗದೆ ತಮ್ಮ ಹೋರಾಟ ಮುಂದುವರಿಸಿದ್ದಾರೆ. ಈಗ ಅವರು ತಮ್ಮ ಹೋರಾಟವನ್ನು ವಿಶ್ವಸಂಸ್ಥೆಯ ಅಖಾಡಾಗೆ ತಂದಿದ್ದಾರೆ. ಪ್ಯಾಲಸ್ತೈನ್ ಜನರ ಏಕಮಾತ್ರ ಸಂಸ್ಥೆ ಎಂದು ಪ್ಯಾಲಸ್ತೈನ್ ವಿಮೋಚನಾ ಸಂಸ್ಥೆಗೆ ವಿಶ್ವಸಂಸ್ಥೆ ಮಾನ್ಯತೆ ನೀಡಿ ಹಲವು ದಶಕಗಳೇ ಕಳೆದಿವೆ. ಇಸ್ರೇಲಿನ ಹಠಮಾರಿತನ, ಅಮೆರಿಕದ ಇಬ್ಬಗೆಯ ವಂಚನೆನೀತಿ ಪ್ಯಾಲಸ್ತೈನ್ ನಾಡಿನ ಸ್ಥಾಪನೆಗೆ ಇರುವ ಅಡ್ಡಿ. ಹಲವಾರು ಸಂಧಾನಗಳು, ಮಧ್ಯಸ್ತಿಕೆಗಳು ನಡೆದಿದ್ದರೂ ಇಸ್ರೇಲ್ ನಿರಂತರವಾಗಿ ಒಪ್ಪಂದಗಳನ್ನು ಮುರಿದುಹಾಕುತ್ತ ಬಂದಿದೆ. ವಿಶ್ವಸಂಸ್ಥೆ ನಿರ್ಣಯಗಳನ್ನು, ಆದೇಶಗಳನ್ನು ಉಲ್ಲಂಘಿಸುತ್ತ ಬಂದಿದೆ. ಅಮೆರಿಕದ ಪೂರ್ಣ ಬೆಂಬಲ ಪಡೆದುಕೊಂಡಿರುವ ಇಸ್ರೇಲ್‌ನ ಪುಂಡಾಟಿಕೆ, ಅತಿಕ್ರಮಣಗಳು ಮುಂದುವರಿಯುತ್ತಿವೆ. ಅಂತರರಾಷ್ಟ್ರೀಯ ಒತ್ತಡಕ್ಕೆ ಮಣಿದು ಪ್ಯಾಲಸ್ತೈನ್‌ನ ಸ್ವಯಮಾಡಳಿತೆಗೆ ಅವಕಾಶ ಮಾಡಿ ಕೊಟ್ಟಿದ್ದರೂ ಇಸ್ರೇಲ್ ಸತತವಾಗಿ ಪ್ಯಾಲಸ್ತೈನ್‌ಗೆ ಕಿರುಕುಳ ನೀಡುತ್ತಲೇ ಬಂದಿದೆ. ಪ್ಯಾಲಸ್ತೈನ್ ಸರಹದ್ದಿನ ಮೇಲೆ ಮನಸ್ಸಿಗೆ ಬಂದಂತೆ ದಾಳಿ ನಡೆಸುತ್ತ ಬಂದಿದೆ. ಇಡೀ ಮಧ್ಯಪ್ರಾಚ್ಯದಲ್ಲಿ, ಶಾಂತಿ ಕದಡುವುದಕ್ಕೆ ಇಸ್ರೇಲಿನ ಸ್ಥಾಪನೆ ಮೂಲ ಕಾರಣ. ಈ ಪರಿಸ್ಥಿತಿಯು ಅಂತ್ಯಗೊಳ್ಳಬೇಕಾದರೆ ಸ್ವತಂತ್ರ ಪ್ಯಾಲಸ್ತೈನ್ ರಾಜ್ಯದ ಸ್ಥಾಪನೆ ಅತ್ಯಗತ್ಯ.

ಮುಂಬರುವ ವಿಸ್ವಸಂಸ್ಥೆ ಮಹಾಸಭೆಯಲ್ಲಿ ಪ್ಯಾಲಸ್ತೈನಿನ ಆಡಳಿತೆಯ ಅಧ್ಯಕ್ಷ ಮೊಹಮ್ಮದ್ ಅಬ್ಬಾಸ್ ಪ್ಯಾಲಸ್ತೈನ್ ರಾಜ್ಯದ ಸದಸ್ಯತ್ವದ ಹಕ್ಕು ಪ್ರತಿಪಾದನೆ ಮಾಡಲಿದ್ದಾರೆ. ಇದೊಂದು ಮಹತ್ವಪೂರ್ಣವಾದ ಘಟನೆ. ಈಗಾಗಲೇ ಅವರು ಸದಸ್ಯತ್ವಕ್ಕಾಗಿ ವಿಶ್ವಸಂಸ್ಥೆಯ ಸೆಕ್ರೆಟಾರಿಯೆಟ್‌ಗೆ ಅರ್ಜಿ ಸಲ್ಲಿಸಿದ್ದಾರೆ. ಮಹಾಸಭೆಯಲ್ಲಿ ಅವರ ಪ್ರಸ್ತಾಪಕ್ಕೆ ಮೂರನೇ ಎರಡು ಭಾಗ ಸದಸ್ಯರ ಬೆಂಬಲ ಬೇಕು. ಇದಾದನಂತರ ಭದ್ರತಾ ಮಂಡಳಿಯಲ್ಲಿ ಅನುಮೋದನೆಯಾಗಬೇಕು. ಭದ್ರತಾ ಮಂಡಳಿಯಲ್ಲಿ ಅಮೆರಿಕ ವೀಟೋ ಚಲಾಯಿಸಿ ವಿರೋಧಿಸುವುದು ಈಗಾಗಲೆ ಖಚಿತವಾಗಿದೆ. ಈ ಕಗ್ಗಂಟು ಸಡಿಲವಾಗದೆ ಪ್ಯಾಲಸ್ತೈನ್ ಸಮಸ್ಯೆ ಬಗೆಹರಿಯುವಂತೆ ಇಲ್ಲ. ಕಳೆದ ಜೂನ್ ತಿಂಗಳಲ್ಲಿಯೇ ಅಮೆರಿಕದ ಸೆನೆಟ್ ಸಭೆ ಅಧ್ಯಕ್ಷ ಬರಾಕ್ ಒಬಾಮಾ ವೀಟೋ ಚಲಾಯಿಸಿ ಪ್ಯಾಲಸ್ತೈನ್ ಸದಸ್ಯತ್ವವನ್ನು ವಿರೋಧಿಸಬೇಕೆಂದು ಒತ್ತಾಯಪಡಿಸಿದೆ. ಸರ್ವಸದಸ್ಯರ ಸಭೆ ನಿರ್ಣಯ ಅನುಮೋದಿಸಿದರೆ ಅಮೆರಿಕ ವಿಶ್ವಸಂಸ್ಥೆಗೆ ತಾನು ನೀಡುತ್ತಿರುವ ವಂತಿಗೆ ೫೦೦ ಮಿಲಿಯ ಡಾಲರುಗಳನ್ನು ತಡೆಹಿಡಿಯುವ ಬೆದರಿಕೆ ಹಾಕಿದೆ. ಈ ಬಿಕ್ಕಟ್ಟನ್ನು ಬಗೆಹರಿಸಲು ಯೂರೋಪಿಯನ್ ಯೂನಿಯನ್‌ಗೆ ಸೇರಿರುವ ರಾಷ್ಟ್ರಗಳು ಪ್ರಯತ್ನಿಸುತ್ತಿವೆ. ಪ್ಯಾಲಸ್ತೈನ್ ಮತ್ತು ಇಸ್ರೇಲ್‌ಗಳ ನಡುವೆ ಕಳೆದ ಎರಡು ವರ್ಷಗಳಿಂದ ಸ್ಥಗಿತಗೊಂಡಿರುವ ಮಾತುಕತೆಗಳನ್ನು ಪುನರಾರಂಭಿಸುವಂತೆ ಮಾಡಲು ಪ್ರಯತ್ನಿಸುತ್ತಿವೆ. ಪ್ಯಾಲಸ್ತೈನ್ ರಾಜ್ಯಸ್ಥಾಪನೆಗೆ ದೃಢವಾದ ಬೆಂಬಲ ನೀಡುತ್ತ ಬಂದಿರುವ ಭಾರತ ಸರಕಾರ ವಿಶ್ವಸಂಸ್ಥೆಯಲ್ಲಿ ಪ್ಯಾಲಸ್ತೈನ್‌ನ ಸದಸ್ಯತ್ವಕ್ಕೆ ಬೆಂಬಲ ನೀಡಲು ಮುಂದಾಗುವುದು ಸ್ವಾಗತಾರ್ಹ.

ಇಸ್ರೇಲ್ ಯಾವತ್ತಿನಂತೆ ಪ್ಯಾಲಸ್ತೈನ್ ಸದಸ್ಯತ್ವವನ್ನು ವಿರೋಧಿಸುತ್ತಿದೆ. ಇದರಲ್ಲಿ ಅತಿಶಯವೇನೂ ಇಲ್ಲದಿದ್ದರೂ, ಇಸ್ರೇಲ್ ಪ್ಯಾಲಸ್ತೈನ್ ಆಡಳಿತೆಗೆ ನೀಡಬೇಕಾಗಿರುವ ಹಣಕಾಸಿನ ಪಾಲಿನ ಪಾವತಿಯನ್ನು ನಿಲ್ಲಿಸುವ ಬೆದರಿಕೆ ಹಾಕಿದೆ. ಪ್ಯಾಲಸ್ತೈನ್ ರಾಜ್ಯಕ್ಕೆ ಸದಸ್ಯತ್ವ ಅಂಗೀಕಾರವಾದರೆ ಸ್ವತಂತ್ರನಾಡಿನ ಸ್ಥಾಪನೆಗೆ ಅಧಿಕೃತ ಮಾನ್ಯತೆ ದೊರೆತಂತಾಗುತ್ತದೆ. ಜೊತೆಗೆ ೧೯೬೭ರಲ್ಲಿ ಇಸ್ರೇಲ್ ಆಕ್ರಮಿಸಿಕೊಂಡಿರುವ ಪ್ಯಾಲಸ್ತೈನ್ ಪ್ರದೇಶಗಳನ್ನು ತೆರವುಗೊಳಿಸಿ ಹಿಂದಿರುಗಿಸಬೇಕಾಗುತ್ತದೆ. ಇದು ಪೂರ್ವ ಜೆರೂಸಲೆಮ್‌ನ ಪ್ರದೇಶವನ್ನೂ ಒಳಗೊಂಡಿರುತ್ತದೆ. ಇಸ್ರೇಲ್ ಮತ್ತು ಪ್ಯಾಲಸ್ತೈನ್ ನಡುವೆ ಸಂಧಾನಗಳಲ್ಲಿ ಇದು ಪ್ರಮುಖ ವಿವಾದಿತ ಅಂಶವಾಗಿದೆ.

**ಬದಲಾವಣೆಯ ಹಾದಿಯಲ್ಲಿ ಟರ್ಕಿ**

ಯೂರೋಪು ಮತ್ತು ಪಶ್ಚಿಮ ಏಷ್ಯ ಖಂಡಗಳೆರಡರಲ್ಲೂ ಚಾಚಿಕೊಂಡಿರುವ ಟರ್ಕಿ ರಾಷ್ಟ್ರ ಎರಡೂ ಖಂಡಗಳ ನಡುವಿನ ಸೇತುಬಂಧ. ಪಶ್ಚಿಮ ರಾಷ್ಟ್ರಗಳು, ಮುಖ್ಯವಾಗಿ ಅಮೆರಿಕದ ಮಿತ್ರ ರಾಷ್ಟ್ರವಾಗಿರುವ ಈ ದೇಶ ಈಗ ಬದಲಾವಣೆ ಹಾದಿಯಲ್ಲಿದೆ. ಈ ಆಯಕಟ್ಟಿನ ಪ್ರದೇಶದಲ್ಲಿ ಅಮೆರಿಕ ತನ್ನ ಸೈನಿಕ ನೆಲೆಯನ್ನು ಸ್ಥಾಪಿಸಿಕೊಂಡಿದೆ. ಇರಾಕಿನ ಮೇಲೆ ಅಮೆರಿಕ ದಾಳಿ ನಡೆಸಿದಾಗ ಟರ್ಕಿ ಅಮೆರಿಕದ ಮಿಲಿಟರಿ ವಿಮಾನಗಳ ಅಗತ್ಯವಾದ ಸೌಲಭ್ಯವನ್ನು ತನ್ನ ನೆಲದಲ್ಲಿ ಒದಗಿಸಿದ್ದುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಇದಲ್ಲದೆ ಇಸ್ರೇಲಿನೊಂದಿಗೆ ಮೊದಲಿನಿಂದಲೂ ಸಂಬಂಧ ಸ್ಥಾಪಿಸಿಕೊಂಡು, ಅದನ್ನು ಬೆಂಬಲಿಸುತ್ತಿದ್ದ ಏಕೈಕ ಇಸ್ಲಾಮಿಕ್ ರಾಷ್ಟ್ರ ಎಂದರೆ ಟರ್ಕಿ. ಈಗ ಬದಲಾವಣೆಯ ಹಾದಿಯಲ್ಲಿರುವ ಈ ರಾಷ್ಟ್ರ ಈ ಪ್ರದೇಶದಲ್ಲಿ ಪ್ರಮುಖ ರಾಜಕೀಯ ಶಕ್ತಿಯಾಗಿ ಉದ್ಭವಿಸುತ್ತಿದೆ.

ಮೂರನೆಯ ಬಾರಿ ದೇಶದ ಮಹಾಚುನಾವಣೆಗಳಲ್ಲಿ ಜಯ ಗಳಿಸಿರುವ 'ನ್ಯಾಯ ಮತ್ತು ಅಭಿವೃದ್ಧಿ ಪಕ್ಷ'ದ (ಎಕೆಪಿ) ನಾಯಕ ಪ್ರಧಾನಿ ತಾಯಿಪ್ ಎರ್ಡೋಗಾನ್ ಬದಲಾವಣೆಯ ಹರಿಕಾರ. ಈಚೆಗೆ ನಡೆದ ಮಹಾಚುನಾವಣೆಗಳಲ್ಲಿ ಎಕೆಪಿಪಕ್ಷ ಪಾರ್ಲಿಯಮೆಂಟಿನ ೫೫೦ ಸ್ಥಾನಗಳಲ್ಲಿ ೩೨೬ ಸ್ಥಾನಗಳನ್ನು ಗಳಿಸಿದೆ. ಸಂವಿಧಾನದಲ್ಲಿ ತಿದ್ದುಪಡಿಗೆ ಮೂರನೇ ಎರಡರಷ್ಟು ಸದಸ್ಯರ ಬೆಂಬಲ ಬೇಕು. ಹಾಗಾಗಿ ಅದು ಪ್ರತಿ ಪಕ್ಷಗಳ ಬೆಂಬಲ ಗಳಿಸಬೇಕಾಗುತ್ತದೆ. ತನ್ನ ಅಧಿಕಾರಾವಧಿಯಲ್ಲಿ ದೇಶದ ಹದಗೆಟ್ಟಿದ್ದ ಆರ್ಥಿಕ ಪರಿಸ್ಥಿತಿಯನ್ನು ತಹಬಂದಿಗೆ ತಂದ ಪ್ರಧಾನಿ ಎರ್ಡೋಗಾನ್ ಈಗ ದೇಶದ ವಿದೇಶೀ ನೀತಿಯಲ್ಲಿ ಸುಧಾರಣೆಗಳನ್ನು ತರುತ್ತಿದ್ದಾರೆ. ಮುಖ್ಯವಾಗಿ ಅವರು ೧೯೮೨ರ ಸಂವಿಧಾನವನ್ನು ಪುನಾರಚಿಸುವ ಆಶ್ವಾಸನೆಯನ್ನು ಪೂರೈಸಬೇಕಾಗಿದೆ. ಅಲ್ಲದೆ ಬಹು ಕಾಲದಿಂದ ನೆನೆಗುದಿಗೆ ಬಿದ್ದಿರುವ ಕುರ್ದಿಷ್ ಜನಾಂಗದ ಸಮಸ್ಯೆಗೆ ಪರಿಹಾರವನ್ನು ಕಾಣಬೇಕಾಗಿದೆ. ಈಗ ಚಾಲ್ತಿಯಲ್ಲಿರುವ ಸಂವಿಧಾನ ೧೯೮೦ರಲ್ಲಿ ಮಿಲಿಟರಿ ಕ್ರಾಂತಿಯ ನಂತರ ಅಂಗೀಕಾರವಾದದ್ದು. ಅದರ ಪರಿಷ್ಕರಣೆ ಮುಂದುವರಿಯಲು ಅಗತ್ಯವಾಗಿದೆ.

ಪ್ರಧಾನಿ ಎರ್ಡೋಗಾನ್ ಟರ್ಕಿ ಮತ್ತು ಇಸ್ರೇಲಿ ಸಂಬಂಧಗಳಲ್ಲಿ ಸಾಕಷ್ಟು ಮಾರ್ಪಾಟುಗಳನ್ನು ತಂದಿದ್ದಾರೆ. ಈ ಹಿಂದೆ ಲೆಬನಾನ್ ಮೇಲೆ ಇಸ್ರೇಲ್ ದಾಳಿ ನಡೆಸಿದಾಗ, ಗಾಜಾ ಪಟ್ಟಿಯಲ್ಲಿ ಹಮಾಸ್‌ನ ಮೇಲೆ ಕ್ರೂರ ದಬ್ಬಾಳಿಕೆ ನಡೆಸಿದಾಗ ಟರ್ಕಿ ಇಸ್ರೇಲಿಗೆ ಒತ್ತಾಸೆ ನೀಡಿ ಇಸ್ಲಾಮಿಕ್ ರಾಷ್ಟ್ರಗಳ ತೀವ್ರ ಟೀಕೆಗೆ ಗುರಿಯಾಗಿತ್ತು. ಆದರೆ ಈಗ ಪರಿಸ್ಥಿತಿ ಭಿನ್ನವಾಗಿದೆ. ಇಸ್ರೇಲಿನ ದುಷ್ಕೃತ್ಯಗಳನ್ನು ಟರ್ಕಿ ಖಂಡಿಸಿದೆ. ಇಸ್ರೇಲಿನ ಜೊತೆ ನಡೆಸುತ್ತಿದ್ದ ಮಿಲಿಟರಿ ಕವಾಯಿತನ್ನು ಕಡಿಮೆ ಮಾಡಿದೆಯಲ್ಲದೆ ಟರ್ಕಿ ಇಸ್ರೇಲಿನಿಂದ ತನ್ನ ರಾಯಭಾರಿಯನ್ನು ಹಿಂದಕ್ಕೆ ಕರೆಸಿಕೊಂಡಿದೆ. ಎರಡೂ ದೇಶಗಳ ಸೇನೆಯ ನಡುವೆ ಇದ್ದ ಬಾಂಧವ್ಯ ಈಗ ಶಿಥಿಲಗೊಂಡಿದೆ. ಇದರಿಂದಾಗಿ ಅರಬ್ ಜಗತ್ತಿನಲ್ಲಿ ಟರ್ಕಿಯ ಜನಪ್ರಿಯತೆ ಹೆಚ್ಚತೊಡಗಿದೆ. ಟರ್ಕಿ ಈಚೆಗೆ ಲಿಬಿಯ, ಸಿರಿಯಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಬಂಡವಾಳ ಹೂಡಿದೆ. ಬದಲಾವಣೆಯ ಹಾದಿಯನ್ನು ತಳೆದಿರುವ ಟರ್ಕಿಯ ಮಾರ್ಗ ಸುಗಮವೇನಲ್ಲ. ಪಶ್ಚಿಮ ರಾಷ್ಟ್ರಗಳ ಒತ್ತಡವನ್ನು ಅದು ಎದುರಿಸಬೇಕಾಗಿದೆ. ಅಮೆರಿಕ, ಇಸ್ರೇಲ್‌ಗಳು ಟರ್ಕಿ ತರಬಯಸುತ್ತಿರುವ ಸುಧಾರಣೆಗಳನ್ನು ಅಡ್ಡಿಪಡಿಸುವ ಸಾಧ್ಯತೆಗಳು ಹೆಚ್ಚಾಗಿವೆ. ಇರುವ ಅಡ್ಡಿ ಆತಂಕಗಳನ್ನು ನಿವಾರಿಸಿಕೊಂಡು ಎಕೆಪಿ ಸರಕಾರ ಟರ್ಕಿಯನ್ನು ಪ್ರಗತಿಯ ಹಾದಿಯಲ್ಲಿ ನಡೆಸಿಕೊಂಡು ಹೋಗಬೇಕಿದೆ.

– ಸೀಯಾರ್ಕೆ

ಇನ್ನೊಂದು ಸಾಮಾನ್ಯ ಸಮಸ್ಯೆ ಎಂದರೆ ರೋಟೇಟರ್ ಕಫ್‌ನ ಏರುಪೇರು. ಈ ಸಮಸ್ಯೆ ಭುಜದ ಕೀಲಿಗೆ ಹೊಂದಿಕೊಂಡಿರುವ ಮಾಂಸಖಂಡ ಮತ್ತು ಸ್ನಾಯು ರಜ್ಜುವಿನ ಜೊತೆ ತಳಕು ಹಾಕಿಕೊಂಡಿದೆ. ಈ ಮಾಂಸಖಂಡಗಳು ಮತ್ತು ಸ್ನಾಯುರಜ್ಜು ಕೈಗಳ ಅನೇಕ ಚಲನೆಯ ರೂವಾರಿಗಳು. ಕೈಗಳನ್ನು ಪದೇಪದೇ ಭುಜಕ್ಕಿಂತಲೂ ಮೇಲೆ ಎತ್ತುವವರಲ್ಲಿ ಇಂಪಿಂಗ್‌ಮೆಂಟ್ ಸಿಂಡ್ರೋಮ್ ಎಂಬ ಸಮಸ್ಯೆ ಕಾಣಿಸಿಕೊಳ್ಳುತ್ತದೆ. ಇಲ್ಲಿ ವ್ಯಕ್ತಿ ವಿಶ್ರಾಂತ ಸ್ಥಿತಿಯಲ್ಲಿರುವಾಗ ಯಾವುದೇ ತೊಂದರೆ ಕಾಣಿಸಲ್ಲ, ಬದಲಾಗಿ ತಲೆಮಟ್ಟಕ್ಕಿಂತ ಮೇಲಿನ ಕೆಲಸಗಳನ್ನು ನಿರ್ವಹಿಸುವಾಗ ತೊಂದರೆ ಕಾಣಿಸುವುದು ಸಹಜ. ಭುಜ ಮತ್ತು ಭುಜದ ಕೀಲಿನ ಚಲನೆ ವೇಳೆ ಹೆಚ್ಚುತ್ತಿರುವ ನೋವು ಗಮನಕ್ಕೆ ಬರುತ್ತದೆ. ಈ ರೀತಿಯ ತೊಂದರೆ ಕೆಲವು ವ್ಯಕ್ತಿಗಳಲ್ಲಿ ಅದರಲ್ಲೂ ಭುಜದ ಎಲುಬು ತುಂಬಾ ಬಾಗಿದ್ದವರಲ್ಲಿ ಕಾಣಬಹುದು. ಇದನ್ನು ಅಕ್ರೋಮಿಯನ್ ಎಂದು ಕರೆಯುತ್ತಾರೆ. ಇದರಿಂದ ಸ್ನಾಯು ರಜ್ಜು ಮತ್ತು ಬರ್ಸಾ (ಸಬ್‌ಅಕ್ರೋಮಿಯಲ್ ಬರ್ಸಾ) ಹರಿದು ಹೋಗುವಂತಹ ತೊಂದರೆಗೆ ಒಳಗಾಗುತ್ತದೆ. ಇದಕ್ಕೂ ಮೊದಲೇ ಈ ಸಮಸ್ಯೆಯನ್ನು ಗುರುತಿಸಿದರೆ, ದಿನಚರಿಯಲ್ಲಿ ಕೆಲವೊಂದು ಬದಲಾವಣೆಗಳನ್ನು ಮಾಡುವ ಮೂಲಕ, ಅಂದರೆ ಕೆಲವೊಂದು ವ್ಯಾಯಾಮಗಳನ್ನು ಮಾಡುವ ಮೂಲಕ ಕಳೆಗುಂದಿದ ಸ್ನಾಯುರಜ್ಜುವಿಗೆ ಬಲಬರುವಂತೆ ಮಾಡಬಹುದು.

ಅಕ್ರೋಮಿಯನ್ ಸಮಸ್ಯೆಗೆ ಮೂಲ ಕಾರಣ ಏನು ಮತ್ತು ಕೇಡು ಉಂಟುಮಾಡುವ ಅಂಶವನ್ನು ತೆಗೆದುಹಾಕಬೇಕು ಎಂಬುದು ಆದ್ಯತೆಯ ವಿಚಾರ. ಕೆಲವೊಂದು ಸಲ ಕೆಡುಕು ಉಂಟುಮಾಡುವ ಅಂಶ ಎಲುಬಿನ ಮೇಲೆ ಸಣ್ಣಪ್ರಮಾಣದ ಪರಿಣಾಮ ಬೀರಿದರೂ ಎಲುಬು ಬಾಗುವ ಪ್ರಮಾಣ ಕೂಡಾ ಹೆಚ್ಚಾಗುತ್ತದೆ. ಮೂಳೆಯ ಸರಿಯಾದ ಬೆಳವಣಿಗೆಗೆ ಇಂತಹ ಕೆಡುಕು ಬೀರುವ ಅಂಶಗಳನ್ನು ತೆಗೆದುಹಾಕಲೇಬೇಕು. ಇದನ್ನು ಭುಜದ ಸುತ್ತ ಕೆಲವೊಂದು ಸಣ್ಣ ರಂಧ್ರಗಳನ್ನು ಕೊರೆದು ಚಿಕಿತ್ಸೆ ನೀಡಬಹುದು. ಇದರಿಂದ ವ್ಯಕ್ತಿ ಒಂದೇ ದಿನದಲ್ಲಿ ಚಿಕಿತ್ಸೆ ಪಡೆದು ಮನೆಗೆ ಮರಳಿ ವಾರದೊಳಗೆ ಹಿಂದಿನಂತೆ ಸಾಮಾನ್ಯ ಕೆಲಸಗಳನ್ನು ಯಾವುದೇ ಅಡ್ಡಿ ಆತಂಕಗಳಿಲ್ಲದೇ ನಿರ್ವಹಿಸಬಹುದು.

ಇನ್ನು ಕೆಲವು ಪ್ರಕರಣಗಳಲ್ಲಿ ಇಂಪಿಂಗ್‌ಮೆಂಟ್ ಪ್ರಗತಿಯಲ್ಲಿದ್ದು ಹರಿಯುವ ಹಂತದಲ್ಲಿದ್ದಾಗ ಮತ್ತು ಸ್ನಾಯುರಜ್ಜುಗಳು ಗಾಯದಿಂದ ಹರಿದು ಹೋದಾಗ ಮತ್ತು ಇತರೆ ಕಾರಣಗಳಾದ ವಯೋಸಹಜ ಕ್ಷೀಣಿಸುವಿಕೆ, ನಿರ್ವಹಣಾ ತೊಂದರೆ, ಉದ್ಯೋಗ, ಕೆಲಸದ ಆಧಾರದ ಮೇಲೆ ಹೇಳುವುದಾದರೆ ವ್ಯಕ್ತಿಯಿಂದ ವ್ಯಕ್ತಿಗೆ ಇದು ವಿಭಿನ್ನವಾಗಿರುತ್ತದೆ. ವಿವಿಧ ಮಾನದಂಡಗಳಿಗೆ ಅನುಗುಣವಾಗಿ, ಈ ರೀತಿಯ ಸರ್ಜಿಕಲ್ ಚಿಕಿತ್ಸೆ, ನೋವು ನಿರ್ವಹಣೆ, ಜೀವನಮಟ್ಟ ಸುಧಾರಣೆ ಮತ್ತು ಶಾರೀರಿಕ ಬಲ ಹೆಚ್ಚಿಸುವ ಪಲ್ಲಿಯೇಟಿವ್ ನಿರ್ವಹಣೆಗಿಂತ ಭಿನ್ನವಾಗಿದೆ. ಭುಜದ ಗಾಯಗಳು ಕ್ರೀಡಾ ಗಾಯಗಳಂತೆ ಮತ್ತು ಸಣ್ಣಪುಟ್ಟ ಗಾಯಗಳಂತೆ ಸಾಮಾನ್ಯ ಅಥವಾ ರಸ್ತೆ ಅಪಘಾತಗಳಿಂದ ಉಂಟಾಗುವ ಗಂಭೀರ ಗಾಯ, ಕೈ ಹೊರಕ್ಕೆ ಎತ್ತಿದಂತೆ ಬಿದ್ದಾಗ ಉಂಟಾಗುವ ಗಾಯ, ಭುಜದ ಭಾಗ ನೆಲಕ್ಕೆ ಒರಗುವಂತೆ ಇದ್ದಾಗ ಆಗುವ ಗಾಯಗಳಷ್ಟೇ ನೋವುಂಟುಮಾಡುವಂಥಾದ್ದು. ಯುವಕರಲ್ಲಿ ಅದರಲ್ಲೂ ೪೦ ವರ್ಷ ದಾಟಿದವರಲ್ಲಿ, ಗಂಭೀರ ಗಾಯಗೊಂಡ ಭುಜದ ಕೀಲು ತಪ್ಪಿದರೆ, ಉಂಟಾಗುವ ಅಪಾಯ ಹೆಚ್ಚಿನದ್ದು ಕೈಯ ಕೆಲವೊಂದು ಭಾಗಗಳಲ್ಲಿ ಕೀಲು ತಪ್ಪುವಂತಹ ಅಪಾಯ ಹೆಚ್ಚಿದೆ. ಕೀಲು ತಪ್ಪಿದಾಗ ಅಂತಹ ವ್ಯಕ್ತಿಗಳಿಗೆ ತಮ್ಮ ದೈನಂದಿನ ಕೆಲಸಕಾರ್ಯಗಳನ್ನು ಸುಗಮವಾಗಿ ನೆರವೇರಿಸಲು ಆಗುವುದಿಲ್ಲ. ಇಂತಹ ಸಂದರ್ಭದಲ್ಲಿ ನೋವು ಹೆಚ್ಚಾಗಿದ್ದು ಆಂತರಿಕವಾಗಿ ಕೀಲುಗಳಿಗೆ ಹೆಚ್ಚಿನ ಅಪಾಯ ತೊಂದೊಡ್ಡುತ್ತವೆ. ಭುಜದ ಕೀಲಿನ ಆರ್ಥೈಟಿಸ್‌ನಂತಹ ಸಮಸ್ಯೆ ಜೀವನದ ಆರಂಭಿಕ ಘಟ್ಟದಲ್ಲಿ ಕಂಡುಬಂದರೆ, ಆರ್ಥೋಪೆಡಿಕ್ ಸರ್ಜನ್ ಸಹಕಾರದೊಂದಿಗೆ ನಿಯಮಿತ ಚಿಕಿತ್ಸೆ ಮೂಲಕ ಅಥವಾ ಸರ್ಜಿಕಲ್ ಪ್ರಕ್ರಿಯೆ ಮೂಲಕ ಗುಣಮುಖರಾಗಬಹುದು. ಈ ಸಮಸ್ಯೆಗೆ ಮುಕ್ತ ಚಿಕಿತ್ಸೆ ದೀರ್ಘ ಸಮಯ ತೆಗೆದುಕೊಳ್ಳುವುದಾಗಿದ್ದು ಸಮಸ್ಯೆಯಿಂದ ಬಳಲುತ್ತಿರುವ ವ್ಯಕ್ತಿಗೂ ನೋವು ಉಂಟುಮಾಡುವಂಥಾದ್ದಾಗಿದೆ.

ಈಗ ರೋಗಿಗಳ ಇಚ್ಛೆಗೆ ತಕ್ಕಂತೆ, ಕೀ ಹೋಲ್ ಸರ್ಜರಿ ಬಂದಿದ್ದು, ನೋವು ರಹಿತವಾಗಿ, ಕಡಿಮೆ ಅವಧಿಯಲ್ಲಿ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದು ಗುಣಮುಖರಾಗಿ ಹೊರಹೋಗಬಹುದು. ಹೊರಗೆ ಹೋದ ಬಳಿಕ ಮತ್ತೆ ಆರ್ಥೈಟಿಸ್ ಕಾಡಬಹುದು ಎಂಬ ಭೀತಿ ಇಲ್ಲದೇ ಆತ್ಮವಿಶ್ವಾಸದಿಂದ ಎಂದಿನಂತೆ ಬದುಕು ಸಾಗಿಸಬಹುದು. ಇದೇ ರೀತಿ ಭುಜಕ್ಕೆ ಸಂಬಂಧಿಸಿದಂತೆ ಹಲವು ಸಮಸ್ಯೆಗಳು ಶರೀರದ ಇತರೆ ಅಂಗಾಂಗಗಳ ಕಾರಣದಿಂದ ಕಾಡಬಹುದು. ಈ ರೀತಿಯ ಸಮಸ್ಯೆಗಳಿಂದ ನಮ್ಮನ್ನು ನಾವು ಕಾಪಾಡಿಕೊಳ್ಳಬೇಕು ಎಂದರೆ, ಇಂತಹ ಸಮಸ್ಯೆಗಳಿಗೆ ಸಂಬಂಧಿಸಿದ ಗುಣಲಕ್ಷಣಗಳು ಕಂಡುಬಂದಾಗ ಆರಂಭಿಕ ಹಂತದಲ್ಲೇ ತಡೆಯುವಂತಹ ಕೆಲಸ ಮಾಡಬೇಕು.

ಉತ್ತಮ ಪೋಷಕಾಂಶಯುಕ್ತ ಆಹಾರ ಸೇವಿಸುತ್ತಾ, ಆರೋಗ್ಯಕರ ಜೀವನ ಪದ್ಧತಿಯನ್ನು ಅಳವಡಿಸಿಕೊಂಡಲ್ಲಿ ಮೂಳೆ ಸದೃಢವಾಗಿರುವುದಲ್ಲದೇ, ಮಾಂಸ ಖಂಡಗಳು ಮತ್ತು ಸ್ನಾಯುರಜ್ಜು ಕೂಡಾ ಬಲಶಾಲಿಯಾಗಿರುತ್ತವೆ. ಪ್ರತಿನಿತ್ಯ ವ್ಯಾಯಾಮ ಮಾಡುವುದರಿಂದ ಭುಜ ಮತ್ತು ಕೈಗಳ ಮಾಂಸಖಂಡಗಳು ಲಿಗಮೆಂಟ್ ಮತ್ತು ಸ್ನಾಯುರಜ್ಜುಗಳನ್ನು ಸುಸ್ಥಿತಿಯಲ್ಲಿ ಇರಿಸುತ್ತವೆ. ಹೀಗಿದ್ದಾಗ, ಯಾವನೇ ಕ್ರೀಡಾಪಟುವಿನಂತೆ ನಾವು ಕೂಡಾ ಭುಜದ ಮತ್ತು ಕೈಗಳ ಅತಿರೇಕದ ಬಳಕೆಗೂ ಹೆದರಬೇಕಿಲ್ಲ. ಆದರೆ ಬಳಕೆಯ ತಂತ್ರಗಳು ಮತ್ತು ಚಲನೆಯ ಅಂಶಗಳನ್ನು ಗಮನದಲ್ಲಿ ಇರಿಸಿಕೊಳ್ಳಬೇಕು. ಇವೆಲ್ಲವೂ, ಭುಜದ ಕೀಲಿನ ಉತ್ತಮ ಆರೋಗ್ಯಕ್ಕೆ ಸಹಕಾರಿ ಮಾತ್ರವಲ್ಲದೇ, ಜೀವನದಲ್ಲಿ ಎಂದಿಗೂ ಭುಜದ ಸಮಸ್ಯೆ ಎದುರಾಗುವುದಿಲ್ಲ.



**ಡಾ॥ ಚೇತನ್ ನಾಗರಾಜ್,**
MS Orth, DNB Orth, MNAMS
Consultant Orthopaedic Surgeon,
Fellowship in Knee,
Shoulder & Elbow Surgery,
Australia, New Zealand, Japan
**ವಿಕ್ರಂ ಆಸ್ಪತ್ರೆ, ಮಿಲ್ಲರ್ಸ್ ರಸ್ತೆ, ಬೆಂಗಳೂರು**

## ಹೊಸ ಓದು



### ಮಾಯಾಲೋಕದ ಒಳಗುಟ್ಟುಗಳು

(ಲೇಖನಗಳ ಸಂಕಲನ)

*ಶ್ರೀನಿವಾಸ ಜೋಕಟ್ಟೆ*

**ಪುಟ : ೨೪೬ + iv**

**ಬೆಲೆ : ರೂ. ೧೩೦**

**ಶ್ರೀನಿವಾಸ ಪುಸ್ತಕ ಪ್ರಕಾಶನ** ನಂ. ೧೬೪/ಎ, ಮೊದಲನೇ ಮಹಡಿ, ಎಮ್.ಆರ್.ಎನ್. ಬಿಲ್ಡಿಂಗ್, ಕನಕಪುರ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು - ೪

*ನಾಡಿನ ಸರಿಸುಮಾರು ಎಲ್ಲ ಕನ್ನಡ ಪತ್ರಿಕೆಗಳಲ್ಲಿ ಲೇಖನಗಳಾಗಿ ಪ್ರಕಟಗೊಂಡು ಇದೀಗ ಒಂದೆಡೆ ಸಂಕಲನಗೊಂಡಿರುವ ಪುಸ್ತಕ. ಶೀರ್ಷಿಕೆಯೇ ಸೂಚಿಸುವಂತೆ ಹೆಚ್ಚಿನ ಬರಹಗಳು ಮಾಯಾನಗರಿ ಮುಂಬಯಿಯನ್ನೇ ಕೇಂದ್ರವನ್ನಾಗಿಸಿವೆ. ಅಲ್ಲಿನ ವಿವಿಧ ನಿಗೂಢ-ವಿಸ್ಮಯಗಳನ್ನು ಹೊರಗೆಳೆದು ನಿಜರೂಪವನ್ನು ಬಯಲುಮಾಡಿವೆ. ನಿಮಗಿಲ್ಲಿ ಮೈನವಿರೇಳಿಸುವ, ನಂಬಲಸಾಧ್ಯವಾದರೂ ನಂಬಲೇಬೇಕಾದಂಥ ಅಚ್ಚರಿಗಳು ಕಾದಿವೆ. ಮುಂಬಯಿಯ ಅಧೋಲೋಕದ ಅವಿರತ ಚಟುವಟಿಕೆಗಳಿಂದಾಗಿ, ಹಾದಿತಪ್ಪಿಸುವ ಸುದ್ದಿಗಳಿಂದಾಗಿ ಇಡೀ ಸಮಾಜವೇ ತಲೆಕೆಳಗಾಗಿ ನಿಂತಂತಾಗಿದೆ. ಯಾವುದೂ ಅಸಂಭವ ಎನ್ನುವಂತಿಲ್ಲ. ನಡೆವ ಸಂಗತಿಗಳೇ ಬೇರೆ - ಅನಾವರಣಗೊಳ್ಳುವುದೇ ಬೇರೆ ಎಂಬಂತೆ ದುಶ್ಮನ್‌ಗಳು ಸತ್ಯವನ್ನೆಲ್ಲಾ ಸಮಾಧಿ ಮಾಡಿರುತ್ತಾರೆ. ಢಂ ಎನ್ನಿಸುವ ಅಸಲಿ-ನಕಲಿ ಎನ್‌ಕೌಂಟರ್ ಸ್ಪೆಷಲಿಸ್ಟ್ + ಪೊಲೀಸರ ಹಾದಿ ತಪ್ಪಿಸುವ ಕುಖ್ಯಾತ ಡಾನ್ + ಎಲ್ಲೆಂದರಲ್ಲಿ ಆವಿರ್ಭವಿಸುವ ನಕ್ಸಲ್‌ಗಳು + ನಗೆಯ ಆಭರಣ ತೊಟ್ಟ ರಾಜಕಾರಣಿಗಳು – ಇವರೆಲ್ಲಾ ಯಾರೊಳಗೆ ಯಾರೆಂದು ಪತ್ತೆ ಹಚ್ಚಲಿಚ್ಚಿಸದ ಸರಕಾರಗಳು... ಅಬ್ಬಬ್ಬಾ ನಾವಿಂದು ಎಂಥ ಪ್ರಪಂಚದಲ್ಲಿ ಬಾಳುತ್ತಿದ್ದೇವೆ? ನಮ್ಮಿಂದ ಇಂಥ ವ್ಯವಸ್ಥೆಯಲ್ಲದೆ ಉತ್ತಮವಾದ ಇನ್ನೊಂದನ್ನು ಕಟ್ಟಿಕೊಳ್ಳಲಾರದೆ ಹೋದೆವಲ್ಲಾ ಎಂಬ ವ್ಯಥೆ ಮನದಾಳದಲ್ಲಿ ಮೂಡಿಸುವಂತಹ ಲೇಖನಗಳು. ಈ ಲೋಕದೊಳಗೊಂದು ಆ ಲೋಕ; ಬನ್ನಿ ಓದಿ ತಿಳಿದುಕೊಳ್ಳೋಣ. ಸಾಧ್ಯವಾದರೆ ಬದಲಿಸೋಣ!*

### ಊಳಿಗಮಾನ್ಯ ವ್ಯವಸ್ಥೆಗೆ ಸಿಡಿದ ಮಾಯಂದಾಲ್

*ರವಿ ರಾ. ಅಂಚನ್*

**ಪುಟ : ೭೨** **ಬೆಲೆ : ರೂ. ೬೦**

**ಸಿರಿವರ ಪ್ರಕಾಶನ,** ನಂ. ಎಮ್. ೩೭/ಬಿ, ೮ನೇ ಅಡ್ಡರಸ್ತೆ ಲಕ್ಷ್ಮೀನಾರಾಯಣಪುರ, ಬೆಂಗಳೂರು - ೫೬೦ ೦೨೧

*ದೈವ-ಭೂತಾರಾಧನೆಯೆಂಬುದು ಮುಗ್ಧ ಶ್ರಮಿಕ ಜನರನ್ನು ಬೆದರಿಸಲು ಹುಟ್ಟುಹಾಕಿದ ಒಂದು ಭಯೋತ್ಪಾದನೆಯ ತಂತ್ರವಿರಬಹುದೆ? ಪಾಳೆಯಗಾರಿ ವ್ಯವಸ್ಥೆಯ ಹುನ್ನಾರವೆ? ಈ ಕಥೆಯು ತುಳುವರ ಧೈರ್ಯ ಸಾಹಸಗಳನ್ನು ಹೇಳುತ್ತಲೇ ಇಂಥ ಪ್ರಶ್ನೆಯನ್ನು ಓದುಗನಲ್ಲಿ ಮೂಡಿಸುತ್ತದೆ. ಏಕೆಂದರೆ ತಮಗೆ ಬೇಕಾದ್ದು ಸಿಗದಿದ್ದರೆ ಇಂದಿಗೂ ದೇವರು - ಭೂತ - ಭಕ್ತಿ – ಮುಂತಾದ ಬೆದರಿಕೆಯ ತಂತ್ರಗಳನ್ನನುಸರಿಸುತ್ತಾರೆ. ತುಳುವರಲ್ಲಿದ್ದ ಮಾತೃಪ್ರಧಾನ ಸಂಸ್ಕೃತಿಯನ್ನುಳಿಸಲು ಊಳಿಗಮಾನ್ಯ – ಪಾಳೆಯಗಾರಿ ಪದ್ಧತಿಗಳ ವಿರುದ್ಧ ಸಿಡಿದೆದ್ದ ಮಾಯಂದಾಲ್ ಎಂಬ ಹೆಣ್ಣುಮಗಳೊಬ್ಬಳ ಕಥೆಯಿದು. ಹೆಣ್ಣನ್ನು ಕೀಳಾಗಿ ಕಾಣುವ ಪರಂಪರೆ ಮತ್ತು ಯಾಜಮಾನ್ಯ ಸಂಸ್ಕೃತಿ ಕಾಲೂರಲು ಪ್ರಾರಂಭವಾಗಿ ಶ್ರಮಿಕರು ಅದರಡಿ ನಲುಗಿಹೋದ ಕಾಲದ ಚರಿತ್ರೆ ಇದು. ಒಂದು ವ್ಯವಸ್ಥೆಗೆ ಬದಲಾಗಿ ಇನ್ನೊಂದು ವ್ಯವಸ್ಥೆ ರೂಪುಗೊಳ್ಳತೊಡಗಿದಾಗ ದುಷ್ಟಶಕ್ತಿ ಮತ್ತು ಶಿಷ್ಟಶಕ್ತಿಗಳಿಗೆ ಸಂಘರ್ಷ ಅನಿವಾರ್ಯವಾಗಿ ಗೆಲುವಿನ ರೂವಾರಿಗೆ ವೀರ-ಶೂರರ ಸ್ಥಾನ-ಮಾನ ದೊರೆಯುತ್ತದೆ. ಅವರ ಬಗ್ಗೆ ಕಥನ ಕವನಗಳು – ಪಾಡ್ದನಗಳು ಹೇರಳವಾಗಿ ಸೃಷ್ಟಿಯಾಗುತ್ತವೆ. ಜನರ ಮನದಲ್ಲಿ ಉಳಿದು ನಿಂದು ಆರಾಧಿಸಲ್ಪಡುತ್ತಾರೆ. ಅವರ ಆತ್ಮ-ಚೇತನಗಳು ಇನ್ನೂ ಇವೆಯೆಂದೂ ಅವರ ಸತ್ಯದ ದಾರಿಗಳಲ್ಲಿ ತಾವೂ ನಡೆಯುತ್ತೇವೆಂದೂ ತುಳುನಾಡ ಜನ ಇಂದಿಗೂ ನಂಬಿದ್ದಾರೆ. ಅವರು ನಂಬಿದ ಸತ್ಯದ ಕಥೆಯಾಗಿ ಈ ಪುಟ್ಟ ಪುಸ್ತಕ ರೂಪುಗೊಂಡಿದೆ.*



### ನವಿಲು ಗರಿ (ಪ್ರಬಂಧಗಳು)

*ಸಂಪಾದನೆ : ಡಾ॥ ಸಬಿಹಾ ಭೂಮಿಗೌಡ*

**ಪುಟ : ೯೬** **ಬೆಲೆ : ರೂ. ೫೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹೋಸ್ಟೆಲ್, ಗದಗ - ೫೮೨ ೧೦೧

*ಪ್ರೌಢ ವಿದ್ಯಾರ್ಥಿಗಳಿಂದ ತರಗತಿಗಳಲ್ಲಿ ಹೇಳಿ ಬರೆಸಿದ ಪ್ರಬಂಧಗಳಿವು. ಉಪಾಧ್ಯಾಯರಿಂದ ಅಂಕಗಳನ್ನು ಹಾಕಿಸಿಕೊಂಡು ಅಲ್ಲೇ ಕಡತಗಳಲ್ಲಿ ಕಳೆದುಹೋಗಬಹುದಾಗಿದ್ದ ಇವನ್ನು ಪ್ರೀತಿಯಿಂದ ಅಚ್ಚುಕಟ್ಟಾಗಿ ಸಂಪಾದಿಸಿ ಅಚ್ಚುಮಾಡಿಸಿ ಪುಸ್ತಕ ರೂಪ ನೀಡಿದ ಡಾ॥ ಸಬಿಹಾ ಭೂಮಿಗೌಡ ಅಭಿನಂದನಾರ್ಹರು. ಇವರ ವಿದ್ಯಾರ್ಥಿಪ್ರೇಮ ಇನ್ನಿತರ ಗುರುವೃಂದಕ್ಕೂ ಅನುಕರಣೀಯ. ಇಲ್ಲಿನ ಪ್ರಬಂಧಗಳಿಗೆ ವಸ್ತುಗಳು ಹಲವಾರು. ಪ್ರತಿಯೊಬ್ಬರೂ ತಮ್ಮ ಆಯ್ಕೆಯ ಆಸಕ್ತಿಯ ವಿಷಯವನ್ನು ತಮ್ಮ ಅನುಭವದ ಪರಿಧಿಯಲ್ಲೇ ಸಾಧ್ಯವಾದಷ್ಟೂ ವಿಸ್ತರಿಸಿ ಬರೆದಿದ್ದಾರೆ. ಒಂದೇ ವಿಷಯವನ್ನು ಇಬ್ಬರು ಆಯ್ಕೆ ಮಾಡಿಕೊಂಡು ನಮ್ಮಿಬ್ಬರ ಅನುಭವ ಬೇರೆ ಬೇರೆ ಎಂಬಂತೆ ವಿವಿಧತೆ ತೋರಿದ್ದಾರೆ. ವಿದ್ಯಾರ್ಥಿಗಳಿಗೆ ಸ್ವಲ್ಪ ಪ್ರೋತ್ಸಾಹ-ಧೈರ್ಯ ಹೇಳಿದರೆ ನಾವು ನಿರೀಕ್ಷಿಸಿದ್ದಕ್ಕಿಂತ ಹೆಚ್ಚಿನ ಎತ್ತರಕ್ಕೆ ಏರಬಲ್ಲರೆಂದು ಇವರ ಬರಹಗಳು ಹೇಳುತ್ತಿವೆ. ಅವರಿಗೆ ಮಾರ್ಗದರ್ಶನ ಮುಖ್ಯ. ಪ್ರತಿಭೆ ಸುಪ್ತವಾಗಿರುವ ಈ ವಯಸ್ಸಿನಲ್ಲಿ ಅವರನ್ನು ಸಹಜವಾಗಿ ಅರಳಲು ಬಿಡಬೇಕಾದ್ದು ಗುರುಗಳ ಹಾಗೂ ಹೆತ್ತವರ ಕರ್ತವ್ಯ. ಈ ಪ್ರಬಂಧಗಳು ಚೆನ್ನಾಗಿವೆಯೇ ಇಲ್ಲವೇ ಎಂಬ ವಿಮರ್ಶೆ ಈಗಲೇ ಬೇಡ. ಏಕೆಂದರೆ ಪ್ರಾರಂಭದ ಹೆಜ್ಜೆಗಳು, ಮುಂದೆ ದೃಢವಾಗಿ ನಿಲ್ಲುವ ಎಲ್ಲ ಲಕ್ಷಣಗಳು, ಅರ್ಹತೆಗಳು ಇಲ್ಲಿವೆ. ೨೪ ವಿದ್ಯಾರ್ಥಿಗಳ ಲೇಖನಗಳು ಒಟ್ಟಿಗೆ ಓದಲು ಸಿಗುವುದು ಅಪರೂಪ. ನಾವೆಲ್ಲ ಕೊಂಡು ಓದಿ ಪ್ರೋತ್ಸಾಹಿಸಿ ಶುಭ ಹಾರೈಸೋಣ. ಇವರೆಲ್ಲ ಚಿಗುರಿ ವಿಸ್ತರಿಸುವುದು ನಮಗೆ ಬೇಕಾಗಿದೆ.*

### ವಸಾಹತು ಪ್ರಜ್ಞೆ ಮತ್ತು ವಿಮೋಚನೆ

*ಮೂಲ : ಗೂಗಿ ವಾ ಥಿಯೊಂಗೊ; ಅನುವಾದ : ರಹಮತ್ ತರೀಕೆರೆ*

**ಪುಟ : ೧೮ + ೪೬** **ಬೆಲೆ : ರೂ. ೩೫**

**ಅಭಿನವ,** ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೫೬೦ ೦೪೦



*ವಸಾಹತುಪ್ರಜ್ಞೆ ಸಾಮ್ರಾಜ್ಯಶಾಹಿಗಳದ್ದು. ನಮಗದರ ಅರಿವಿರಬೇಕು ಮಾತ್ರವಲ್ಲ, ಅದರಿಂದ ವಿಮೋಚನೆ ಪಡೆಯುವತ್ತ ಹೆಜ್ಜೆಯಿಡಬೇಕು. ನಮ್ಮ ನೆಲದಲ್ಲಿ ಅನ್ಯರು ಕಾಲೂರಿದರೆ ನಾವು ನೆಲೆ ಕಳಕೊಳ್ಳುವುದಷ್ಟೆ ಅಲ್ಲ; ನಮ್ಮ ಸಾಹಿತ್ಯಿಕ - ಸಾಂಸ್ಕೃತಿಕ ವಲಯದಲ್ಲಿ ಚಿಂತನೆಯ ಅಲೆಯನ್ನೂ ಪರಿಕೀಯರಿಗೆ ಒಪ್ಪಿಸುವುದೆಂದೇ ಅರ್ಥ. ಅಂದರೆ ವಸಾಹತುಶಾಹಿ ಆಡಳಿತವು ಪ್ರಾದೇಶಿಕವಾದುದನ್ನೆಲ್ಲ ಬದಲಿಸಿ, ಭಾಷೆಗಳನ್ನು ಕಡೆಗಣಿಸಿ ನಮ್ಮ ಆಲೋಚನೆಯ ದಿಕ್ಕನ್ನು ಬದಲಿಸುತ್ತದೆ. ಯೂರೋಪಿಯನ್ ಸಂಸ್ಕೃತಿಯ ಪ್ರಭಾವದಿಂದ ಭಾರತ-ಆಫ್ರಿಕಾಗಳಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸದಿಂದಾಗಿ ಲೇಖಕರು ಇಂಗ್ಲಿಷ್‌ನಲ್ಲೇ ಬರೆಯಲಾರಂಭಿಸಿದರು. ನಮ್ಮಲ್ಲೂ ಸಂಸ್ಕೃತವನ್ನು ತಡೆಗಟ್ಟಿದಂತೆ ಇಂಗ್ಲಿಷನ್ನು ತಡೆಯಲಾಗಿಲ್ಲ. ಇಂದು ಯಾವುದೇ ಭಾಷೆಯನ್ನು ಇಂಗ್ಲಿಷ್ ಮೂಲಕವೇ ಕಲಿಯಬೇಕಾದ ಸ್ಥಿತಿ ಬಂದಿದೆ. ಸ್ವಂತಿಕೆಯನ್ನು ಉಳಿಸಿಕೊಳ್ಳಲು ವಸಾಹತುಪ್ರಜ್ಞೆಯನ್ನು ಧಿಕ್ಕರಿಸಿ ನಮ್ಮ ನಮ್ಮ ಭಾಷೆಗಳಲ್ಲೇ ಸಾಹಿತ್ಯ ರಚಿಸಬೇಕಾಗಿದೆ ಎಂಬುದನ್ನು ಆಫ್ರಿಕದ ಗೂಗಿ ವಾ ಥಿಯೊಂಗೊರಂಥ ಲೇಖಕರು ಕಂಡುಕೊಂಡರು. ಕೀನ್ಯಾದ ಈ ಲೇಖಕನ ಚಿಂತನೆಗಳು ಇಂದು ಭಾರತದ ಲೇಖಕರಿಗೂ ವಸಾಹತುಶಾಹಿ ಪ್ರಾಬಲ್ಯದಿಂದ ಕುಸಿದುಹೋದ ಮನಸ್ಸುಗಳಿಗೂ ಅಗತ್ಯವಾಗಿವೆ. ಇದೀಗ ಜಗತ್ತು ಎಚ್ಚರಗೊಂಡಿದೆ, ವಸಾಹತು ನಿರ್ಮಾಣ ಅಂದಿನ ಕಾಲಮಾನದ್ದಾದರೆ ಇಂದು ಅದು ಇನ್ನೊಂದು ವೇಷ ಧರಿಸಿ ಬರುತ್ತಿದೆ. ಪಶ್ಚಿಮ ರಾಷ್ಟ್ರಗಳ ಆರ್ಥಿಕ ಬಂಡವಾಳ ಹೂಡಿಕೆಗೆ ಮುಕ್ತ ಸ್ವಾಗತ ನೀಡುವುದೂ ಕೂಡ ವಸಾಹತೀಕರಣಕ್ಕೆ ಒಳಗಾಗುವಷ್ಟೇ ದುರ್ದಸೆಯನ್ನು, ಅಪಾಯವನ್ನು ತರುತ್ತದೆಂಬುದನ್ನು ಮರೆಯದಿರೋಣ. ಈ ಪುಸ್ತಕ ಇಂಥ ಚಿಂತನೆಗಳಿಗೆ ಪೂರಕ. ಸಮರ್ಥ ಅನುವಾದ ರಹಮತ್ ತರೀಕೆರೆಯವರದು.*

**ಕರೆಯದೆ ಹೋದರೂ...** (ನಗೆ ಬರಹಗಳು)

*ಸಾಯಿಲಕ್ಷ್ಮಿ ಎಸ್.*

**ಪುಟ : ೯೬** **ಬೆಲೆ : ರೂ. ೫೦**

**ಹೇಮಂತ ಸಾಹಿತ್ಯ**, ನಂ. ೯೭೨-ಸಿ, IV 'ಇ' ಬ್ಲಾಕ್, ೧೦ನೇ 'ಎ' ಮುಖ್ಯರಸ್ತೆ ರಾಜಾಜಿನಗರ, ಬೆಂಗಳೂರು - ೫೬೦ ೦೧೦

*ಹೆಜ್ಜೆ ಹೆಜ್ಜೆಗೂ ಅಡಚಣೆಗಳು, ಅನಿರೀಕ್ಷಿತ ತಿರುವುಗಳು ಮಾತ್ರವಲ್ಲ ಪೇಚಿಗೆ ಸಿಲುಕಿಸುವ ಸಂಗತಿಗಳು ಎಲ್ಲರ ಬಾಳಿನಲ್ಲೂ ನುಗ್ಗುತ್ತಲೇ ಇರುತ್ತವೆ. ನಾವೂ ಮುನ್ನುಗ್ಗಿ ಹಿಮ್ಮೆಟ್ಟಿಸದೆ ನಿರ್ವಾಹವಿರುವುದಿಲ್ಲ, ಇಲ್ಲಿ ಪಲಾಯನ ಪ್ರಯೋಜನವಿಲ್ಲ. ಸರಿಯಾಗಿ ನಿಭಾಯಿಸದೆ ಗೊಣಗುವುದೂ ವ್ಯರ್ಥ. ಹೀಗೆ ತಮ್ಮ ಬದುಕಿನಲ್ಲಿ ಎದುರಾದ ಪ್ರಕರಣ, ಘಟನೆ, ತೊಂದರೆ ಇವೆಲ್ಲ ಅಂದು ಕಾಡಿದ್ದೂ ಅಲ್ಲದೆ ಇಂದೂ ನೆನಪುಗಳಾಗಿ ಪೀಡಿಸತೊಡಗಿದಾಗ ಎಲ್ಲವನ್ನೂ ಹಾಸ್ಯಲೇಪಿತ ನಗೆಬರಹಗಳನ್ನಾಗಿ ಪರಿವರ್ತಿಸಿ ನಮ್ಮ ಮುಂದೆ ಹರಡಿದವರು ಶ್ರೀಮತಿ ಸಾಯಿಲಕ್ಷ್ಮಿ. ನಡೆದುದನ್ನು ಸ್ವಾರಸ್ಯದೊಂದಿಗೆ ವಿಸ್ತಾರವಾಗಿ ಹೇಳಿ ಕೊನೆಮುಟ್ಟಿಸುವುದು ಇವರ ವೈಶಿಷ್ಟ್ಯ. ಲೇಖಕಿಗೆ ಊರೆಲ್ಲಾ ನೆಂಟರಷ್ಟೇ ಅಲ್ಲದೆ ದೂರದೂರು – ದೂರದೇಶಗಳಲ್ಲೂ ಸ್ನೇಹಿತರು – ಆಪ್ತೇಷ್ಟರು. ಗೃಹಿಣಿ ಹಾಗೂ ಜವಾಬ್ದಾರಿಯುತ ಸಂಸ್ಥೆಯಲ್ಲಿ ಉದ್ಯೋಗಸ್ಥೆಯಾಗಿ ಇದೀಗ ಲೇಖಕಿಯಾಗಿಯೂ ಮಿಂಚಿದ ಇವರು ಇದೆಲ್ಲವನ್ನೂ ನಿಭಾಯಿಸುತ್ತಾರೆಂದರೆ ಅಚ್ಚರಿಪಡಬೇಕಾದದ್ದೇ. ಅವರು ಎರಡೇ ಪುಸ್ತಕ ಬರೆದು ಮಿಂಚಿ ಮಾಯವಾಗದೆ ಸಾಹಿತ್ಯದಲ್ಲೂ ಸದಾ ಸ್ಥಿರನಕ್ಷತ್ರವಾಗಿರಲಿ ಎಂಬ ಅಪೇಕ್ಷೆ ಎಲ್ಲರದ್ದು. ಇಲ್ಲಿನ ಸಂದರ್ಭಗಳೆಲ್ಲಾ ಮನೆಮಂದಿ, ಆತ್ಮೀಯರು, ಸಹೋದ್ಯೋಗಿಗಳ ಮಧ್ಯೆ ನಡೆದಿದ್ದಾದ್ದರಿಂದ ಅವುಗಳನ್ನರಿತು ನಾವೂ ಹಾಸ್ಯವನ್ನು ಆಸ್ವಾದಿಸಬೇಕಾಗಿದೆ.*




**ಕನ್ನಡ ಶಾಸನ ಮತ್ತು ಸಾಹಿತ್ಯದಲ್ಲಿ ಶಾಪ**

*ಡಾ|| ಟಿ. ಡಿ. ರಾಜಣ್ಣ*

**ಪುಟ : xii + ೨೬೮ = ೨೮೦** **ಬೆಲೆ : ರೂ. ೨೨೦**

**ಬಂಡಾರ ಪ್ರಕಾಶನ**, ಮಸ್ಕಿ, ರಾಯಚೂರು ಜಿಲ್ಲೆ

*ಶಾಪದ ಮೂಲವೇ ಕೋಪ. ಜನಸಾಮಾನ್ಯರಿಗಿಂತ ಋಷಿ ಮುನಿಗಳು ಕೊಡುವ ಶಾಪವು ಶಕ್ತಿಯುತವೆಂದು ಪುರಾಣಕಥೆಗಳಲ್ಲಿ ವರ್ಣಿತವಾಗಿದೆ. ಪುರಾಣಗಳಲ್ಲಿ ಶಾಪಕೊಡುವವರನ್ನು ಸಮರ್ಥರೆಂದೂ ಶಾಪಕ್ಕೊಳಗಾದವರನ್ನು ನಿರ್ವಾಹವಿಲ್ಲದೆ ಅನುಭವಿಸಲೇಬೇಕಾದ ನತದೃಷ್ಟರೆಂತಲೂ ವರ್ಣಿಸಲಾಗಿದೆ. ಹಿಂದಿನ ಋಷಿ-ಮುನಿಗಳು ಅದರಲ್ಲೂ ದುರ್ವಾಸರು ಶಾಪಗಳನ್ನು ಕೊಡುತ್ತಲೇ ಓಡಾಡಿಕೊಂಡಿದ್ದರೋ ಎಂಬಂತೆ ಕಥೆ ಉಪಕಥೆಗಳಲ್ಲೆಲ್ಲ ಅವರನ್ನು ಎಳೆದು ತರಲಾಗಿದೆ. ಈ ಶಾಪವೆಷ್ಟು ನಿಜ ಎಂಬ ನಮ್ಮ ಸಂದೇಹವು ಪುರಾಣಗಳಲ್ಲಿ ಕೊಟ್ಟ ಶಾಪವು ಅವರಂದಂತೆಯೇ ಆಗಿಯೂ ಬಿಡುತ್ತಿತ್ತೆಂಬ ಸ್ಪಷ್ಟ ನಿರೂಪಣೆಯೊಂದಿಗೆ ಗೊಂದಲವನ್ನೂ ಉಂಟುಮಾಡುತ್ತದೆ. ಪುರಾಣದ ಸಾಹಿತ್ಯವನ್ನು ಕೆದಕಿದರೆ ಅಲ್ಲಿ ಶಾಪದ ಬಗ್ಗೆ ಬೇಕಾದಷ್ಟು ಸಾಮಗ್ರಿ ಸಿಗುತ್ತದೆ. ಶಾಪಗಳು ತಪ್ಪು ಮಾಡಿದವರನ್ನು ಶಿಕ್ಷಿಸಲು ಬಳಕೆಯಾಗುತ್ತಿದ್ದವೆ? ನಿರಪರಾಧಿಗಳ ಮೇಲೆ ಅವು ದುರ್ಬಳಕೆಯಾಗುತ್ತಿದ್ದವೆ? ಅಥವಾ ಶಾಪಗಳಿಗಂಜಿ ಜನ ಭಯ ಭಕ್ತಿಯಿಂದ – ಸನ್ನಡತೆಯಿಂದ ಬದುಕುತ್ತಿದ್ದರೇ? ಈ ಎಲ್ಲ ವಿಚಾರಗಳನ್ನು ಶ್ರೀ ಟಿ. ಡಿ. ರಾಜಣ್ಣ ಸ್ವಾರಸ್ಯವಾಗಿ ಸಂಶೋಧನೆ ಮಾಡಿರುತ್ತಾರೆ. ಇದು ಹೆಚ್ಚಾಗಿ ಯಾರೂ ಗಮನಹರಿಸದ ಅಪರೂಪದ ಸಂಶೋಧನಾ ವಿಷಯ. ಶಾಪಗಳು ಕೆಟ್ಟ ಹಾರೈಕೆಗಳು ಮತ್ತು ಉತ್ತಮ ಸಮಾಜದಲ್ಲಿ ಇರಬಾರದಂಥವು. ಉನ್ಮತ್ತರು ಮತ್ತು ವಿವೇಚನಾ ಶಕ್ತಿ ಇಲ್ಲದವರು ಮಾತ್ರ ಶಪಿಸಬಲ್ಲರು. ಈ ಶಪಿಸುವ ಪರಂಪರೆ ಇಂದಿಗೂ ಜೀವಂತವಾಗಿರುವುದು ಖೇದಕರ. ಶಾಪಗಳಿಂದ ಏನೂ ಆಗದಿದ್ದರೂ ಮನಸ್ಸು ಮಾತ್ರ ತಲ್ಲಣಗೊಳ್ಳಬಲ್ಲುದು.*

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

---

## ಸಾದರ ಸ್ವೀಕಾರ

**ಗೀತಾಂಜಲಿ** (ನೃತ್ಯರೂಪಕ) ಎಸ್. ಮಾಲತಿ

*ಪುಟ : ೨೪* *ಬೆಲೆ : ರೂ. ೧೫*

**ಗುರುದೇವ – ಪುಸ್ತಕ ಒಂದು** (ಬಾಲ್ಯದಿಂದ ಹದಿವಯಸ್ಸಿನವರೆಗೆ) ಸಿ. ಕೆ. ವೆಂಕಟರಾಮಯ್ಯ

*ಪುಟ : ೮೮* *ಬೆಲೆ : ರೂ. ೬೦*

**ಗುರುದೇವ – ಪುಸ್ತಕ ಎರಡು** (ಹದಿವಯಸ್ಸಿನಿಂದ ವೃದ್ಧಾಪ್ಯದ ವರೆಗೆ) ಜಿ. ರಾಮನಾಥ ಭಟ್

*ಪುಟ : ೧೬೦* *ಬೆಲೆ : ರೂ. ೯೦*

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು

**ನವಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ನಿಮಗೆ ನೀವೇ ಬಾಸ್ ಆಗಿ!** ಗಣೇಶ್ ಯಲ್ಲಾಪುರ

*ಪುಟ : ೧೪೪* *ಬೆಲೆ : ರೂ. ೧೨೫*

**ಸಾವಣ್ಣ ಎಂಟರ್‌ಪ್ರೈಸಸ್**, ನಂ. ೫೭, ೧ನೇ ಮಹಡಿ, ಪುಟ್ಟಣ್ಣ ರಸ್ತೆ, ಬಸವನಗುಡಿ, ಬೆಂಗಳೂರು - ೪

**ಅಸ್ಮಿತೆ** (ಸಾಂಸ್ಕೃತಿಕ ವಿಶ್ಲೇಷಣೆ) ಡಾ|| ಗೀತಾಪ್ರಸಾದ್, ಡಾ|| ಎಸ್. ಪ್ರಸಾದಸ್ವಾಮಿ

*ಪುಟ : ೧೬೮* *ಬೆಲೆ : ರೂ. ೧೦೦*

**ಕಣ್ವ ಪಬ್ಲಿಕೇಷನ್ಸ್ ಪ್ರೈ. ಲಿ.**, 'ಕಾಲ ಕನಸು', ನಂ. ೯೪೪, ೧ನೇ ಮುಖ್ಯರಸ್ತೆ, ನಿಸರ್ಗ ಬಡಾವಣೆ, ಚಂದ್ರಾ ಲೇಔಟ್, ಬೆಂಗಳೂರು - ೫೬೦ ೦೭೨

**ಈ ಲೋಕದ ಇನ್ನೊಂದು ಗಿಡ** (ಕವನ ಸಂಕಲನ) ಶಿವರಾಜ ಬೆಟ್ಟದೂರು

*ಪುಟ : ೮೨* *ಬೆಲೆ : ರೂ. ೮೦*

**ಪಲ್ಲವ ಪ್ರಕಾಶನ**, ಚನ್ನಪಟ್ಟಣ (ಮಾರ್ಗ) ಎಮ್ಮಿಗನೂರು, ಬಳ್ಳಾರಿ - ೫೮೩ ೧೧೩

**ಛೆ! ಇದೆಂತಾ ಪ್ರಜಾಪ್ರಭುತ್ವ?** (ವೈಚಾರಿಕ ಲೇಖನಗಳು) ಶಾಂತಾರಾಮ ಸೋಮಯಾಜಿ

*ಪುಟ : ೨೩೨* *ಬೆಲೆ : ರೂ. ೧೨೦*

**ಶ್ರೀನಿವಾಸ ಪುಸ್ತಕ ಪ್ರಕಾಶನ**, ನಂ. ೧೬೪/ಎ, ಮೊದಲನೇ ಮಹಡಿ, ಎಂ. ಆರ್. ಎನ್. ಬಿಲ್ಡಿಂಗ್, ಕನಕಪುರ ರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

**ಹೊಸ ಜಗತ್ತು** (ಅಪ್ರಕಟಿತ ಕಥೆಗಳು) ಎಚ್. ವಿ. ಸಾವಿತ್ರಮ್ಮ

*ಪುಟ : ೧೫೨* *ಬೆಲೆ : ರೂ. ೧೦೦*

**ವಿಶ್ವ ಕಂಡ ದ್ವಿತೀಯ ಗಾಂಧೀ... ಅಣ್ಣಾ ಹಜಾರೆ** ಗಿರೀಶ ಜಕಾಪುರೆ

*ಪುಟ : ೧೮೪* *ಬೆಲೆ : ರೂ. ೧೦೦*

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು

**ಅಭಿನವ**, ೧೭/೧೮-೨, ಮೊದಲನೇ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೫೬೦ ೦೪೦

**ಮಕ್ಕಳ ಮೂವತ್ತು ಕವಿತೆಗಳು** ವಿಷ್ಣು ನಾಯ್ಕ

*ಪುಟ : ೬೮* *ಬೆಲೆ : ರೂ. ೪೦*

ವಿಷ್ಣು ನಾಯ್ಕ, ಪರಿಮಳ, ಅಂಬಾರಕೊಡ್ಲ, ಅಂಕೋಲ - ೫೮೧ ೩೧೪, ಉತ್ತರ ಕನ್ನಡ

**ಓದಿ ಪುಸ್ತಕ ಓದು** (ವಿಮರ್ಶಾ ಸಂಕಲನ) ಡಾ|| ವಸಂತ ಕುಷ್ಟಗಿ

*ಪುಟ : ೨೫೬* *ಬೆಲೆ : ರೂ. ೧೨೫*

**ಬಸವ ಪ್ರಕಾಶನ ಮತ್ತು ಪುಸ್ತಕ ವ್ಯಾಪಾರಿಗಳು**, ಮುಖ್ಯರಸ್ತೆ, ಗುಲಬರ್ಗಾ

**ಜನಸಾಮಾನ್ಯರ ಮಾಹಿತಿಗಾಗಿ ಲೋಕಾಯುಕ್ತರ ತನಿಖಾ ವರದಿ** ೦೦

*ಪುಟ : ೨೨೪* *ಬೆಲೆ : ರೂ. ೧೦೦*

**ಲಂಕೇಶ್ ಪ್ರಕಾಶನ**, ನಂ. ೯, ಪೂರ್ವ ಆಂಜನೇಯ ಗುಡಿ ರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

**ಗುಮಾನಿ** (ಸಾಮಾಜಿಕ ಕಾದಂಬರಿ) ಬಿ. ಪಿ. ಶಿವಾನಂದರಾವ್

*ಪುಟ : ೧೬೦* *ಬೆಲೆ : ರೂ. ೧೦೦*

**ಪಾಂಚಜನ್ಯ ಪಬ್ಲಿಕೇಷನ್ಸ್**, ನಂ. ೪೨೦/೨೮-೬-, ೭ನೇ ಕ್ರಾಸ್ ನಡುವೆ, ಅಮರಜ್ಯೋತಿ ನಗರ, ಬೆಂಗಳೂರು - ೫೬೦ ೦೪೦

# ಮೌಢ್ಯದ ಕತ್ತಲೆ ಕಳೆದು ವಿಜ್ಞಾನದ ಶುಭ್ರ ಬೆಳಕಿನತ್ತ ಕರೆದೊಯ್ಯುವ

# ಮಾರ್ಕ್ಸ್ ಮತ್ತು ವಿಜ್ಞಾನ





(ಜೆ. ಡಿ. ಬರ್ನಾಲ್ 'ಮಾರ್ಕ್ಸ್ ಆ್ಯಂಡ್ ಸೈನ್ಸ್'
ಕೃತಿಯ ಸಂಗ್ರಹಾನುವಾದ)
ಅನುವಾದ : **ಡಾ|| ಜಿ. ರಾಮಕೃಷ್ಣ**
ಪ್ರಕಾಶಕರು : ನವಕರ್ನಾಟಕ ಪ್ರಕಾಶನ, ಬೆಂಗಳೂರು
ಪುಟಗಳು : ೪೦ ಬೆಲೆ : ೨೦-೦೦

''**ವಿಶ್ವಕ್ಕಾಗಿ** ದುಡಿ'' ಎಂದ ಕಾರ್ಲ್ ಮಾರ್ಕ್ಸ್‌ಗೆ ವಿಜ್ಞಾನವು ಆದ್ಯ ಮತ್ತು ಅಂತಿಮ ತತ್ವ. ಗಣಿತಶಾಸ್ತ್ರವೂ ಸೇರಿದಂತೆ ಎಲ್ಲ ಕ್ಷೇತ್ರಗಳಲ್ಲಿ ಆತ ಸ್ವತಂತ್ರವಾದ ಪ್ರಚೋದಕ ನಿಯಮಗಳನ್ನು ಹೊರಗೆಡಹಿದ್ದಾನೆ. ದುಡಿಯುವ ವರ್ಗದ ಸಂಕೋಲೆಗಳನ್ನು ಕಳಚುವ ಸಂದೇಶ ಸಾರಿದ ಮಾರ್ಕ್ಸ್ ಸಮಾಜವಿಜ್ಞಾನಿಯಾಗಿರುವಂತೆಯೇ ಶುದ್ಧ ವಿಜ್ಞಾನಕ್ಕೆ ತನ್ನನ್ನೇ ತಾನು ಅರ್ಪಿಸಿಕೊಂಡಿದ್ದಾನೆ. ಅಲೆಗ್ಸಾಂಡರ್‌ನ ಗುರು ಅರಿಸ್ಟಾಟಲ್ ಮೂಲ ವಿಜ್ಞಾನ ಮತ್ತು ಸಮಾಜದ ಎಲ್ಲ ಕ್ಷೇತ್ರಗಳಲ್ಲಿ ಕಲಿತು, ಸಿದ್ಧಾಂತಗಳನ್ನು ಮಂಡಿಸಿದಂತೆಯೇ ಮಾರ್ಕ್ಸ್ ಕೂಡ ಜೀವನದ ಎಲ್ಲ ರಂಗಗಳಿಗೆ ಅತ್ಯಗತ್ಯವಾದ ವಿಷಯಗಳ ಬಗ್ಗೆ ತನ್ನ ಖಚಿತ ಅಭಿಪ್ರಾಯಗಳನ್ನು ಮಂಡಿಸಿದ್ದಾನೆ.

''ವಿಜ್ಞಾನವು ಸ್ವಾರ್ಥದ ಸಂತೋಷಕ್ಕಲ್ಲ, ಬದಲಾಗಿ ಅಲ್ಲಿ ದೊರಕಿದ ಜ್ಞಾನವನ್ನು ಮಾನವ ಕೋಟಿಯ ಸೇವೆಗೆ ಮುಡುಪಾಗಿಡಲು ಒಂದು ಸಾಧನ. ವಿಜ್ಞಾನವು ಉದ್ಯಮದ ಬೆಳವಣಿಗೆಗೆ ಇಂಬುಕೊಡುವಂತೆ ಉದ್ಯಮವೂ ವಿಜ್ಞಾನದ ಅಭಿವೃದ್ಧಿಗೆ ಸಹಕಾರಿಯಾಗುತ್ತದೆ. ಉದ್ಯಮ ಮತ್ತು ವಾಣಿಜ್ಯ ಇಲ್ಲದೆ ಪ್ರಕೃತಿ ವಿಜ್ಞಾನವು ಎಂದೂ ಬೆಳವಣಿಗೆಯನ್ನು ಹೊಂದಿಲ್ಲ. ಯಾವುದೇ ಕಾಲಘಟ್ಟದ ತಾಂತ್ರಿಕತೆಯು ಅಂದಂದಿನ ವಿಜ್ಞಾನದ ಕೊಡುಗೆಯನ್ನು ಮೀರಿ ನಿಲ್ಲುವುದಿಲ್ಲ; ಅಂತೆಯೇ ತಾಂತ್ರಿಕತೆಯ ಸ್ವರೂಪ ಮತ್ತು ಅವಶ್ಯಕತೆಯನ್ನು ಮೀರಿ ವಿಜ್ಞಾನವು ಬೆಳೆಯುವುದಿಲ್ಲ. ವಿಜ್ಞಾನವು ಆಕಾಶದಿಂದ ಧುಮುಕಿ ಬಂದುಬಿಡುವಂಥದ್ದಲ್ಲ; ಅದಕ್ಕೂ ಅವಶ್ಯಕತೆಯ ಪ್ರೇರಣೆಯುಂಟು... ವಿಜ್ಞಾನವು ಎಲ್ಲೋ ಆಕಾಶದಿಂದ ಉದುರಿದ ಒಂದು ದೈವದತ್ತವಾದ ಜ್ಞಾನವೆಂದು ಭ್ರಮಿಸುವುದು ಬೇಡ... ವಸ್ತುಸ್ಥಿತಿ ಏನೆಂದರೆ ವಿಜ್ಞಾನದ ಸಿದ್ಧಾಂತಗಳೂ ಅಂತಿಮವಲ್ಲ ಮತ್ತು ಶಾಶ್ವತವಲ್ಲ; ಅವು ಸದಾ ಬೆಳೆಯುತ್ತಲೇ ಇರುವ ಸ್ವಭಾವದವು.''

''ವಿಜ್ಞಾನದ ಶುಭ್ರ ಬೆಳಕು ಸಹ ಮೌಢ್ಯದ ಕತ್ತಲೆಯ ಹಿನ್ನೆಲೆಯಲ್ಲಿ ತನ್ನ ಹೊಳಪನ್ನು ಕಳೆದುಕೊಂಡಂತಿದೆ. ನಮ್ಮ ಪ್ರಗತಿ ಮತ್ತು ಆವಿಷ್ಕಾರಗಳೆಲ್ಲಾ ಭೌತ ಶಕ್ತಿಗಳಿಗೆ ಬೌದ್ಧಿಕ ಜೀವವನ್ನು ಕೊಟ್ಟು, ಮಾನವನ ಜೀವನಕ್ಕೆ ಭೌತ ಶಕ್ತಿಯನ್ನಷ್ಟೇ ನೀಡಿ ಅವನ ಉದಾತ್ತತೆಗೆ ಭಂಗ ತರುವಂತೆ ತೋರುತ್ತಿದೆ. ವಿಜ್ಞಾನ ಮತ್ತು ಆಧುನಿಕ ಕೈಗಾರಿಕೆ ಪರಸ್ಪರ ವಿರೋಧಿಗಳಂತೆ ಮಾರ್ಪಡುತ್ತಿವೆ ಮತ್ತು ಆಧುನಿಕ ಸಂಕಷ್ಟ ಮತ್ತು ಹತಾಶೆಗಳನ್ನು ಹುಟ್ಟುಹಾಕುತ್ತಿವೆ. ಉತ್ಪಾದನಾ ಶಕ್ತಿಗಳು ಮತ್ತು ಸಾಮಾಜಿಕ ಸಂಬಂಧಗಳ ನಡುವೆ ವೈರತ್ವವಿರುವಂತೆ ಕಾಣುತ್ತಿದೆ... ಇದಕ್ಕೆ ಪರಿಹಾರವಿದೆ. ಹೊಸ ಕೌಶಲ್ಯವನ್ನು ಬೆಳೆಸಿಕೊಂಡಿರುವ ಕಾರ್ಮಿಕ ವರ್ಗವು ಹೊಸ ಉತ್ಪಾದನೆಯ ಸಾಧನೆಗಳನ್ನು ತನ್ನದಾಗಿಸಿಕೊಳ್ಳಬೇಕು, ಅಷ್ಟೆ. ಯಂತ್ರಗಳಂತೆ ಕಾರ್ಮಿಕ ವರ್ಗವು ಸಹ ಆಧುನಿಕ ಕಾಲದ ಆವಿಷ್ಕಾರವೇ... ಆಧುನಿಕ ಕೈಗಾರಿಕೆಯಿಂದ ಸೃಷ್ಟಿಯಾಗಬೇಕಾದ ಸಾಮಾಜಿಕ ಕ್ರಾಂತಿಯನ್ನು ಉಂಟುಮಾಡುವುದರಲ್ಲಿ ನಮ್ಮ ಕಾರ್ಮಿಕ ವರ್ಗವು ಹಿಂದೆ ಬೀಳುವುದಿಲ್ಲವೆಂದು ಭಾವಿಸುತ್ತೇನೆ. ಆ ಕ್ರಾಂತಿಯು ಮಾತ್ರವೇ ವಿಶ್ವದ ಇಡೀ ಕಾರ್ಮಿಕ ವರ್ಗಕ್ಕೆ ವಿಮೋಚನೆಯನ್ನು ನೀಡಲು ಸಮರ್ಥವಾದದ್ದು...''

ವಿಜ್ಞಾನಿಗಳು, ವಿಜ್ಞಾನದಲ್ಲಿ ಆಸಕ್ತಿ ಹೊಂದಿರುವವರು ಮಾತ್ರವಲ್ಲದೆ ಮಾರ್ಕ್ಸ್‌ವಾದವೆಂದರೆ ಮೂಗು ಮುರಿಯುವವರು ಕೂಡ ವಿಜ್ಞಾನಕ್ಕೆ ಮಾರ್ಕ್ಸ್ ನೀಡಿರುವ ಸೈದ್ಧಾಂತಿಕ ಕೊಡುಗೆಯನ್ನು ಗಮನಿಸಬೇಕೆಂದರೆ ಖ್ಯಾತ ಭೌತಶಾಸ್ತ್ರಜ್ಞ ಜೆ. ಡಿ. ಬರ್ನಾಲ್‌ರ ಕಿರುಹೊತ್ತಗೆ, 'ಮಾರ್ಕ್ಸ್ ಅಂಡ್ ಸೈನ್ಸ್' ಎಂಬ ಪುಟ್ಟ ಕೃತಿಯನ್ನು ಓದಬೇಕು. ಬರ್ನಾಲ್‌ರ ಈ ವಿಶಿಷ್ಟ ವಾದಸರಣಿಯನ್ನು 'ಹೊಸತು' ಪತ್ರಿಕೆಯ ಸಂಪಾದಕರಾದ ಡಾ|| ಜಿ. ರಾಮಕೃಷ್ಣ ಅವರು ಕನ್ನಡದಲ್ಲಿ ಸಮರ್ಥವಾಗಿ ಪ್ರತಿಪಾದಿಸಿದ್ದಾರೆ.

ಉತ್ಪಾದನಾ ವ್ಯವಸ್ಥೆಯು ಸುಧಾರಿಸಿದಂತೆಲ್ಲಾ ಉತ್ಪಾದನೆಯ ಅಂಗಗಳಾದ ಕಾರ್ಮಿಕರು, ಭೂಮಿ, ಬಂಡವಾಳ ಮತ್ತು ಕಾರ್ಖಾನೆಗಳ ಗುಣಮಟ್ಟದಲ್ಲಿ ಬದಲಾವಣೆಗಳಾಗಿವೆಯೇ ? ಕಾರ್ಮಿಕರ ಜೀವನ ಮಟ್ಟದಲ್ಲಿ ಬದಲಾವಣೆಗಳಾಗಿವೆಯೇ ? ಶ್ರಮಿಕರಿಗೆ ನೆರವು ನೀಡುವ ಉದ್ದೇಶದಿಂದ ರಚಿತವಾದ ಬೃಹತ್ ಯಂತ್ರಗಳು ಅವರ ದುಡಿಮೆಯ ಶ್ರಮವನ್ನೇನೂ ಕಡಿಮೆ ಮಾಡದೆ ಒಂದಕ್ಕೆ ಹತ್ತು ಪಟ್ಟು ಲಾಭ ಗಳಿಸುವ ದುರಾಸೆಯ ಬೆನ್ನೇರಿ, ಮಾರುಕಟ್ಟೆಯೇ ಮಹತ್ವದ ಅಂಗವೆಂಬಂತೆ ವರ್ತಿಸುತ್ತಿರುವುದು, ಮಧ್ಯವರ್ತಿಗಳ ಬಾಯಿ ಮೊಸರಾಗುತ್ತಿರುವುದು ಇಂದಿನ ಕಟು ವಾಸ್ತವ. ಇದನ್ನು ಮೂಲ ವಿಜ್ಞಾನಕ್ಕೂ ಅನ್ವಯಿಸಬಹುದೋ ? ಸರ್ವರಿಗೂ ಸಮಪಾಲು ಸಿಗುವುದು ಯಾವಾಗ ? ವಿಜ್ಞಾನವನ್ನು ಶೋಷಣೆಯ ಅಸ್ತ್ರವನ್ನಾಗಿಸದೆ ಮನುಕುಲದ ಉದ್ಧಾರಕ್ಕೆ ಬಳಸುವ ಸಂಜೀವಿನಿಯಾಗಿಸುವುದು ಹೇಗೆ ? – ಎಂಬಂತಹ ಪ್ರಶ್ನೆಗಳಿಗೆ ಉತ್ತರ ಹುಡುಕಲು ಈ 'ಮಾರ್ಕ್ಸ್ ಮತ್ತು ವಿಜ್ಞಾನ' ಕೃತಿಯನ್ನು ಓದಲೇಬೇಕು.

**ಚೇದ್ರೆ ಮಂಜುನಾಥ**
ಅನೌಪಚಾರಿಕ ಶಿಕ್ಷಣ
ಸಂಶೋಧನೆ ಮತ್ತು ತರಬೇತಿ ಕೇಂದ್ರ
ಚಿತ್ರದುರ್ಗ - ೫೭೭ ೫೦೧

ಸಂಶೋಧನೆ

ಏನು? ಏಕೆ? ಹೇಗೆ?



# ಸಂಶೋಧನೆಯ ಸಂಶೋಧನೆ

## ಡಾ|| ಟಿ. ಆರ್. ಚಂದ್ರಶೇಖರ

**ಡಾ||** ಎಂ. ಚಂದ್ರಪೂಜಾರಿ ಅವರು ಸಮಾಜ ಸಂಶೋಧನೆಗೆ ಸಂಬಂಧಿಸಿದಂತೆ ಕನ್ನಡದಲ್ಲಿ ಬಹಳಷ್ಟು ಬರೆದಿದ್ದಾರೆ. ಮೊದಲಿಗೆ ಇವರ ಕೃತಿಗಳ ಬಗ್ಗೆ ಹೇಳಬೇಕಾದ ಸಂಗತಿಯೆಂದರೆ ಇವು ವಿದ್ಯಾರ್ಥಿಗಳು ಪರೀಕ್ಷೆಗೆ ಸಿದ್ಧವಾಗಲು ನೆರವಾಗಲು ಬರೆದ ಕೃತಿಗಳಲ್ಲ. ಸಂಶೋಧನ ಕ್ಷೇತ್ರದಲ್ಲಿ ಹತ್ತಾರು ವರ್ಷ ಕೆಲಸ ಮಾಡಿ ಅಲ್ಲಿ ಪಡೆದ ಅನುಭವ, ಕಂಡುಕೊಂಡ ಒಳನೋಟಗಳ ಆಧಾರದ ಮೇಲೆ ಸಂಶೋಧನ ಕ್ಷೇತ್ರ ಪ್ರವೇಶಿಸಬಯಸುವ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಬಲ್ಲ ಕೃತಿಗಳನ್ನು ಅವರು ಬರೆಯುತ್ತಿದ್ದಾರೆ. ಎಂ. ಎನ್. ಶ್ರೀನಿವಾಸ್ ಅವರು ಹೇಳುತ್ತಿದ್ದ 'ಬುಕ್ ವ್ಯೂ' ಮತ್ತು 'ಫೀಲ್ಡ್ ವ್ಯೂ' ಎಂಬ ಎರಡು ದೃಷ್ಟಿಗಳನ್ನು ಗಮನದಲ್ಲಿಟ್ಟುಕೊಂಡು ಅವರು ಈ ಕೃತಿಯನ್ನು ರೂಪಿಸಿದ್ದಾರೆ. ಅವರಿಗೆ ವಿಸ್ತೃತವಾದ ಓದು ಇದೆ ಮತ್ತು ಅಷ್ಟೇ ವ್ಯಾಪಕವಾದ ಕ್ಷೇತ್ರ ಕಾರ್ಯದ ಅನುಭವವಿದೆ. ಈ ಎರಡು ಸಂಗತಿಗಳು ಇಲ್ಲಿ ಅರ್ಥ ಪೂರ್ಣವಾಗಿ ಸಂಯೋಜನೆಗೊಂಡಿವೆ. ಈ ವಿಷಯದಲ್ಲಿ ಕನ್ನಡದಲ್ಲಿ ಕೃತಿಗಳು ಕಡಿಮೆ. ಇದ್ದರೂ ನಾನು ಮೊದಲು ಹೇಳಿದಂತೆ ವಿದ್ಯಾರ್ಥಿಗಳು ಪರೀಕ್ಷೆಗೆ ಸಿದ್ಧವಾಗಲು ನೆರವಾಗುವಂತಹ ಸಂಶೋಧನೆ ಕುರಿತ ಕೃತಿಗಳು ಕನ್ನಡದಲ್ಲಿ ಬಂದಿವೆ. ಸಂಶೋಧನೆಯನ್ನು ಸೃಜನಶೀಲವಾಗಿ ಹೇಗೆ ಕೈಗೊಳ್ಳಬೇಕು ಎಂಬುದರ ಬಗ್ಗೆ ದಾರಿ ತೋರಿಸಬಲ್ಲಂತಹ ಕೃತಿಗಳು ಕನ್ನಡದಲ್ಲಿ ಅತಿ ವಿರಳ ಅಥವಾ ಇಲ್ಲವೆಂದರೂ ನಡೆಯುತ್ತದೆ. ಸಂಶೋಧನೆಯನ್ನು ಕುರಿತಂತೆ ಸಾಹಿತ್ಯದ ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಂಡು ಕೆಲವು ಕೃತಿಗಳು ಬಂದಿವೆ. ಅವುಗಳಲ್ಲಿ ಬಹುಪಾಲು ಪರೀಕ್ಷೆಯನ್ನು ಗಮನದಲ್ಲಿಟ್ಟುಕೊಂಡು ಬರೆದ ಕೃತಿಗಳೇ ಅಧಿಕ. ಸಮಾಜ ಸಂಶೋಧನೆಗೆ ಸಂಬಂಧಿಸಿದಂತೆ ವಿದ್ಯಾರ್ಥಿಗಳು ಸಂಶೋಧನೆ ಬಗ್ಗೆ ತಿಳಿದುಕೊಳ್ಳಲು ಇಂದಿಗೂ ಇಂಗ್ಲಿಷಿನ ಕೃತಿಗಳನ್ನೇ ನೆಮ್ಮಿಕೊಳ್ಳುವ ಸ್ಥಿತಿ ಕರ್ನಾಟಕದಲ್ಲಿದೆ. ಕನ್ನಡದಲ್ಲಿ ಸಮಾಜ ವಿಷಯ ಕುರಿತಂತೆ (ಸಮಾಜಶಾಸ್ತ್ರ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ಅಭಿವೃದ್ಧಿ, ಗ್ರಾಮ ಅಧ್ಯಯನ, ಮಹಿಳಾ ಅಧ್ಯಯನ ಇತ್ಯಾದಿ) ಕೃತಿಗಳನ್ನು ಸಿದ್ಧಪಡಿಸಲು ಆ ಕ್ಷೇತ್ರದಲ್ಲಿ ಅಪಾರವಾಗಿ ದುಡಿದಿರಬೇಕು ಎಂದೇನಿಲ್ಲ. ಸಮಾಜ ಸಂಶೋಧನೆಯಲ್ಲಿ ಏನಾಗಿದೆ ಎಂದರೆ ಅದಕ್ಕೆ ಸಂಬಂಧಿಸಿದ ಇಂಗ್ಲಿಷಿನ ನಾಲ್ಕಾರು ಕೃತಿಗಳನ್ನು ಓದಿ, ನಾಲ್ಕು ಗೋಡೆ ಮಧ್ಯದಲ್ಲಿ ಕುಳಿತುಕೊಂಡು ಕನ್ನಡದಲ್ಲಿ ಒಂದು ಕೃತಿಯನ್ನು ಸಿದ್ಧಪಡಿಸುವುದು ಎನ್ನುವಂತಾಗಿದೆ. ಏನಾದರೂ ಕನ್ನಡದಲ್ಲಿ ತಾನೆ! ಕನ್ನಡದಲ್ಲಿ ಬರೆಯುವವರೇ ಕಡಿಮೆ. ಅದರಲ್ಲಿ ಬರೆಯುವುದು ಕನ್ನಡಕ್ಕೆ ತೋರುವ ಒಂದು ಬಗೆಯ ಅಭಿಮಾನ, ಒಂದು ಬಗೆಯ ಕೃಪೆ ಎನ್ನುವಂತಾಗಿದೆ. ಇವು ಸಾಮಾನ್ಯವಾಗಿ ಪಿಎಚ್.ಡಿ. ಪ್ರವೇಶ ಪರೀಕ್ಷೆಗೋ ಅಥವಾ ಎಂ.ಫಿಲ್. ಪರೀಕ್ಷೆಗೋ ಅಥವಾ ಎಂ.ಎ.ಯಲ್ಲಿನ ಸಂಶೋಧನೆ ಕುರಿತ ಪತ್ರಿಕೆಯ ಪರೀಕ್ಷೆಗೋ ಉಪಯೋಗವಾಗುವಂತೆ ಸಿದ್ಧವಾಗುತ್ತವೆ. ಅನುಭವ ಆಧರಿತ ಮತ್ತು ಸೈದ್ಧಾಂತಿಕ ಎನ್ನಬಹುದಾದ ಕೃತಿಗಳು ಕಡಿಮೆ. ಡಾ|| ಎಂ. ಚಂದ್ರಪೂಜಾರಿ ಅವರ ಕೃತಿಗಳ ಮಹತ್ವ ಎಲ್ಲಿದೆಯೆಂದರೆ ಅವು ಅವರು ಸಂಶೋಧನೆ ಕ್ಷೇತ್ರದಲ್ಲಿ ಕಂಡುಕೊಂಡ ಅನುಭವಗಳನ್ನು ಆಧರಿಸಿರುತ್ತವೆ. ಅವರು ಸಂಶೋಧನೆಯ ಸೂತ್ರಗಳನ್ನು ವಿವರಿಸುವಾಗ ತಮ್ಮ ಅನುಭವಗಳನ್ನು, ತಾವು ಕಂಡುಕೊಂಡ ನಿದರ್ಶನಗಳನ್ನು ಬಳಸಿಕೊಂಡು ತಮ್ಮ ಸಂಶೋಧನೆ ಕುರಿತ ವಾದವನ್ನು ಮಂಡಿಸುತ್ತಾರೆ. ಅದು ಎಲ್ಲಿಂದಲೋ ಕಡ ತಂದದ್ದು ಅನ್ನಿಸುವುದಿಲ್ಲ ಅಥವಾ ಅದು ಕನ್ನಡದ ಅನುಭವಕ್ಕೆ ಬಾಹ್ಯವಾದುದೆಂದು ತೋರುವುದಿಲ್ಲ. ಆದರಿಂದಾಗಿ ಅವುಗಳಿಗೆ ಒಂದು ಬಗೆಯ ಅಧಿಕೃತತೆ ಬಂದುಬಿಡುತ್ತದೆ. ಸಮಾಜ ಸಂಶೋಧನೆ ಕುರಿತಂತೆ ಶಾಸ್ತ್ರೀಯವೆನ್ನಬಹುದಾದ (ಶಾಸ್ತ್ರೀಯವೆಂದರೆ ಜ್ಞಾನಶಿಸ್ತುವಿಗೆ ಸಂಬಂಧಿಸಿದ ಎನ್ನುವ ಪರಿಭಾಷೆಯಲ್ಲಿ) ಕೃತಿಗಳನ್ನು ಸೃಜನಶೀಲವಾಗಿ ಕನ್ನಡದಲ್ಲಿ ಬರೆಯುತ್ತಿರುವ ಕೆಲವೇ ಕೆಲವು ವಿದ್ವಾಂಸರಲ್ಲಿ ಡಾ|| ಎಂ. ಚಂದ್ರಪೂಜಾರಿ ಪ್ರಮುಖರು.

ಅವರು ಈ ಬಗ್ಗೆ ಇತ್ತೀಚೆಗೆ ಪ್ರಕಟಿಸಿರುವ **'ಸಂಶೋಧನೆ - ಏನು? ಏಕೆ? ಹೇಗೆ?'** (ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೯) ಕೃತಿಯಲ್ಲಿ ಸಮಾಜ, ಅರ್ಥ ಮತ್ತು ರಾಜಕಾರಣ ವಿಷಯಗಳನ್ನು ಕುರಿತಂತೆ ಸಂಶೋಧನೆ ಆರಂಭಿಸುವ ವಿದ್ಯಾರ್ಥಿಗಳಿಗೆ ಅದರ ಸೈದ್ಧಾಂತಿಕ ನೆಲೆಗಳ ಪರಿಚಯ ಮಾಡಿಸಿಕೊಡಲು ಪ್ರಯತ್ನಿಸಿದ್ದಾರೆ. ಅದರ ಶೀರ್ಷಿಕೆಯೇ ಸ್ಪಷ್ಟ ಪಡಿಸುವಂತೆ ಇದರಲ್ಲಿ ಅವರು ಸಂಶೋಧನೆ ಎಂದರೆ ಏನು, ಅದನ್ನು ಏಕೆ ಕೈಗೊಳ್ಳಬೇಕು

### ಸಂಶೋಧನೆ ಎಂದರೇನು ?

ಈ ವಿಷಯದಲ್ಲಿ ಜನರಲ್ಲಿ ಮುಗ್ಧ ವಿಚಾರಗಳಿರುವಂತೆ ಕಾಣುತ್ತದೆ. ಸಾಮಾನ್ಯವಾಗಿ ಸಂಶೋಧನೆ ಎಂದರೆ ಸತ್ಯವನ್ನು ಶೋಧಿಸುವುದು, ಪ್ರಯೋಗಾಲಯದಲ್ಲಿ ಪ್ರಯೋಗಗಳನ್ನು ಮಾಡುತ್ತಾ ಹೊಸದನ್ನು ಕಂಡು ಹಿಡಿಯುವುದು ಮುಂತಾದ ನಂಬಿಕೆಗಳಿವೆ. ಇದು ಸರ್ವೇಸಾಮಾನ್ಯವಾಗಿ ವಿಜ್ಞಾನ ಕುರಿತಂತೆ ಹೆಚ್ಚು ಬಳಕೆಯಾಗುತ್ತಿರುವ ಸಂಗತಿ. ಸತ್ಯವನ್ನು ಹುಡುಕುವುದು ಎಂಬ ನಿರ್ವಚನ ಒಂದು ಹಂತದವರೆಗೆ ಸರಿ. ಆದರೆ ನಿಜವಾಗಲೂ ಸಂಶೋಧನೆ ಎಂದರೇನು ಎಂಬುದನ್ನು ಇಲ್ಲಿ ಲೇಖಕರು ವಿಸ್ತೃತವಾಗಿ ವಿವರಿಸಿದ್ದಾರೆ.

ಹಾಗೂ ಅದನ್ನು ಹೇಗೆ ನಡೆಸಬೇಕು ಎಂಬ ಸಂಗತಿಗಳಿಗೆ ಉತ್ತರಿಸಿದ್ದಾರೆ. ಈ ಕೃತಿಯು ೨೬೧ ಪುಟಗಳಲ್ಲಿ ಹರಡಿಕೊಂಡಿದೆ. ಅದರಲ್ಲಿ ಸುಮಾರು ಮೂವತ್ತೆರಡು ಪುಟಗಳ ಕೊನೆ ಟಿಪ್ಪಣಿಗಳಿವೆ ಮತ್ತು ಹನ್ನೊಂದು ಪುಟಗಳ ಪರಾಮರ್ಶನ ಕೃತಿಗಳ ಪಟ್ಟಿಯಿದೆ. ಸಮಾಜ ಸಂಶೋಧನೆಯನ್ನು ಕೈಗೊಳ್ಳುವ ವಿದ್ಯಾರ್ಥಿಯು ಗಮನಿಸಬೇಕಾದ ಪ್ರಾಥಮಿಕವೆನ್ನಬಹುದಾದ ಸಂಗತಿಗಳನ್ನು ಅವರು ಇಲ್ಲಿ ವಿವರಿಸಿದ್ದಾರೆ ಮತ್ತು ಪ್ರಧಾನವೆನ್ನಬಹುದಾದ ಸಂಶೋಧನೆಯ ಸೈದ್ಧಾಂತಿಕ ಸಂಗತಿಗಳನ್ನು ಚರ್ಚಿಸಿದ್ದಾರೆ. ಉದಾಹರಣೆಗೆ ಆಕರಗಳನ್ನು ಹೇಗೆ ನೀಡಬೇಕು ಎಂಬುದನ್ನು ಕುರಿತಂತೆ ವಿವರವಾಗಿ ಚರ್ಚಿಸಿದ್ದಾರೆ. ಪಾಸಿಟಿವಿಸಮ್‌ನ ಮಿತಿಗಳು, ಹರ್ಮನೂಟಿಕ್ಸ್‌ನ ಹೆಚ್ಚುಗಾರಿಕೆ, ಪರಿಮಾಣಾತ್ಮಕ ಮತ್ತು ಗುಣಾತ್ಮಕ ಅಧ್ಯಯನ ಮುಂತಾದ ಸೈದ್ಧಾಂತಿಕ ಸಂಗತಿಗಳನ್ನು ವಿವರಿಸಿದ್ದಾರೆ. ಅದನ್ನೆಲ್ಲಾ ತಿಳಿಸಬೇಕಾ ಎಂಬ ಕೊಂಕುಗಳನ್ನು ವಿದ್ವಾಂಸರು ನುಡಿಯಬಹುದು. ಆದರೆ ಸಂಶೋಧನೆ ಎಂಬುದು ವೃತ್ತಿಪರ ಆಗಬೇಕಾದರೆ ಅಲ್ಲಿ ಇವೆಲ್ಲವೂ ಬಹಳ ಮುಖ್ಯ. ಅವರು ಈ ಕೃತಿಯಲ್ಲಿ ಹತ್ತು-ಹಲವು ಬಗೆಯ ಆಕರ ಮೂಲಗಳನ್ನು ಗುರುತಿಸಿ ಅವುಗಳಿಗೆ ಮೂಲ ನೀಡುವ ಕ್ರಮಗಳನ್ನು ನಿದರ್ಶನಗಳೊಂದಿಗೆ ವಿವರಿಸಿದ್ದಾರೆ. ಪ್ರಕಟಿತ ಕೃತಿಯಾದರೆ, ಅಪ್ರಕಟಿತ ಕೃತಿಯಾದರೆ, ಸರ್ಕಾರದ ವರದಿಯಾದರೆ, ಸಂಪಾದನೆ ಮಾಡಿದ ಕೃತಿಯಾದರೆ, ಒಂದು ಕೃತಿಗೆ ಒಬ್ಬರಿಗಿಂತ ಹೆಚ್ಚು ಲೇಖಕರಿದ್ದರೆ ಆಕರವನ್ನು ಹೇಗೆ ನೀಡಬೇಕು ಎಂಬುದನ್ನು ಅವರು ವಿವರಿಸಿದ್ದಾರೆ.

**ಸಂಶೋಧನೆ ಎಂದರೇನು ?**

ಈ ವಿಷಯದಲ್ಲಿ ಜನರಲ್ಲಿ ಮುಗ್ಧ ವಿಚಾರಗಳಿರುವಂತೆ ಕಾಣುತ್ತದೆ. ಸಾಮಾನ್ಯವಾಗಿ ಸಂಶೋಧನೆ ಎಂದರೆ ಸತ್ಯವನ್ನು ಶೋಧಿಸುವುದು, ಪ್ರಯೋಗಾಲಯದಲ್ಲಿ ಪ್ರಯೋಗಗಳನ್ನು ಮಾಡುತ್ತಾ ಹೊಸದನ್ನು ಕಂಡುಹಿಡಿಯುವುದು ಮುಂತಾದ ನಂಬಿಕೆಗಳಿವೆ. ಇದು ಸರ್ವೇಸಾಮಾನ್ಯವಾಗಿ ವಿಜ್ಞಾನ ಕುರಿತಂತೆ ಹೆಚ್ಚು ಬಳಕೆಯಾಗುತ್ತಿರುವ ಸಂಗತಿ. ಸತ್ಯವನ್ನು ಹುಡುಕುವುದು ಎಂಬ ನಿರ್ವಚನ ಒಂದು ಹಂತದವರೆಗೆ ಸರಿ. ಆದರೆ ನಿಜವಾಗಲೂ ಸಂಶೋಧನೆ ಎಂದರೇನು ಎಂಬುದನ್ನು ಇಲ್ಲಿ ಲೇಖಕರು ವಿಸ್ತೃತವಾಗಿ ವಿವರಿಸಿದ್ದಾರೆ. ಪ್ರಸ್ತುತ ಕೃತಿಯ 'ಸಂಶೋಧನೆ ಎಂದರೇನು ?' ಎಂಬ ಎರಡನೆಯ ಅಧ್ಯಾಯದಲ್ಲಿ ಅವರು ಇದನ್ನು ವಿವರವಾಗಿ ಪರಿಶೀಲಿಸಿದ್ದಾರೆ. ಸಂಶೋಧನೆ ಎಂದರೆ ಸತ್ಯದ ಹುಡುಕಾಟ, ಸಂಶೋಧನೆ ಎಂದರೆ ಹೊಸ ವಿಚಾರಗಳ ಶೋಧನೆ, ಸಂಶೋಧನೆಯೆಂದರೆ ಈಗಾಗಲೆ ಒಂದು ವಿಷಯ ಕುರಿತು ಹೇಳಿರುವುದಕ್ಕಿಂತ ಹೆಚ್ಚಿನದನ್ನು ಹೇಳುವುದು, ಸಂಶೋಧನೆಯೆಂದರೆ ಹೊಸ ಸಂಗತಿಗಳ ಆವಿಷ್ಕಾರ, ಸಂಶೋಧನೆಯೆಂದರೆ ಸಿದ್ಧ ವಿಧಾನಗಳಿಗೆ ಪ್ರತಿಯಾಗಿ ಹೊಸ ವಿಧಾನದಿಂದ ಸಂಶೋಧನಾ ಕ್ಷೇತ್ರವನ್ನು ಪ್ರವೇಶಿಸುವುದು, ಸಂಶೋಧನೆಯೆಂದರೆ ಈಗಾಗಲೆ ಆಗಿರುವ ಅಧ್ಯಯನಗಳನ್ನು ವಿಮರ್ಶೆ ಮಾಡಿ ಅದರ ಕೊರತೆಗಳನ್ನು ತುಂಬಲು ಪ್ರಯತ್ನಿಸುವುದು, ಅಧ್ಯಯನಗಳ ಮೂಲಕ ಸರ್ಕಾರಕ್ಕೆ ನೀತಿ ನಿರ್ದೇಶನ ನೀಡುವುದು ಮುಂತಾದವು, ಹೀಗೆ ಅವರು ಸಂಶೋಧನೆಯ ಅರ್ಥ ವಿನ್ಯಾಸವನ್ನು ಹತ್ತಾರು ವಿಧದಲ್ಲಿ ವಿವರಿಸಲು ಪ್ರಯತ್ನಿಸಿದ್ದಾರೆ. ವಾಸ್ತವವಾಗಿ ಇಲ್ಲಿ ಲೇಖಕರು ಸಂಶೋಧನೆ ಎಂದರೇನು ಎಂಬುದಕ್ಕಿಂತ ಸಂಶೋಧನೆ ಹೇಗೆ ಎಂಬುದಕ್ಕೆ ಒತ್ತು ನೀಡಿದ್ದಾರೆ. ಅವರ ಪ್ರಕಾರ ಸಂಶೋಧನೆ ಹೇಗೆ ಎಂಬ ಸಂಗತಿಯನ್ನು ಕುರಿತ ವಿಸ್ತೃತವಾದ ಚರ್ಚೆಯು ಸಂಶೋಧನೆ ಎಂದರೇನು ಎಂಬುದಕ್ಕೆ ಉತ್ತರವನ್ನು ಒಳಗೊಂಡಿರುತ್ತದೆ ಎಂಬುದಾಗಿದೆ. ಅವರ ಪ್ರಕಾರ "ಈಗಾಗಲೆ ಸ್ಥಾಪಿತವಾದ ಸತ್ಯ ಅಥವಾ ವಾದಗಳೊಂದಿಗೆ ವಾಗ್ವಾದ ನಡೆಸಿ ಒಂದು ಒಪ್ಪಿತ ಚೌಕಟ್ಟಿನೊಳಗೆ ತಮ್ಮ ಸತ್ಯವನ್ನು ಅಥವಾ ವಾದವನ್ನು ಸ್ಥಾಪಿಸಲು ಪ್ರಯತ್ನಿಸುವುದು ಹಾಗೂ ಸ್ಥಾಪಿಸುವ ಪ್ರಕ್ರಿಯೆಯನ್ನು ಅರ್ಥಮಾಡಿಕೊಳ್ಳುವುದು ಸಂಶೋಧನೆ."

**ನಿರೂಪಣಾ ವಿಧಾನ**

ಈ ಕೃತಿಯಲ್ಲಿ ಲೇಖಕರು ಅಳವಡಿಸಿಕೊಂಡಿರುವ ನಿರೂಪಣಾ ವಿಧಾನವು ವಿಶಿಷ್ಟವಾಗಿದೆ. ವಿಷಯವನ್ನು ಓದುಗರಿಗೆ ಮನದಟ್ಟು ಮಾಡಿಕೊಡುವ ಸಲುವಾಗಿ ಲೇಖಕರು ಪಠ್ಯದಲ್ಲಿ ಮತ್ತೆ ಮತ್ತೆ ನಿದರ್ಶನಗಳನ್ನು ಕೊಡುವ ವಿಧಾನವನ್ನು ಅನುಸರಿಸಿದ್ದಾರೆ. ಇಡೀ ಪುಸ್ತಕ ನಿದರ್ಶನಗಳ ವಿವರಣೆಯಿಂದ ತುಂಬಿಹೋಗಿದೆ. ಈ ನಿದರ್ಶನಗಳು ಅವರು ತಮ್ಮ ಸಂಶೋಧನೆಯ ಸಂದರ್ಭದಲ್ಲಿ ಕಂಡುಕೊಂಡ ಸಂಗತಿಗಳೇ ಆಗಿರುವುದು ವಿಶೇಷವಾಗಿದೆ. ತನ್ನ ಅನುಭವಕ್ಕೆ ಮೀರಿದ್ದನ್ನು ಅಥವಾ ಕಡ ತಂದದ್ದನ್ನು ಇಲ್ಲಿ ಅವರು ನಿದರ್ಶನವಾಗಿ ನೀಡುವುದಿಲ್ಲ. ಈ ಕಾರಣದಿಂದಾಗಿಯೇ ಕೃತಿಯಲ್ಲಿ ವಿಷಯವನ್ನು ವಿವರವಾಗಿ ಓದುಗರಿಗೆ ಮನವರಿಕೆ ಮಾಡಿಕೊಡಲು ಅವರು ಉದಾಹರಣೆಗಳನ್ನು ಹೆಚ್ಚಾಗಿ ನೆಮ್ಮಿಕೊಂಡಿದ್ದಾರೆ. ಕುಡಿತದ ಒಂದು ಉದಾಹರಣೆಯಿದೆ (ಪುಟ ೧೯೩), ದಕ್ಷಿಣ ಕನ್ನಡ ಜಿಲ್ಲೆಯು ಪರಶುರಾಮನ



ನೀರಾ ರಾಡಿಯಾ

ಈಕೆ ಮಾಡಿದಳು ಲಾಬಿಯಲೇ ಹಲವಾರು ಕೋಟಿ,
ಎಲ್ಲ ಮಂತ್ರಿಗಳನು ತೆಕ್ಕೆಯಲಿ ಇಟ್ಟ ಇವಳು ಬಲು ಸೂಟಿ,
ಟಾಟಾ, ಅಂಬಾನಿ ಎಲ್ಲರ ಗೆಳತಿ -- ಹೆಸರು 'ನೀರಾ ರಾಡಿಯಾ',
ಈಗ ನಮ್ಮ ಮಂತ್ರಿಗಳು ಎರೆಚಾಡುತ್ತಿರುವುದು ನೀರಾ ? ರಾಡಿಯಾ ?

**ಡಿ. ಟಿ. ಲೋಹಿತ್**
'ಸ್ಕಂದಗಿರಿ' ಪದ್ಮರಾವ್‌ನಗರ, ಸಿಕಂದರಾಬಾದ್ - ೫೦೦೦೬೧

ಸೃಷ್ಟಿಯೆಂಬ ಸಿದ್ಧ ಸತ್ಯವನ್ನು ಒಡೆಯುವ ಉದಾಹರಣೆಯಿದೆ (ಪುಟ ೧೪೦), ಹೊಟೇಲುಗಳಲ್ಲಿ ಪರಿಶಿಷ್ಟರಿಗೆ ಪ್ರತ್ಯೇಕವಾಗಿ ಕಾಫಿ, ತಿಂಡಿ ಮುಂತಾದವುಗಳನ್ನು ನೀಡುವ ಕ್ರಮವು ನಮ್ಮ ಗ್ರಾಮೀಣ ಪ್ರದೇಶದಲ್ಲಿ ಯಾಕೆ ಅನಿಷ್ಟ ಅಥವಾ ಸಮಸ್ಯೆಯಾಗಿಲ್ಲ ಎಂಬ ಉದಾಹರಣೆಯಿದೆ. ಕುರಿಗಳನ್ನು ಎಣಿಸುವ ಉದಾಹರಣೆಯು ರೋಚಕವಾಗಿದೆ. ಅವರು ತಮ್ಮ ವಿಷಯಕ್ಕೆ ಸಂಬಂಧಿಸಿದ ಸಂಗತಿಗಳನ್ನು ಮನದಟ್ಟುಮಾಡಿಕೊಡಲು ವಿವರವಾಗಿ ವಿಚಾರವನ್ನು ಮಂಡಿಸುತ್ತಾರೆ. ಇಲ್ಲಿನ ಸಮಸ್ಯೆಯೆಂದರೆ ಲೇಖಕರು ಒಂದು ಅಧ್ಯಾಯದಲ್ಲಿ ವಿಷಯವನ್ನು ಮಂಡಿಸುವಾಗ ಉದ್ದಕ್ಕೆ ಹೇಳಿಕೊಂಡು ಹೋಗುತ್ತಾರೆ. ಈ ಕೃತಿಯು ೨೬೧ ಪುಟಗಳಲ್ಲಿ ಹರಡಿಕೊಂಡಿದೆ. ಅದರಲ್ಲಿ ಮೊದಲ ೧೨೫ ಪುಟಗಳಲ್ಲಿ ಮಂಡಿತವಾಗಿರುವ ಮೊದಲ ಐದು ಅಧ್ಯಾಯಗಳಲ್ಲಿ, ಅಧ್ಯಾಯಗಳ ಶೀರ್ಷಿಕೆ ಬಿಟ್ಟರೆ ಒಂದೂ ಉಪಶೀರ್ಷಿಕೆಯಿಲ್ಲ. ತಾವು ಹೇಳಬೇಕೆಂದಿರುವ ವಿಷಯವನ್ನು ವಿವಿಧ ಭಾಗಗಳನ್ನಾಗಿ ವಿಂಗಡಿಸಿಕೊಂಡು ಮಂಡಿಸಿದರೆ ಅದನ್ನು ಸುಲಭವಾಗಿ ಓದುಗರು ಅರ್ಥಮಾಡಿಕೊಳ್ಳಬಹುದು. ಅಲ್ಲದಿದ್ದರೆ ಒಂದು ಪ್ರಬಂಧವನ್ನು ಓದಿಕೊಂಡು ಹೋಗಬೇಕಾದರೆ ಎಲ್ಲೋ ಒಂದು ಕಡೆ ಪರಿಕಲ್ಪನೆಯೋ ಅಥವಾ ಸಿದ್ಧಾಂತವೋ ಅರ್ಥವಾಗದಿದ್ದಾಗ ಅದರ ವಿವರಣೆಗೆ ಮತ್ತೆ ಪ್ರಬಂಧದ ಹಿಂದಿನ ಭಾಗವನ್ನು ಹುಡುಕಿಕೊಂಡು ಹೋಗಬೇಕಾಗುತ್ತದೆ.

ಇಲ್ಲಿ ಲೇಖಕರು ನ್ಯಾಯಾಲಯದ ಪರಿಭಾಷೆಯಲ್ಲಿ ಉದಾಹರಣೆಗೆ ವಾದ, ಸಾಕ್ಷಿ, ಪುರಾವೆ, ಕಕ್ಷಿದಾರ, ಪ್ರತಿವಾದಿ-ಪ್ರತಿವಾದ ಮುಂತಾದ ನುಡಿಗಟ್ಟನ್ನು ಬಳಸಿ ಪ್ರಸ್ತುತ ಕೃತಿಯನ್ನು ಕಟ್ಟಿದ್ದಾರೆ. ಇಡೀ ಕೃತಿಯಲ್ಲಿ ಇದು ಪುನರಾವರ್ತನೆಯಾಗುತ್ತಿರುತ್ತದೆ. ತಮ್ಮ ವಾದವನ್ನು ಮಂಡಿಸಲು ಅವರು ಒಂದು ಕ್ರಮವನ್ನು (ಶೈಲಿಯನ್ನು) ಕಂಡುಕೊಂಡಿದ್ದಾರೆ. ಅದು ಸರಿ. ಆದರೆ ಇಲ್ಲಿರುವ ಸಮಸ್ಯೆಯೆಂದರೆ ಸಂಶೋಧನೆಯ ಅಂಗೋಪಾಂಗಗಳನ್ನು ವಿವರಿಸಲು ಈ ಪರಿಭಾಷೆಯು ಎಷ್ಟರಮಟ್ಟಿಗೆ ಸಮರ್ಥವಾಗಿದೆ ಎಂಬುದನ್ನು ಪರಿಶೀಲಿಸುವುದು ಸೂಕ್ತ. ನ್ಯಾಯಾಲಯಗಳಲ್ಲಿ ವಕೀಲರು ತಮ್ಮ ಕಕ್ಷಿದಾರರ ಪರವಾಗಿ ವಾದವೊಂದನ್ನು ಮಂಡಿಸುತ್ತಾರೆ, ನಿಜ. ಅದಕ್ಕಾಗಿ ಅವರು ಸಾಕ್ಷಿ, ಪುರಾವೆಗಳನ್ನು ತಮ್ಮ ವಾದ ಸಮರ್ಥನೆ ನೀಡಲು ಬಳಸಿಕೊಳ್ಳುತ್ತಾರೆ. ಪ್ರತಿವಾದಿಯ ವಾದವನ್ನು ಸೋಲಿಸಲು ಅವರು ತಮ್ಮ ವಾದಕ್ಕೆ ಬಲವಾದ ಆಧಾರಗಳನ್ನು ಬಳಸಿಕೊಳ್ಳುತ್ತಾರೆ. ಸಂಶೋಧಕನ ಕೆಲಸವೂ ಒಂದು ರೀತಿಯಲ್ಲಿ ವಕೀಲರ ಕೆಲಸದ ರೀತಿಯದ್ದಾಗಿದೆ ಎಂಬುದು ಲೇಖಕರ ಅಭಿಮತ. ವಕೀಲರಿಗೆ ಮುಖ್ಯ ಉದ್ದೇಶ ತಮ್ಮ ಕಕ್ಷಿದಾರರಿಗೆ ಗೆಲುವು ತಂದುಕೊಡುವುದು. ಅಲ್ಲಿ ಅವರು ಸೋತರೆ ಅದು ಅವರ ವೃತ್ತಿಯ ಮೇಲೆ ದುಷ್ಪರಿಣಾಮಬೀರುತ್ತದೆ. ಗೆದ್ದರೆ ಅವರ ಪ್ರತಿಷ್ಠೆಯು ಅಧಿಕವಾಗುತ್ತದೆ. ಆದರೆ ಸಮಾಜ ಸಂಶೋಧನೆಯಲ್ಲಿ ಗೆಲ್ಲುವ ಅಥವಾ ಸೋಲುವ (ವಿಸ್ತೃತವಾದ ಮತ್ತು ವಿಶಾಲವಾದ ಅರ್ಥದಲ್ಲಿ) ಸಂಗತಿ ಮುಖ್ಯವಾಗುವುದಿಲ್ಲ. ಇಲ್ಲಿ ಸೋತರೂ ಜಯವೇ, ಗೆದ್ದರೂ ಜಯವೇ! ಏಕೆಂದರೆ ಇಲ್ಲಿ ಸಂಶೋಧಕನ ಅಥವಾ ಸಂಶೋಧನೆಯ ಕಾಳಜಿ ಸಮಸ್ಯೆಯನ್ನು ಅರ್ಥಮಾಡಿಕೊಳ್ಳುವುದಾಗಿರುತ್ತದೆ ಮತ್ತು ಅದರಲ್ಲಿ ಸೋಲು- ಗೆಲುವಿನ

# ಪ್ರವಾಸಿಗರು



ಪ್ರೇಕ್ಷಣೀಯ ಸ್ಥಳಗಳನ್ನು ಗುರುತಿಸಿ
ತಿಂಗಳ ಮುಂದೆಯೇ ವಿಮಾನ, ರೈಲು
ಎಸಿ ಬಸ್ಸುಗಳ ಸೀಟು ಕಾಯ್ದಿರಿಸಿ
ದೂರದಲ್ಲಿರುವವರ ಜೊತೆ ಮಾತನಾಡಲು
ವಿವಿಧ ಮೊಬೈಲ್ ಕಂಪನಿಗಳ
ಹ್ಯಾಂಡ್‌ಸೆಟ್
ಸಿಮ್ ಕಾರ್ಡ್‌ಗಳನ್ನು ಪಡೆದು
ತಕ್ಷಣಕ್ಕೆ ಬೇಕಾಗುವ ಹಣಕ್ಕಾಗಿ ಎ.ಟಿ.ಎಂ
ಕಾರ್ಡುಗಳನ್ನು ಬಳಸಿ
ಸಮಯ ಕಳೆಯಲಿಕ್ಕಾಗಿ ಬಿಸ್ಕತ್
ಕುರ್‌ಕುರೆಗಳ ಮೊರೆಹೋಗಿ
ತಂಗಿದ ಸ್ಥಳದಲ್ಲಿ ಬೀರು ಬ್ರ್ಯಾಂಡಿ
ವಿಸ್ಕಿ ರಮ್ಮುಗಳ ಹೀರುತ್ತಾ
ರುಚಿ ರುಚಿಯಾದ ಚಿಕನ್ ಮಟನ್
ಫಿಶ್‌ಫ್ರೈಗಳನ್ನು ಸವಿಯುತ್ತಾ
ಸ್ಟಾರು ಹೋಟೆಲುಗಳಲ್ಲಿ ತಂಗುತ್ತಾ
ಪ್ರವಾಸ ಮಾಡುವ ಪ್ರವಾಸಿಗರಲ್ಲ.

ಗುರುತಿಸಿದ ಸ್ಥಳಗಳಿಗೆ
ಹೊಟ್ಟೆ ಹೊರೆಯಲು
ಹುಟ್ಟ ಬಟ್ಟೆಯ ಮೇಲೆ
ಬಸ್, ಲಾರಿ, ರೈಲು, ಎನ್ನದೇ
ಸಿಕ್ಕ ವಾಹನಗಳಲ್ಲಿ ಗಂಟು
ಮೂಟೆಗಳನ್ನು ಕಟ್ಟಿಕೊಂಡು
ಒಬ್ಬರ ಮೇಲೊಬ್ಬರು ಬೀಳುತ್ತಾ
ಹಗಲು ಕತ್ತಲು ಎನ್ನದೇ
ಮಕ್ಕಳು ಮರಿಗಳನ್ನು
ಪಾತ್ರೆಪಗಡಿಗಳನ್ನು ಜೀವಕ್ಕಿಂತ
ಹೆಚ್ಚಾಗಿ ಜೋಪಾನಮಾಡಿ
ತಂಗಿದ ಸ್ಥಳದಲ್ಲಿ ತಂಗಳನ್ನವ ತಿಂದು
ಪ್ರಯಾಣಿಸುವ ಪ್ರವಾಸಿಗರು.

**ಈಶ್ವರಪ್ಪ ಕಟ್ಟಿಮನಿ**
ಮನೆ ನಂ. ೪೮, ಸಾಯಿರಾಮನಗರ, ರಾಘವೇಂದ್ರ ಲೇಔಟ್
ಹಳೇ ಆಕಾಶವಾಣಿ ವಿತರಣಾ ಕೇಂದ್ರ ಹಿಂದುಗಡೆ
ಜೇವರ್ಗಿ ರಸ್ತೆ, ಕಲಬುರ್ಗಿ

ಸಂಗತಿ ಮುಖ್ಯವಾಗುವುದಿಲ್ಲ. ಈ ಅರ್ಥ ವಿನ್ಯಾಸ ಪ್ರಸ್ತುತ ಕೃತಿಯಲ್ಲಿ ಅಗೋಚರವಾಗಿ ಹರಿದಿದ್ದರೂ ನ್ಯಾಯಾಲಯದ ಪರಿಭಾಷೆಯನ್ನು ತುಂಬ ಹಿಗ್ಗಿಸಿಬಿಟ್ಟರೆ ಅದು ನಮ್ಮನ್ನು ಎಲ್ಲೆಲ್ಲಿಗೋ ಒಯ್ಯಬಹುದಾದ ಅಪಾಯವಿದೆ.

**ಜ್ಞಾನದ ಉತ್ಪಾದನೆ**

'ಜ್ಞಾನದ ಉತ್ಪಾದನೆ' ಎಂಬ ನುಡಿಗಟ್ಟಿನಲ್ಲಿ ಉತ್ಪಾದನೆಯೆಂಬುದನ್ನು ಜ್ಞಾನಕ್ಕೆ ಸಂಬಂಧಿಸಿದಂತೆ ಉಪಯೋಗಿಸುವುದರ ಬಗ್ಗೆ ನಮ್ಮ ವಿದ್ವಾಂಸರಲ್ಲಿ ಅನೇಕರಿಗೆ ಮುಜುಗರವಿದ್ದಂತೆ ಕಾಣುತ್ತದೆ. ಇದನ್ನು ಬಳಸಿದಾಗ ನನ್ನ ಅನೇಕ ಸಹೋದ್ಯೋಗಿಗಳು ಮುಜುಗರ ಪಟ್ಟಿದ್ದನ್ನು ಕಂಡಿದ್ದೇನೆ. ಅದಕ್ಕೆ ಪ್ರತಿಯಾಗಿ ಜ್ಞಾನವನ್ನು 'ಸೃಷ್ಟಿಸುವುದು' ಎಂಬ ಪದವನ್ನು ಬಳಸುವುದಕ್ಕೆ ಜನರು ಇಷ್ಟಪಡುತ್ತಾರೆ. ಇದು ಬಹಳ ವಿಚಿತ್ರವಾದ ಸಂಗತಿಯಾಗಿದೆ. ಹೀಗೆ ಮುಜುಗರ ಪಡುವವರ ಪ್ರಕಾರ ಉತ್ಪಾದನೆಯೆಂಬುದು 'ಸರಕು'ಗಳಿಗೆ ಬಳಸುವ ನುಡಿ. ಜ್ಞಾನವನ್ನು ನಾವು ಸೃಷ್ಟಿಸುತ್ತೇವೆ ವಿನಾ ಉತ್ಪಾದಿಸುವುದಿಲ್ಲ. ಇದು ವಿಚಿತ್ರವಾದ ಸಂಗತಿಯಾಗಿದೆ. ಈ ಬಗೆಯ ಚಿಂತನೆಯಲ್ಲಿ ಸರಕು ಎಂಬುದು ಜ್ಞಾನವೆನ್ನುವುದಕ್ಕಿಂತ ಕಡಿಮೆಯದೆಂಬ ಭಾವನೆಯಿರುವಂತೆ ಕಾಣುತ್ತದೆ. ಡಾ॥ಎಂ. ಚಂದ್ರಪೂಜಾರಿ ಅವರು ಜ್ಞಾನದ ಉತ್ಪಾದನೆಯೆಂಬ ನುಡಿಯನ್ನು ಬಳಸಿದ್ದಾರೆ.

'ಸಂಶೋಧನೆ ಹೇಗೆ ?' ಎಂಬ ಅಧ್ಯಾಯದಲ್ಲಿ ಲೇಖಕರು ಜ್ಞಾನದ ಉತ್ಪಾದನೆ ಕುರಿತಂತೆ ವಿವರವಾಗಿ ಚರ್ಚಿಸಿದ್ದಾರೆ. ಜ್ಞಾನವೆನ್ನುವುದು ಸಿದ್ಧವಾದ ಸರಕಲ್ಲ ಅಥವಾ 'ಅದೋ ಅಲ್ಲಿದೆ' ಎಂಬಂತಹ ಸಂಗತಿಯಲ್ಲ. ಅದನ್ನು ಜನರು ಪ್ರಕೃತಿಯೊಂದಿಗೆ ಅನುಸಂಧಾನ ಮಾಡುವುದರ ಮೂಲಕ ಉತ್ಪಾದಿಸುತ್ತಿರುತ್ತಾರೆ. ಅದು ನಾವು ತುಂಬಿಕೊಂಡು ಬಿಡಬಹುದಾದ ಸ್ಟಾಕಲ್ಲ. ಪ್ರತಿಯೊಬ್ಬರೂ ತಮ್ಮ ಅನುಭವಗಳಿಂದ, ತಾವು ಬದುಕಿನಲ್ಲಿ ನಡೆಸಿದ ಪ್ರಯತ್ನ-ಪ್ರಯೋಗಗಳಿಂದ ಕಂಡುಕೊಂಡ ಸಂಗತಿಯೇ ಜ್ಞಾನ. ಜ್ಞಾನವೆಂಬುದು ಉಪದೇಶವಲ್ಲ. ಜ್ಞಾನವೆನ್ನುವುದು ಸ್ಟಾಕು ಎನ್ನುವುದಾದರೆ ಅದನ್ನು ಬಾಚಿ ತುಂಬಿಕೊಳ್ಳಬಹುದು. ಆದರೆ ಅದು ಸಿದ್ಧವಾದ ಸಂಗತಿಯಲ್ಲ. ಗಾಂಧಿ ತನ್ನ ಆತ್ಮಚರಿತ್ರೆಯನ್ನು 'ಸತ್ಯದೊಡನೆ ನಡೆಸಿದ ಪ್ರಯೋಗ' ಅಂತ ಕರೆಯುತ್ತಾರೆ. ಇತ್ತೀಚೆಗೆ ಸಂಸ್ಕೃತ-ವೇದ ವಿಶ್ವವಿದ್ಯಾಲಯವನ್ನು ಆರಂಭಿಸುವ ಸಂದರ್ಭದಲ್ಲಿ ನಡೆದ ವಾಗ್ವಾದದಲ್ಲಿ ಅದರ ಸಮರ್ಥಕರು ಜ್ಞಾನವೆನ್ನುವುದೆಲ್ಲ ವೇದಗಳಲ್ಲಿದೆ, ಅದಕ್ಕಾಗಿ ಜ್ಞಾನವಿಹೀನರಿಗೆ ಈ ವಿಶ್ವವಿದ್ಯಾಲಯ ಜ್ಞಾನಚಕ್ಷುವನ್ನು ನೀಡುತ್ತದೆ ಅನ್ನುವ ಮಾತನಾಡಿದರು. ಇದು ಒಪ್ಪತಕ್ಕ ಮಾತಲ್ಲ. ಜ್ಞಾನವು ಕಂಡುಕೊಳ್ಳಬೇಕಾದ ಸಂಗತಿಯೇ ವಿನಾ ಸಿದ್ಧ ಸರಕಲ್ಲ. ಜ್ಞಾನವೆನ್ನುವುದು ಜನರು ಕಟ್ಟಿದ ಒಂದು ಪ್ರಣಾಳಿಕೆ. ಅದನ್ನು ನಾವು ಸೃಷ್ಟಿಸುವುದಿಲ್ಲ. ನಾವು ಅದನ್ನು ಕಟ್ಟುತ್ತೇವೆ. ನಿಜ, ಅದೊಂದು ಬೌದ್ಧಿಕ ಕ್ರಿಯೆ. ಅದು ಮಾನಸಿಕವಾದ ಒಂದು ಪ್ರಕ್ರಿಯೆ. ಅಂದಮಾತ್ರಕ್ಕೆ ಅದನ್ನು ನಾವು ಸೃಷ್ಟಿಸುತ್ತೇವೆ ಎಂಬುದರಲ್ಲಿ ಅರ್ಥವಿಲ್ಲ. ಜ್ಞಾನವನ್ನು ಒಂದೋ ನಾವು ಕಟ್ಟುತ್ತೇವೆ ಅಥವಾ ಉತ್ಪಾದಿಸುತ್ತೇವೆ.

**ಜ್ಞಾನವು ಜನರ ಪ್ರಜ್ಞೆಯ ಭಾಗವಾಗುವುದು ಹೇಗೆ ?**

ಸಮಾಜ, ಅರ್ಥ ಮತ್ತು ರಾಜಕಾರಣ ಕುರಿತಂತೆ ಸಿದ್ಧಾಂತಗಳನ್ನು, ಪ್ರಣಾಳಿಕೆಗಳನ್ನು ರೂಪಿಸುವುದು ಮುಖ್ಯ, ನಿಜ. ಆದರೆ ಅಲ್ಲಿ ಮಂಡಿತವಾದ ವಿಚಾರಗಳು ಜನರ ಪ್ರಜ್ಞೆಯ ಭಾಗವಾಗಬೇಕು. ಆಗ ಮಾತ್ರ ಸಾಮಾಜಿಕ ಬದಲಾವಣೆ ಸಾಧ್ಯವೆಂಬುದು ಲೇಖಕರ ಅಭಿಮತವಾಗಿದೆ. ಆಗ ಸಮಾಜದಲ್ಲಿ ಪ್ರಗತಿಗಾಮಿ ವಿಚಾರಗಳು ಮೇಲುಗೈ ಸಾಧಿಸಿಕೊಳ್ಳುತ್ತವೆ. ಐಡಿಯಾ, ವಿಚಾರ, ಮೌಲ್ಯ, ಹೊಸ ಸಿದ್ಧಾಂತಗಳು ಮುಂತಾದವು ಜನರ ಪ್ರಜ್ಞೆಯ ಭಾಗವಾಗುವಂತೆ ಮಾಡುವ ದಿಶೆಯಲ್ಲಿ ಸಂಸ್ಥೆಗಳ ಪಾತ್ರ ನಿರ್ಣಾಯಕವಾದುದಾಗಿದೆ. ಒಂದು ಸಮಾಜದಲ್ಲಿ ಸಿದ್ಧಾಂತಗಳು, ಪ್ರಣಾಳಿಕೆಗಳು, ವಿಚಾರ, ಜನರ ಪ್ರಜ್ಞೆಯ ಭಾಗವಾಗುವಂತೆ ಮಾಡುವಲ್ಲಿ ಅಲ್ಲಿನ ಸಂಸ್ಥೆಗಳ ಪಾತ್ರ ಹಿರಿದು. ಒಂದು ಸಮಾಜದ ಸಾಂಸ್ಥಿಕ ವ್ಯವಸ್ಥೆಯ ಅರಿವಿಲ್ಲದೆ ಆ ಸಮಾಜವನ್ನು ಅರ್ಥಮಾಡಿಕೊಳ್ಳುವುದು ಅಸಾಧ್ಯ. ಈ ವಿಚಾರವನ್ನು ಸ್ಥೂಲವಾಗಿ ಲೇಖಕರು ಇಲ್ಲಿ ಚರ್ಚಿಸಿದ್ದಾರೆ. ಆದರೆ ನಮ್ಮಲ್ಲಿರುವ ಸಂಸ್ಥೆಗಳು ಪಟ್ಟಭದ್ರರ ವಿಚಾರಗಳನ್ನು ಜನರ ಪ್ರಜ್ಞೆಯಲ್ಲಿ ಗಟ್ಟಿಯಾಗಿ ಬೇರೂರುವಂತೆ ಮಾಡುತ್ತವೆ ವಿನಾ ಸಮಾಜ ವಿಜ್ಞಾನಗಳಲ್ಲಿ ನಡೆಯುವ ಸಂಶೋಧನೆಯ ಫಲಿತಗಳನ್ನು ಪ್ರಸರಣ ಮಾಡುವುದಿಲ್ಲ. ಈ ಪಟ್ಟಭದ್ರರ ವಿಚಾರಗಳನ್ನು ಸಮಾಜದಲ್ಲಿ ಶೈಕ್ಷಣಿಕ ಸಂಸ್ಥೆಗಳು, ಸರಕಾರಿ ಸಂಸ್ಥೆಗಳು, ಸರ್ಕಾರೇತರ ಸಂಸ್ಥೆಗಳು, ಚಳುವಳಿಗಳು, ಸಿವಿಲ್ ಸೊಸೈಟಿ, ಮಾಧ್ಯಮಗಳು,

ಮಠಗಳು, 'ಬಾಬಾ-ಸಾಧು-ಸಂತ'ರು ಪ್ರತಿನಿಧಿಸುವ ಸಂಘಟನೆಗಳು ಮುಂತಾದವು ನಿರಂತರವಾಗಿ ಜನರಿಗೆ ಪಟ್ಟಭದ್ರ ವಿಚಾರಗಳನ್ನು ಪ್ರಚುರಪಡಿಸುತ್ತಿರುತ್ತವೆ. ಇದಕ್ಕೆ ಪ್ರತಿಯಾಗಿ ವೈಜ್ಞಾನಿಕ, ವೈಚಾರಿಕ, ಸಂಶೋಧನೆಯ ಫಲಿತಗಳ ನೆಲೆಯಿಂದ ರೂಪುಪಡೆದ ವಿಚಾರ ಮುಂತಾದವುಗಳನ್ನು ಜನರ ಪ್ರಜ್ಞೆಯ ಭಾಗವನ್ನಾಗಿ ಮಾಡುವುದಿಲ್ಲ. ಸಮಾಜ ಸಂಶೋಧಕರ ಜವಾಬುದಾರಿಯೆಂದರೆ ನಾವು ಸಂಶೋಧಿಸುವ ವಿಚಾರಗಳು ಜನರ ಪ್ರಜ್ಞೆಯ ಭಾಗವಾಗುವಂತೆ ಮಾಡಬಲ್ಲ ಸಂಸ್ಥೆಗಳನ್ನು ಕಟ್ಟುವುದಾಗಿದೆ. ಅದಕ್ಕೆ ಪೂರ್ವದಲ್ಲಿ ಸಂಶೋಧನೆಯ ಮೂಲ ವಿಚಾರಗಳನ್ನು ಅರಿತುಕೊಳ್ಳಬೇಕಾಗುತ್ತದೆ. ಈ ಉದ್ದೇಶದಿಂದ ಲೇಖಕರು ಪ್ರಸ್ತುತ ಕೃತಿಯನ್ನು ರಚಿಸಿರುವಂತೆ ಕಾಣುತ್ತದೆ. ಮೊದಲ ಓದಿಗೆ ಪ್ರಸ್ತುತ ಕೃತಿಯು ಸಂಶೋಧನೆಯನ್ನು ನಡೆಸಲು ಉದ್ಯುಕ್ತರಾದವರಿಗೆ ಕೇವಲ ಮಾರ್ಗದರ್ಶನ ನೀಡಬಲ್ಲದು ಎಂಬಂತೆ ಕಾಣುತ್ತದೆ. ಆದರೆ ಕೃತಿಯನ್ನು ಸೂಕ್ಷ್ಮವಾಗಿ ಮತ್ತು ಉದ್ದೇಶ ಪೂರ್ವಕವಾಗಿ ಅಧ್ಯಯನ ಮಾಡಿದರೆ ಅದು ಜನರಲ್ಲಿ ಒಂದು ಧೋರಣೆಯನ್ನು ರೂಪಿಸುವ ಕೆಲಸ ಮಾಡುತ್ತದೆ ಎಂಬುದು ಮನವರಿಕೆಯಾಗುತ್ತದೆ. ಇದು ಪ್ರಸ್ತುತ ಕೃತಿಯ ಹೆಗ್ಗಳಿಕೆಯಾಗಿದೆ. ಲೇಖಕರ ಉದ್ದೇಶವು ಅದೇ ಆಗಿದೆ. ನಮ್ಮಂತಹ ಸಮಾಜದಲ್ಲಿ ಸಮಾಜ ಸಂಶೋಧನೆಯ, ಅದರಲ್ಲೂ ಕನ್ನಡದಲ್ಲಿ ನಡೆಸುವ ಸಂಶೋಧನೆಯ ಜವಾಬುದಾರಿ ಎರಡು ಬಗೆಯದಾಗಿರುತ್ತದೆ. ಮೊದಲನೆಯದಾಗಿ, ಅದು ಶುದ್ಧ ಸಂಶೋಧನೆ. ಎರಡನೆಯದಾಗಿ, ಜನರ ವೈಚಾರಿಕ ಧೋರಣೆಯನ್ನು ರೂಪಿಸುವುದು ಮತ್ತು ಅದಕ್ಕೆ ಅಗತ್ಯವಾದ ಸಂಸ್ಥೆಗಳನ್ನು ಬಳಸಿಕೊಳ್ಳುವುದು. ಅಸ್ತಿತ್ವದಲ್ಲಿರುವ ಸಂಸ್ಥೆಗಳನ್ನು ನಮ್ಮ ಉದ್ದೇಶಕ್ಕೆ ಬಳಸಿಕೊಳ್ಳಲು ಆಗದಿದ್ದರೆ ಅದಕ್ಕೆ ಅಗತ್ಯವಾದ ಸಂಸ್ಥೆಗಳನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಈ ಕಾರಣದಿಂದ ನಮ್ಮಂತಹ ಸಮಾಜದಲ್ಲಿ ಸಂಶೋಧನೆಯು ಸರಳವಾದ ಅಥವಾ ಸುಲಭವಾದ ಸಂಗತಿಯಲ್ಲ. ಅದು ಸಂಶೋಧನೆ ಮಾತ್ರವಲ್ಲ, ಸಂಶೋಧನಾ ಸಂಸ್ಕೃತಿಯನ್ನು ಹುಟ್ಟುಹಾಕುವ ಜವಾಬುದಾರಿಯಾಗಿದೆ. ಸಾಮಾಜಿಕ ಸಂಸ್ಥೆಗಳನ್ನು ಕಟ್ಟುವ ಜವಾಬುದಾರಿಯಾಗಿದೆ. ಸಂಶೋಧನೆಗೆ ಸಂಬಂಧಸಿದಂತೆ ನಾವು ಸೈದ್ಧಾಂತಿಕವಾಗಿ ಎದುರಿಸಬೇಕಾಗಿರುವ ಸಮಸ್ಯೆಯೆಂದರೆ ಅಧ್ಯಯನದ ವಿಷಯವನ್ನು ಪರಿಭಾಷಿಸಿಕೊಳ್ಳುವ ಕ್ರಮ. ಸಮಾಜದಲ್ಲಿ ಅನೇಕ ವಿಷಯಗಳಲ್ಲಿ ಸಿದ್ಧವಾದ ನಂಬಿಕೆಗಳಿರುತ್ತವೆ. ಅವುಗಳನ್ನು ಪಟ್ಟಭದ್ರರು ಪ್ರಾಕೃತಿಕ ಸತ್ಯಗಳೆಂದು ಪ್ರತಿಪಾದಿಸುತ್ತಿದ್ದಾರೆ. ಆದರೆ ಸಂಶೋಧನೆಯಲ್ಲಿ ನಿರತರಾದವರು ಅಂತಹ ನಂಬಿಕೆಗಳನ್ನು ಇಟ್ಟುಕೊಂಡು ಅಧ್ಯಯನ ನಡೆಸುವುದು ಸಾಧ್ಯವಿಲ್ಲ. ಅಂತಹ ಸತ್ಯಗಳನ್ನು ಪ್ರಶ್ನೆ ಮಾಡಬೇಕಾಗುತ್ತದೆ. ಹೀಗೆ ಸಿದ್ಧ ಸತ್ಯಗಳನ್ನು ಪ್ರಶ್ನೆ ಮಾಡುವ, ಅದರ ಜೊತೆಯಲ್ಲಿ ಅನುಸಂಧಾನ ನಡೆಸುವ ಕ್ರಿಯೆಯು ಬಹಳ ಮುಖ್ಯ. ಇದನ್ನು ಲೇಖಕರು ಸಮಸ್ಯೀಕರಣವೆಂದು ಕರೆದಿದ್ದಾರೆ.

**ಅಧ್ಯಯನದ ವಿಷಯ ಆಯ್ಕೆ**

ಸಂಶೋಧನೆಗೆ ಪ್ರವೇಶಿಸಿದ ವಿದ್ಯಾರ್ಥಿ ಎದುರಿಸುವ ಸಮಸ್ಯೆಯೆಂದರೆ ಅಧ್ಯಯನದ ವಿಷಯದ ಆಯ್ಕೆ. ನಿಜಕ್ಕೂ ಇಲ್ಲಿರುವ ಸಮಸ್ಯೆ ಇದಲ್ಲ, ಸಮಸ್ಯೆಯಿರುವುದು ಅಧ್ಯಯನ ವಿಷಯವನ್ನು ಪರಿಭಾಷಿಸಿಕೊಳ್ಳುವ ಬಗೆಯಲ್ಲಿದೆ. ಇದು ಅಧ್ಯಯನ ವಿಧಾನಕ್ಕೆ ಸಂಬಂಧಿಸಿದ ಸಂಗತಿಯಾಗಿದೆ. ಸಂಶೋಧನೆಯ ತಾತ್ವಿಕ ಸಂಗತಿಗೆ ಸಂಬಂಧಿಸಿದ ಸಂಗತಿಯಾಗಿದೆ. ಸಂಶೋಧನೆಯಲ್ಲಿ ಅತ್ಯಂತ ನಿರ್ಲಕ್ಷ್ಯಕ್ಕೆ ಒಳಗಾದ ಸಂಗತಿಯೆಂದರೆ ಸಂಶೋಧನೆಯ ಮೂಲದಲ್ಲಿನ ಸೈದ್ಧಾಂತಿಕ ಪ್ರಶ್ನೆಗಳು. ನಿಜವಾಗಿ ವಿಷಯದ ಆಯ್ಕೆಯು ಎರಡನೆಯ ಸಂಗತಿಯಾಗಿದೆ. ಸಂಶೋಧಕರಿಗೆ ಅದರ ಮೂಲದಲ್ಲಿನ ಸೈದ್ಧಾಂತಿಕ ಸಂಗತಿಯ ಅರಿವು ಇಲ್ಲದಿದ್ದರೆ ಎಂತಹ ಅಪಾಯ ಉಂಟಾಗುತ್ತದೆ ಎಂಬುದನ್ನು ಉದಾಹರಣೆ ಮೂಲಕ ವಿವರಿಸಬಹುದಾಗಿದೆ. ಒಬ್ಬ ಸಂಶೋಧಕಳಿಗೆ ತನ್ನ ಪರಿಶಿಷ್ಟ ಸಮುದಾಯದ ಮಕ್ಕಳು ಶೈಕ್ಷಣಿಕ ಕ್ಷೇತ್ರದಲ್ಲಿ ಹಿಂದುಳಿದಿರುವುದನ್ನು ಕುರಿತಂತೆ ಸಮಸ್ಯೀಕರಿಸಬೇಕಾಗಿದೆ. ಪರಿಶಿಷ್ಟ ವರ್ಗಕ್ಕೆ ಸೇರಿದ ಕಾರಣಕ್ಕೆ ಅಲ್ಲಿ ಮಕ್ಕಳು ಯಾವ ಬಗೆಯ ತೊಡಕುಗಳನ್ನು ಎದುರಿಸುತ್ತಿದ್ದಾರೆ ಎಂಬುದನ್ನು ಅವಳು ಸಾಧಿಸಬೇಕಾಗಿದೆ. ಆದರೆ ಅವಳು ಸಿದ್ಧಪಡಿಸಿದ್ದ ಪ್ರಶ್ನಾವಳಿ ಮತ್ತು ಸಂಗ್ರಹಿಸಿದ ಮಾಹಿತಿ ಹೇಗಿತ್ತೆಂದರೆ ಈ ಮಕ್ಕಳಿಗೆ ಏನೂ ಬರುವುದಿಲ್ಲ, ಯಾವುದೂ ಅರ್ಥವಾಗುವುದಿಲ್ಲ, ಅವರ ಸ್ಥಿತಿಯೇ ಇಷ್ಟು, ಒಂದು ಸಾಲೂ ಓದಲು ಬರುವುದಿಲ್ಲ ಎಂಬ ತೀರ್ಮಾನವನ್ನು ಸಾಧಿಸುವಂತಹ ಫಲಿತಗಳು ಬಂದವು. ಅವಳು ಅದನ್ನೇ ತನ್ನ ಮಹಾಪ್ರಬಂಧದಲ್ಲಿ ಪ್ರತಿಪಾದಿಸಿದಳು. ಅಲ್ಲಿ ಮಕ್ಕಳ ಸಾಮಾಜಿಕ ಪರಿಸರ, ಕೌಟುಂಬಿಕ ಸನ್ನಿವೇಶ, ಕುಟುಂಬ ಸಂಬಂಧಗಳು, ಮೊದಲ ತಲೆಮಾರಿನ ಸಾಕ್ಷರತೆಯ ಸಮಸ್ಯೆ, ಶಾಲೆಯಲ್ಲಿ ಶಿಕ್ಷಕರಲ್ಲಿ ಪರಿಶಿಷ್ಟರ ಬಗೆಗಿನ ಪೂರ್ವಗ್ರಹ, ಸಮುದಾಯದ ಚಾರಿತ್ರಿಕ ವಿಕಲತೆ ಮುಂತಾದವು ಅವಳಿಗೆ ಮುಖ್ಯವಾಗಲಿಲ್ಲ. ಅವೆಲ್ಲ ಗುಣಾತ್ಮಕವಾದ ಸಂಗತಿ ಗಳಾಗಿರುವುದರಿಂದ ಮತ್ತು ಕಂಡುಹಿಡಿಯಲು ಸೈದ್ಧಾಂತಿಕ ಸ್ಪಷ್ಟತೆ ಬೇಕಾಗಿರುವುದರಿಂದ ಅವಳು ಓಬಿರಾಯನ ಕಾಲದ ಪಾಸಿಟಿವಿಸಮ್ ವಿಧಾನವನ್ನು ತನಗೆ ಅರಿವಿಲ್ಲದಂತೆ ಬಳಸಿದ್ದರಿಂದ ಅಂತಹ ಉತ್ತರ ಅವಳಿಗೆ ಪ್ರಾಪ್ತವಾಯಿತು. ಅವಳ ಉದ್ದೇಶವೇ ಬೇರೆ. ಆದರೆ ಆಕೆ ತಲುಪಿದ ತೀರ್ಮಾನವೇ ಬೇರೆ. ಇದಕ್ಕೆ ಕಾರಣ ಸಂಶೋಧನೆಯ ವಿಧಾನದ ಬಗ್ಗೆ ಅವಳು ತೋರಿದ ಔದಾಸೀನ್ಯ. ಈ ಬಗೆಯ ಅಪಾಯ ಉಂಟಾಗದಂತೆ ಎಚ್ಚರ ವಹಿಸಬೇಕಾದರೆ ಸಂಶೋಧನಾ ವಿಧಾನದ ಬಗ್ಗೆ ವಿದ್ಯಾರ್ಥಿಗಳಿಗೆ ಅರಿವಿರಬೇಕೆಂಬ ಅರಿವನ್ನು ಡಾ|| ಎಂ. ಚಂದ್ರಪೂಜಾರಿ ಅವರು ತಮ್ಮ ಕೃತಿಯಲ್ಲಿ ನೀಡಿದ್ದಾರೆ.

**ಮಾಹಿತಿ ಸಂಗ್ರಹ**

ಮಾಹಿತಿ ಸಂಗ್ರಹಕ್ಕೆ ಸಂಬಂಧಿಸಿದಂತೆ ಸಮಾಜ ವಿಜ್ಞಾನಗಳಲ್ಲಿ ವಿವಿಧ ವಿಧಾನಗಳನ್ನು ಅನುಸರಿಸಲಾಗುತ್ತದೆ. ವಾಸ್ತವವಾಗಿ ಅವು ಅಧ್ಯಯನದ ವಿಷಯವನ್ನು ಅಥವಾ ಅಧ್ಯಯನದ ಸಮಸ್ಯೆಯನ್ನು ಅವಲಂಬಿಸಿರುತ್ತವೆ. ಈ ವಿಧಾನಗಳ ಇತಿಮಿತಿಗಳನ್ನು ಇಲ್ಲಿ ಲೇಖಕರು ವಿವರವಾಗಿ ಚರ್ಚಿಸಿದ್ದಾರೆ. ಅದು ಸಂದರ್ಶನವಿರಬಹುದು, ಪ್ರಶ್ನಾವಳಿಯಿರಬಹುದು ಅಥವಾ ಗುಂಪು ಚರ್ಚೆಯಿರಬಹುದು, ಅವಲೋಕನ ವಿಧಾನವಿರಬಹುದು ಅಥವಾ ಸಂವಾದ ಗೋಷ್ಠಿಗಳಿರಬಹುದು. ಪ್ರಶ್ನಾವಳಿಯಲ್ಲಿ ಪ್ರಶ್ನೆಗಳು ಓಪನ್ ಎಂಡೆಡ್ ಆಗಿರಬೇಕೋ ಅಥವಾ ಕ್ಲೋಸ್ಡ್ ಎಂಡೆಡ್ ಆಗಿರಬೇಕೋ, ಪ್ರಶ್ನೆಗಳು ಮುಂಚಿತವಾಗಿ ಸಿದ್ಧವಾಗಿರಬೇಕೋ ಅಥವಾ ಅವುಗಳನ್ನು ಸಂದರ್ಶನದ ಸಮಯದಲ್ಲಿ ಬದಲುಮಾಡುವುದಕ್ಕೆ ಅನುಕೂಲಕರವಾಗಿರಬೇಕೋ ಎಂಬುದರ ಬಗ್ಗೆ ಇಲ್ಲಿ ವಿಸ್ತೃತವಾಗಿ ಪರಿಶೀಲಿಸಲಾಗಿದೆ. ಪ್ರತಿಯೊಂದು ವಿಧಾನದ ಗುಣಗಳೇನು, ಅವುಗಳ ಸಮಸ್ಯೆಯೇನು ಎಂಬುದರ ಮೇಲೆ ಲೇಖಕರು ತಮ್ಮ ಅನುಭವದ ಆಧಾರದ ಮೇಲೆ ಬೆಳಕು ಚೆಲ್ಲಿದ್ದಾರೆ. ಪರಿಮಾಣಾತ್ಮಕ-ಗುಣಾತ್ಮಕ, ಪಾಸಿಟಿವಿಸಮ್-ಹರ್ಮನೊಟಿಕ್ಸ್, ಯೂನಿವರ್ಸಲಿಸಮ್-ಪರ್ಟಿಕ್ಯುಲರಿಸಮ್ ಮುಂತಾದ ವಿಧಾನಗಳಿಗೆ ಸಂಬಂಧಿಸಿದಂತೆ ಲೇಖಕರು ಬೈನರಿ ಅಪೊಸಿಶನ್ ನಿಲುವು ತಾಳದೆ ಒಂದು ರೀತಿಯ ಸಮನ್ವಯ ದಾರಿ ಹಿಡಿದಿದ್ದಾರೆ. ಇದು ಸರಿಯಾದ ಕ್ರಮವೆಂದು ಕಾಣುತ್ತದೆ. ಯಾವುದೇ ಅತಿಗೆ ಹೋಗದೆ ಎರಡು ವಿಧಾನಗಳ ಗುಣಗಳನ್ನು ಪಡೆದುಕೊಳ್ಳುವ ಪ್ರಯತ್ನವು ಯಾವಾಗಲೂ ಉಪಯುಕ್ತ.

**ಮುಗಿತಾಯ**

ಸಂಶೋಧನೆಯನ್ನು ಹೇಗೆ ನಡೆಸಬೇಕು ಎಂಬುದರ ಕುರಿತ ಈ ಕೃತಿಯಲ್ಲಿ ಸಾಮಾಜಿಕ ನ್ಯಾಯದ ಸಂಗತಿಯನ್ನು, ಸಮಾನತೆಯ ಸಂಗತಿಯನ್ನು, ಜನರನ್ನು ಒಳಗೊಳ್ಳುವ ಮೌಲ್ಯವನ್ನು ಪ್ರತಿಪಾದಿಸುವುದು ಕುತೂಹಲಕಾರಿ ಸಂಗತಿಯಾಗಿದೆ. ಡಾ|| ಎಂ. ಚಂದ್ರಪೂಜಾರಿ ಅವರಿಗೆ 'ಸಂಶೋಧನೆಗಾಗಿ ಸಂಶೋಧನೆ' ಎಂಬುದರ ಬಗ್ಗೆ ನಂಬಿಕೆಯಿಲ್ಲ. ಸಮಾಜ ಸಂಶೋಧನೆಯು ಸಮಾನತೆಯ, ಸಾಮಾಜಿಕ ನ್ಯಾಯದ, ಜನರ ಸಹಭಾಗಿತ್ವದಿಂದ ಕೂಡಿರುವ ಸಮಾಜವನ್ನು ಕಟ್ಟುವ ಕಾರ್ಯದಲ್ಲಿ ಮಾರ್ಗದರ್ಶನ ನೀಡಬೇಕೆಂಬ ಸಂಗತಿಯಲ್ಲಿ ಅವರು ವಿಶ್ವಾಸವಿಟ್ಟವರು. ಈ ಕೃತಿಯಲ್ಲಿ ಲಿಂಗ ಸಂಬಂಧಗಳ ಬಗ್ಗೆ ನೇರವಾಗಿ ಎಲ್ಲೂ ಚರ್ಚೆ ಕಂಡುಬರುವುದಿಲ್ಲ. ಆದರೆ ಇಡೀ ಕೃತಿಯ ಸೈದ್ಧಾಂತಿಕ ಕಟ್ಟೋಣ ಹೇಗಿದೆಯೆಂದರೆ ಅಲ್ಲಿ ಲಿಂಗ ಸಂಬಂಧಿ ಸಮಾನತೆಯು ಅಂತರ್ಗತವಾದ ಸಂಗತಿಯಾಗಿ ಹರಿಯುತ್ತದೆ. ಸೈದ್ಧಾಂತಿಕವಾಗಿ ಕಟ್ಟಿದ ವೈಚಾರಿಕತೆಯು ತನ್ನಷ್ಟಕ್ಕೆ ತಾನು ಜನರ ಬದುಕಿನ ಭಾಗವಾಗಿಬಿಡುವುದಿಲ್ಲ. ಅಲ್ಲಿ ಅಧಿಕಾರದ ಸಂಗತಿಗಳಿರುತ್ತವೆ. ಈ ಅಧಿಕಾರವನ್ನು ಊರ್ಜಿತಗೊಳಿಸುವ ಸಾಂಸ್ಥಿಕ ವ್ಯವಸ್ಥೆಯಿರುತ್ತದೆ. ಅಲ್ಲಿ ಸಂಶೋಧನೆಯ ಮೂಲಕ ಕಂಡುಕೊಂಡ ಸಂಗತಿಗಳು ಜನರ ಬದುಕಿನ ಭಾಗವಾಗಬೇಕೆಂದರೆ ಕಷ್ಟಸಾಧ್ಯ. ಅದಕ್ಕೆ ನಾವು ನಮ್ಮ ರಾಜ್ಯದಲ್ಲಿ ಸಮಾಜ ಸಂಶೋಧನೆಗೆ ಸಂಬಂಧಿಸಿದಂತೆ ಒಂದು ವಾತಾವರಣವನ್ನು ನಿರ್ಮಾಣ ಮಾಡಬೇಕಾಗಿದೆ. ಅದನ್ನು ನಾವು ಸಂಶೋಧನಾ ಸಂಸ್ಕೃತಿಯೆಂದು ಕರೆಯಬಹುದು. ಸಂಶೋಧನೆಯ ಕ್ಷೇತ್ರದಲ್ಲಿ ವೃತ್ತಿಪರತೆಯನ್ನು ಸಾಧಿಸುವ ಕೆಲಸವಾಗಬೇಕು. ಈ ಕೃತಿಯು ಅಂತಹ ಒಂದು ನೆಲೆಯನ್ನು ಒದಗಿಸುತ್ತದೆ ಎಂದು ನಾನು ನಂಬಿದ್ದೇನೆ. ಸಂಶೋಧನೆಯಲ್ಲಿ ನಿರತರಾದವರ ಧೋರಣೆಯನ್ನು ಇದು ತಿದ್ದುವ ಕೆಲಸ ಮಾಡುತ್ತದೆ. ಈ ಕೃತಿಗೆ ಸಾಮಾಜಿಕ ಮುಖವಿದೆ. ಈ ಬಗೆಯ ಕೃತಿಗಳು ಇನ್ನೂ ಹೆಚ್ಚಾಗಿ ಚಂದ್ರಪೂಜಾರಿ ಅವರಿಂದ ಕನ್ನಡಕ್ಕೆ ದೊರೆಯಲೆಂದು ಹಾರೈಸುತ್ತೇನೆ.

**ಡಾ|| ಟಿ. ಆರ್. ಚಂದ್ರಶೇಖರ**
ಪ್ರಾಧ್ಯಾಪಕ, ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

**ಗಾಳಿ, ನೀರು, ಬೆಳಕು ಎಲ್ಲವೂ ಪ್ರಕೃತಿಯಿಂದಲೇ ಲಭ್ಯ. ಮೂಲಭೂತ ಆವಶ್ಯಕತೆಗಳನ್ನು ಪೂರೈಸುವ ಭೂಮಿ, ಸ್ವಚ್ಛ ಸಂಪದ್ಭರಿತವಾಗಿರಬೇಕಲ್ಲವೇ ? ಒಂದು ಬೀಜ ಮಣ್ಣಿಗೆ ಬಿದ್ದು, ಮಳೆಯ ನಂತರ ಸಹಜವಾಗಿ ಮೊಳಕೆಯೊಡೆದು ಸುತ್ತಲಿರುವ ಫಲವತ್ತತೆಯನ್ನು ಉಪಯೋಗಿಸಿಕೊಂಡು ಸದೃಢವಾಗಿ ಬೆಳೆಯುವುದಿಲ್ಲವೇ ? ಹಾಗಿದ್ದರೆ, ಕೃತಕ ಗೊಬ್ಬರ ಏಕೆ ಬೇಕು ಎಂದು ಪ್ರಶ್ನಿಸುತ್ತಾರೆ ಡಾ॥ ಖಾದರ್. ಸಂಪದ್ಭರಿತ ದೇಶ, ಸದೃಢನಾದ ಮನುಷ್ಯನಿಂದ ಮಾತ್ರ ಪ್ರಪಂಚ ಸುಂದರವಾಗಿರಲು ಸಾಧ್ಯ.**

# ಸಹಜ ಪರಿಸರದಲ್ಲಿ ಸಹಜ ಕೃಷಿಯ ಬಗ್ಗೆ ಅರಿವು ಮೂಡಿಸುತ್ತಿರುವ ಡಾ॥ ಖಾದರ್

**ಸಿ. ಎಸ್. ಪೂರ್ಣಿಮಾ**

ಏಕೇಂದ್ರೀಕರಣದಿಂದ ವೈವಿಧ್ಯಮಯವಾದ ಪ್ರಕೃತಿ-ಪರಿಸರ, ಸಂಸ್ಕೃತಿ, ಆಹಾರ-ವಿಚಾರಗಳು ಇಂದು ಏಕಮುಖವಾಗಿ, ಕೇಂದ್ರೀಕರಣದತ್ತ ಸಾಗುತ್ತಿವೆ ಎನ್ನುವ ಅನುಮಾನ ಕಾಡುತ್ತಿದೆ. ಎಲ್ಲ ಕಡೆಯೂ ಒಂದೇ ವಿಧವಾದ ಜೀವನಶೈಲಿಯನ್ನು ಅನುಸರಿಸುವುದಕ್ಕೆ ಪ್ರೇರಣೆಗಳು ಅನೇಕ. ಭೂಮಿ ಒಂದೇ ಆದರೂ ಅದರಲ್ಲಿರುವ ಸಂಪತ್ತು ವೈವಿಧ್ಯಮಯ, ಜನರೂ ವಿಭಿನ್ನ. ಹಿಂದಿನವರ ಜೀವನಕ್ರಮ ಸ್ಥಳೀಯ ಪರಿಸರದೊಂದಿಗೆ ಸಮನ್ವಯತೆಯನ್ನು ಹೊಂದಿ ಬಾಳುವಂತಿತ್ತು. ಆದರೆ ಈಗ ಎಲ್ಲವೂ ಬದಲಾಗುತ್ತಿವೆ. ವಿಜ್ಞಾನ ಜೀವವಿರೋಧಿಯಲ್ಲ, ವಿರೋಧಾಭಾಸವೆಂದರೆ ಅದನ್ನು ಜೀವನಾಶಕವಾಗಿ ಮಾಡುತ್ತಿರುವುದು ಆಧುನಿಕ ಮನೋಭಾವದ ಮನುಷ್ಯ. ಈ ಸಂದರ್ಭದಲ್ಲಿ ಸದ್ದಿಲ್ಲದೆ ಪರಿಸರ ಸಂರಕ್ಷಣೆ, ಪೋಷಕಾಂಶಯುಕ್ತ ಬೆಳೆಗಳ ಉತ್ಪತ್ತಿಗಾಗಿ ಸಹಜ ಕೃಷಿಯ ಬಗ್ಗೆ ನಮ್ಮ ರೈತರಲ್ಲಿ ಜಾಗೃತಿ ಮೂಡಿಸುತ್ತಿದ್ದು, ಎಲೆಮರೆಕಾಯಿಯಂತೆ ನಮ್ಮೊಡನಿದ್ದಾರೆ ಡಾ॥ ಖಾದರ್. ಮನುಷ್ಯ ಅಭಿವೃದ್ಧಿಯ ಹೆಸರಿನಲ್ಲಿ ಪ್ರಕೃತಿಯನ್ನು ನಾಶಗೊಳಿಸುತ್ತಾ, ಕಾಡುಪ್ರಾಣಿಗಳನ್ನು ಸಂಹರಿಸುತ್ತಾ ಅವುಗಳಿಗೆ ನೆಲೆಯಿಲ್ಲದಂತೆ ಮಾಡಿರುವುದಲ್ಲದೆ, ಅಸಹಜ ಕೃಷಿ ಪದ್ಧತಿಯಿಂದ, ರಾಸಾಯನಿಕಗಳ ಬಳಕೆಯಿಂದ ತನ್ನನ್ನು ತಾನೇ ವಿನಾಶದತ್ತ ಒಯ್ಯುತ್ತಿದ್ದಾನೆ, ಎಂಬ ಚಿಂತನೆಗಳನ್ನು ಎಲ್ಲೆಡೆ ಹರಿಯಬಿಡುತ್ತಿದ್ದಾರೆ.

ಮೂಲತಃ ಆಂಧ್ರದವರಾದ ಡಾ॥ ಖಾದರ್ ರಸಾಯನಶಾಸ್ತ್ರದಲ್ಲಿ ಎಂಎಸ್ಸಿ ಮಾಡಿ, ಸಂಶೋಧನೆ ಕೈಗೊಂಡು, ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ಸಂಸ್ಥೆಯಲ್ಲಿ ಸೇವೆಸಲ್ಲಿಸಿ, ೪ ವರ್ಷಗಳವರೆಗೆ ಒರೆಗಾನ್ ವಿಶ್ವವಿದ್ಯಾನಿಲಯದಲ್ಲಿ ಪರಿಸರ ವಿಜ್ಞಾನ ಕ್ಷೇತ್ರದಲ್ಲಿ ಕೆಲಸಮಾಡಿ, ಅನಂತರ ಮೈಸೂರಿನ ಸಿಎಫ್‌ಟಿಆರ್‌ಐನಲ್ಲಿ ೨ ವರ್ಷ ದುಡಿದು ಅಮೆರಿಕೆಗೆ ತೆರಳಿದರು. ವಿದೇಶದಲ್ಲಿದ್ದು ಕಾಡಿನಲ್ಲಿ ಕೆಲಸ ಮಾಡುತ್ತಿದ್ದಾಗ ಖಾದರ್ ಅವರಿಗೆ ಒಮ್ಮೆ, ಆಧುನಿಕ ವ್ಯವಸಾಯದ ಹೆಸರಿನಲ್ಲಿ ಪ್ರಕೃತಿಯನ್ನು ನಾವೆಷ್ಟು ಹಾಳುಮಾಡುತ್ತಿದ್ದೇವೆಂದು ಅನ್ನಿಸಿ, ಭಾರತಕ್ಕೆ ವಾಪಸ್ಸಾದರು. 'ಹೆಚ್ಚಿನ ಇಳುವರಿ, ಹೆಚ್ಚಿನ ಲಾಭ' ಎಂಬ ಪದಗಳ ಹಿಂದೆ ಬಿದ್ದು ನಮ್ಮ ಭೂಮಿಗೆ ಅನೇಕ ರಾಸಾಯನಿಕಗಳನ್ನು ತುರುಕುತ್ತಿದ್ದೇವೆ; ವ್ಯವಸಾಯಕ್ಕಾಗಿ, ಕೈಗಾರಿಕೆಗಾಗಿ ಕಾಡು ಕಡಿದು, ಭೂಮಿಯನ್ನು ಹಾಳುಮಾಡುತ್ತಿದ್ದೇವೆ ಎನ್ನುವುದು ಇವರ ಅಭಿಪ್ರಾಯ. ಆಧುನಿಕ ಕೃಷಿ ಪದ್ಧತಿಯಲ್ಲಿ ಹೆಚ್ಚು ನೀರು, ಹೆಚ್ಚು ಗೊಬ್ಬರ ಬೇಕು. ಆದರಿಂದ ಅಣೆಕಟ್ಟುಗಳ ನಿರ್ಮಾಣ, ಕಾಡುಗಳ ನಾಶ, ಫಾಸ್ಫೇಟ್‌ಯುಕ್ತ ರಾಸಾಯನಿಕ ಗೊಬ್ಬರಗಳ ವಿತರಣೆ. ಇವೆಲ್ಲವುಗಳಿಂದ ಮನುಷ್ಯ ತನಗೆ ತಾನೇ ಮೋಸ ಮಾಡಿಕೊಳ್ಳುತ್ತಿದ್ದಾನೆ. ನೀರು ಬಹಳ ಮೌಲ್ಯಯುತವಾದುದು. ಸ್ವಾಭಾವಿಕ ಕೃಷಿ ಪದ್ಧತಿ ಅಳವಡಿಸಿದರೆ ನೀರಿನ ಸದ್ಬಳಕೆ ಸಾಧ್ಯ. ಗೊಬ್ಬರದ ಬಳಕೆಯೂ ಕಡಿಮೆ. ಅಲ್ಲದೆ, ಖರ್ಚು ಶೂನ್ಯ. ಪ್ರಕೃತಿಕೊಡುಗೆಯಾದ ಭೂಮಿಯನ್ನು ನಮ್ಮ ಮುಂದಿನ ಪೀಳಿಗೆಗೆ ಶುದ್ಧವಾಗಿ ನೀಡಲು ಡಾ॥ ಖಾದರ್ ಸಲಹೆ ಮಾಡುವುದು ಸಹಜ ಕೃಷಿಯನ್ನು.

ಗಾಳಿ, ನೀರು, ಬೆಳಕು ಎಲ್ಲವೂ ಪ್ರಕೃತಿಯಿಂದಲೇ ಲಭ್ಯ. ಮೂಲಭೂತ ಆವಶ್ಯಕತೆಗಳನ್ನು ಪೂರೈಸುವ ಭೂಮಿ, ಸ್ವಚ್ಛ, ಸಂಪದ್ಭರಿತವಾಗಿರಬೇಕಲ್ಲವೇ ? ಒಂದು ಬೀಜ ಮಣ್ಣಿಗೆ ಬಿದ್ದು, ಮಳೆಯ ನಂತರ ಸಹಜವಾಗಿ ಮೊಳಕೆಯೊಡೆದು ಸುತ್ತಲಿರುವ ಫಲವತ್ತತೆಯನ್ನು ಉಪಯೋಗಿಸಿಕೊಂಡು ಸದೃಢವಾಗಿ ಬೆಳೆಯುವುದಿಲ್ಲವೇ ? ಹಾಗಿದ್ದರೆ, ಕೃತಕ ಗೊಬ್ಬರ ಏಕೆ ಬೇಕು ಎಂದು ಪ್ರಶ್ನಿಸುತ್ತಾರೆ ಡಾ॥ ಖಾದರ್. ಸಂಪದ್ಭರಿತ ದೇಶ, ಸದೃಢನಾದ ಮನುಷ್ಯನಿಂದ ಮಾತ್ರ ಪ್ರಪಂಚ ಸುಂದರವಾಗಿರಲು ಸಾಧ್ಯ. ನಾವು ತಿನ್ನುವ ಆಹಾರವೇ ನಮ್ಮ ದೈಹಿಕ, ಮಾನಸಿಕ ಆರೋಗ್ಯವನ್ನು ನಿರ್ಧರಿಸುತ್ತದೆ. ಉತ್ತಮ ಆಹಾರಕ್ಕಾಗಿ ಎಲ್ಲರೂ ಪ್ರಾಶಸ್ತ್ಯ ನೀಡುತ್ತಾರೆ. ವಿಪರ್ಯಾಸವೆಂದರೆ, ಆಧುನಿಕತೆಯ ಹೆಸರಿನಲ್ಲಿ ಮೂಲ ಆಹಾರಗಳ ಸೇವನೆಯನ್ನು ತ್ಯಜಿಸಿ, ಜಾಹೀರಾತುಗಳಿಗೆ ಮಾರು ಹೋಗಿ, ಸಿದ್ಧ ಆಹಾರಕ್ಕೆ, ಫಾಸ್ಟ್‌ಫುಡ್‌ಗೆ ಜೋತುಬಿದ್ದಿರುವ ಇಂದಿನ ಸಮಾಜದ ನಾಗರಿಕರ ಬಗ್ಗೆ ಕನಿಕರ ವ್ಯಕ್ತಪಡಿಸುತ್ತಾರೆ. ಸಕ್ಕರೆ ಖಾಯಿಲೆ, ಬಿಪಿ, ಹೃದಯದ ತೊಂದರೆಗಳು ಭಾರತದಲ್ಲಿ ಹೆಚ್ಚಾಗಲು, ನಮ್ಮ ಆಧುನಿಕ ಶೈಲಿಯ ಆಹಾರಪದ್ಧತಿಯೇ ಕಾರಣ. ಮಾರುಕಟ್ಟೆಯಲ್ಲಿರುವ ಬೇಡಿಕೆಗನುಗುಣವಾಗಿ ರೈತರು ಬೆಳೆ ಬೆಳೆಯುವುದಕ್ಕೆ ಮುಂದಾಗುತ್ತಾರೆ. 'ಅಧಿಕ ಇಳುವರಿ, ಅಧಿಕ ಲಾಭ'ದ ಆಸೆಯಿಂದ ಪರೋಕ್ಷವಾಗಿ ತಮ್ಮ ಭೂಮಿಗೆ ವಿಷ ಉಣಿಸುತ್ತಿದ್ದಾರೆ. ವಿದೇಶಗಳಲ್ಲಿ ಸಾವಿರಾರು ಎಕರೆ ಪ್ರದೇಶಗಳ ಒಡೆತನ ಒಬ್ಬರದಾಗಿರುತ್ತದೆ. ಆದರೆ ತುಂಡು ಭೂಮಿಯುಳ್ಳ ಭಾರತದ ರೈತನಿಗೆ ಸಹಜ ಕೃಷಿ



ಒಂದು ವರದಾನ. ಹೆಚ್ಚಿನ ಖರ್ಚಿಲ್ಲ, ನೀರು ಬೇಕಾಗಿಲ್ಲ, ನಿರ್ವಹಣೆಯ ತಲೆಬಿಸಿ ಇಲ್ಲ. ಮೊದಲ ಎರಡು ವರ್ಷಗಳು ಇಳುವರಿ ಕಮ್ಮಿಯಾಗಬಹುದಾದರೂ ನಂತರದಲ್ಲಿ ಉತ್ತಮ ಇಳುವರಿ ಪಡೆಯುವುದರೊಂದಿಗೆ ಮಣ್ಣಿನ ಫಲವತ್ತತೆಯನ್ನು ಕಾಯ್ದುಕೊಳ್ಳಬಹುದು ಎಂಬುದು ಅವರ ಅಭಿಪ್ರಾಯ. ಸಹಜ ಕೃಷಿಯಲ್ಲಿ ಕಳೆಗಳನ್ನು ಬಿಸಾಡದೆ, ಅಲ್ಲಿಯೇ ಕೊಳೆಯುವಂತೆ ಮಾಡುವುದರಿಂದ, ಅಲ್ಲಿ ಬೀಳುವ ಅನೇಕ ಎಲೆಗಳು, ಸಸಿಗಳು, ಕೊಳೆತು ಸೂಕ್ಷ್ಮಾಣುಗಳು ಬೆಳೆಯಲು ಸಾಧ್ಯವಾಗುತ್ತದೆ. ಅಲ್ಲದೆ ಮುಚ್ಚಿಗೆಯಂತೆ ಎಲೆಗಳನ್ನು ಹಾಕುವುದರಿಂದ ಮಣ್ಣಿನಲ್ಲಿ ತೇವಾಂಶ ಹೆಚ್ಚಿದ್ದು ಫಲವತ್ತಾಗಿರುತ್ತದೆ.

ಸಾಲದಿಂದ ಬೇಸತ್ತಿರುವ, ಗೊಬ್ಬರಕ್ಕಾಗಿ ಕಾದಾಡುವ ರೈತರ ಚಿತ್ರಣ ಕಣ್ಣಮುಂದೆ ಸುಳಿದಾಡುತ್ತಿರುವ ಈ ಹೊತ್ತಿನಲ್ಲಿ, ಯಾವುದೇ ಒತ್ತಡವಿಲ್ಲದೆ ಪ್ರಕೃತಿಯೊಂದಿಗೆ, ಸಮನ್ವಯತೆಯನ್ನು ಸಾಧಿಸಿಕೊಂಡು ಬೇಕಾದ ಬೆಳೆಗಳನ್ನು ಬೆಳೆಸುವ ಯೋಜನೆ ರೈತರ ಬಾಳಿಗೆ ಬೆಳಕಿನಂತಿದೆ. ರೈತ ಕೃಷಿಯ ಮೂಲಭೂತ ಸೌಕರ್ಯಗಳ ಮೇಲೆ ಅತಿಯಾದ ಹಣ ಸುರಿಯಬೇಕಿಲ್ಲ, ಆರ್ಥಿಕ ಸಂಕಷ್ಟಗಳಿಂದ ನರಳಬೇಕಾಗಿಲ್ಲ, ದೇಶವೂ ಕೂಡ ವಿದೇಶಿ ಸಾಲ ಮಾಡುವ ಅಗತ್ಯವಿಲ್ಲ. ಇದಕ್ಕೆ ಹೆಚ್ಚಿನ ವಿದ್ಯುತ್ ಬಳಕೆಯ ಅಗತ್ಯವೂ ಇಲ್ಲ. ಇಡೀ ದೇಶದ ಆರ್ಥಿಕ ಸ್ಥಿತಿ ಸಂಪೂರ್ಣ ಬದಲಾಗಿ, ನಾವು ಗೊಬ್ಬರಕ್ಕಾಗಿ, ತಾಂತ್ರಿಕತೆಗಾಗಿ ಇನ್ನೊಬ್ಬರನ್ನು ಅವಲಂಬಿಸಬೇಕಿಲ್ಲ. ಮನುಷ್ಯನ ದೇಹ ಸ್ಥಳೀಯ ಆಹಾರ ಪದ್ಧತಿಗೆ ಹೊಂದಿಕೊಂಡಿರುತ್ತದೆ. ಆಯಾ ಪ್ರದೇಶದಲ್ಲಿ ಬೆಳೆಯುವ ಬೆಳೆ, ಆಹಾರಕ್ರಮ, ಅಲ್ಲಿನ ಹವಾಗುಣ, ಮಳೆ, ಮಣ್ಣನ್ನು ಆಧರಿಸಿರುತ್ತದೆ. ಆದರೆ ವ್ಯಾಪಾರಿ ಮೂಲದ ಹಿತಾಸಕ್ತಿಯಿಂದ, ಎಲ್ಲೋ ಬೆಳೆದ ರಾಸಾಯನಿಕಗಳಿಂದ ಸಂರಕ್ಷಿಸಿದ ಆಹಾರದ ಬಳಕೆ ಮನುಷ್ಯನಿಗೆ ಮಾರಕವಾಗಿದೆ ಹಾಗೂ ರೈತರ ದಮನಕ್ಕೆ ನಾಂದಿಯಾಗಿದೆ. ಏಕ ಸಂಸ್ಕೃತಿ, ಏಕ ಆಹಾರ, ಏಕ ರೀತಿಯ ಮನರಂಜನೆಯಿಂದ ಜೀವ ವೈವಿಧ್ಯ ನಾಶವಾಗುವ ಭಯ ಸಹಜವಾದುದು.




ತಾ॥ ೧೮-೯-೨೦೧೧ರಂದು, ನವಕರ್ನಾಟಕ ಪ್ರಕಾಶನದ ಇತ್ತೀಚಿನ ಒಂಬತ್ತು ಕೃತಿಗಳ ಲೋಕಾರ್ಪಣೆ ಸಮಾರಂಭ ಜರುಗಿತು. ಜಯಂತ ಕಾಯ್ಕಿಣಿ ಕೃತಿಗಳ ಲೋಕಾರ್ಪಣೆ ಮಾಡಿದರು. ಚಿತ್ರದಲ್ಲಿ (ಎಡದಿಂದ ಬಲಕ್ಕೆ) ಡಾ॥ ಎಂ. ಎಸ್. ಎಸ್. ಮೂರ್ತಿ ಡಾ॥ ಎಚ್. ಎಸ್. ಎಂ. ಪ್ರಕಾಶ್, ಡಾ॥ ಎಂ. ವೆಂಕಟಸ್ವಾಮಿ, ಡಾ॥ ರಹಮತ್ ತರೀಕೆರೆ ಶ್ರೀ ಜಯಂತ ಕಾಯ್ಕಿಣಿ, ಡಾ॥ ಮಹಾಬಲೇಶ್ವರ ರಾವ್, ಶ್ರೀ ವೈ. ಜಿ. ಮುರಳೀಧರ ಶ್ರೀ ಆರ್. ಎಸ್. ರಾಜಾರಾಮ್.

ಅಮೆರಿಕಾದಿಂದ ವಾಪಸ್ಸು ಬಂದಿರುವ ಡಾ॥ ಖಾದರ್ ತಮ್ಮ ಜಮೀನಿನಲ್ಲಿ ಸಹಜ ಕೃಷಿಯನ್ನು ಅಳವಡಿಸಿಕೊಂಡಿದ್ದಾರೆ. ಎಳ್ಳು, ರಾಗಿ, ನವಣೆ, ಸಜ್ಜೆ, ಬೀನ್ಸ್, ಹತ್ತಿ ಮೊದಲಾದವುಗಳೊಂದಿಗೆ ಅನೇಕ ಜಾತಿಯ ಹಣ್ಣಿನ ಮರಗಳು, ಬಾಳೆಗಿಡಗಳನ್ನು ಬೆಳೆಸಿ ಮಾರಾಟ ಮಾಡುತ್ತಿದ್ದಾರೆ. 'ಆಡದೇ ಮಾಡುವವನು ರೂಢಿಯೊಳಗೆ ಉತ್ತಮನು' ಎಂಬಂತೆ ಮೊದಲು ತಾವು ಪ್ರಯೋಗಗಳನ್ನು ಮಾಡಿ ನಂತರ ಸುತ್ತಮುತ್ತಲಿನ ಹಳ್ಳಿಯ ಜನಕ್ಕೆ ಸಹಜ ಕೃಷಿಯ ಲಾಭಗಳ ಬಗ್ಗೆ ತಿಳಿವಳಿಕೆ ಮೂಡಿಸಿ ರೈತರನ್ನು ಸಂಘಟಿಸುತ್ತಿದ್ದಾರೆ. ಸಹಜ ಕೃಷಿಯಿಂದ ಬಂದ ಬೆಳೆಗಳು ಸ್ವಾದಿಷ್ಟವೂ, ರಾಸಾಯನಿಕ ಮುಕ್ತವೂ ಸತ್ವಭರಿತವಾಗಿಯೂ ಇದ್ದು, ಉತ್ತಮ ಇಳುವರಿ ಹೊಂದಿ, ಲಾಭವನ್ನು ನೀಡುತ್ತಿರುವುದರಿಂದ ರೈತನ ಸ್ಥಿತಿಯೂ ಉತ್ತಮವಾಗಿರುತ್ತದೆ; ಅವುಗಳನ್ನು ಅನುಭೋಗಿಸುವ ಜನರ ಆರೋಗ್ಯವೂ ಸುಸ್ಥಿತಿಯಲ್ಲಿರುತ್ತದೆ ಎಂಬುದು ಡಾ॥ ಖಾದರ್ ಅವರ ಅನುಭವದ ಮಾತು.

ರೈತರಿಗಾಗಿ ಅನೇಕ ಪ್ರಾಯೋಗಿಕ ಕಾರ್ಯಕ್ರಮಗಳು, ಶಿಬಿರಗಳು ಹಾಗೂ ಉಪನ್ಯಾಸಗಳನ್ನು ಕೈಗೊಂಡಿರುವ ಖಾದರ್ ಪ್ರಕೃತಿಯೊಂದಿಗೆ ಮನುಷ್ಯನ ಸಹಜ ಜೀವನ ಕ್ರಮದ ಮಹತ್ವವನ್ನು ಎತ್ತಿಹಿಡಿಯುತ್ತಾರೆ. ''ಅಣೆಕಟ್ಟುಗಳನ್ನು ನಿರ್ಮಿಸಿ ನೀರನ್ನು ಎಲ್ಲರಿಗೂ ನೀಡಲು ಸಾಧ್ಯವಿಲ್ಲ, ಅದರ ಬದಲು ತಮ್ಮ ಜಮೀನುಗಳಲ್ಲೇ ಇಂಗು ಗುಂಡಿಗಳನ್ನು ಮಾಡಿಕೊಳ್ಳುವುದರಿಂದ, ಅನೇಕ ಗಿಡಗಳನ್ನು ನೆಡುವುದರಿಂದ ಮಣ್ಣಿನ ತೇವಾಂಶ ಹೆಚ್ಚು ದಿನ ಉಳಿದು, ಕಡಿಮೆ ನೀರು ಬಳಕೆಯಾಗುತ್ತದೆ. ನೀರನ್ನು ಸಮರ್ಪಕವಾಗಿ ಕಡಿಮೆ ರೀತಿಯಲ್ಲಿ ಬಳಸಿಕೊಳ್ಳುವುದಕ್ಕೆ ಸಹಜ ಕೃಷಿ ಸಹಾಯವಾಗುತ್ತದೆ. ಅದಕ್ಕಾಗಿ ಆಗುವ ಖರ್ಚು ಬಹಳ ಕಡಿಮೆ. ಬರಿದಾಗುತ್ತಿರುವ ಜಲಸಂಪನ್ಮೂಲ, ಭೂಮಿಯ ಫಲವತ್ತತೆಯನ್ನು ವೃದ್ಧಿಪಡಿಸುವ ನಿಟ್ಟಿನಲ್ಲಿ ನಾವು ಗಂಭೀರವಾಗಿ ಯೋಚಿಸಬೇಕಾಗಿದೆ. ಅದಕ್ಕೆ ಪೂರಕವಾಗಿ ಸಹಜ ಕೃಷಿ ವರದಾನವಾಗಿದೆ. ಆದ್ದರಿಂದ ಮೈಸೂರಿನ ಸುತ್ತಮುತ್ತ ಕೊನೆಯ ಪಕ್ಷ ಒಂದು ಸಾವಿರ ಎಕರೆಯಷ್ಟು ಪ್ರದೇಶ ಈ ಕೃಷಿಗೆ ಒಳಪಟ್ಟಲ್ಲಿ ಜನರು ಆರೋಗ್ಯಕರವಾದ ಆಹಾರ ಸೇವನೆ ಮಾಡಬಹುದು. ಅದಕ್ಕಾಗಿ ನಾನು ಪ್ರಯತ್ನಿಸುತ್ತಿದ್ದೇನೆ'' ಎಂದು ಕಳಕಳಿಯಿಂದ ಹೇಳುತ್ತಾರೆ. ರೈತರಿಗೆ ಮಾರ್ಗದರ್ಶನ ನೀಡುವುದಕ್ಕಾಗಿ 'ತುಂಡು ಭೂಮಿಯ ಬಿಡುಗಡೆ, ವಿಶ್ವದ ಬಿಡುಗಡೆ' ಎಂಬ ಚಿಕ್ಕ ಹೊತ್ತಿಗೆಯನ್ನೂ ಪ್ರಕಟಿಸಿದ್ದಾರೆ.

ಪ್ರಕೃತಿಯೊಂದಿಗೆ ಜೀವಿಸಬೇಕೆನ್ನುವ ಮನೋಭಾವದ ಡಾ॥ ಖಾದರ್ ಹಲವಾರು ಪ್ರಯೋಗಗಳ ಮೂಲಕ ಸಹಜ ಔಷಧೀಯ ಗುಣ ಹೊಂದಿರುವ, ಅಡ್ಡ ಪರಿಣಾಮ ಉಂಟಾಗದ, ಪರಿಸರಕ್ಕೆ ಮಾರಕವಾಗದ ಹೋಮಿಯೋಪತಿ ಬಗ್ಗೆ ಆಸಕ್ತಿ ವಹಿಸಿದರು. ಹೋಮಿಯೋಪತಿ ಚಿಕಿತ್ಸೆಯನ್ನು ಅಭ್ಯಸಿಸಿ, ಅನೇಕ ರೀತಿಯ ರೋಗಿಗಳ ಚಿಂತೆಯನ್ನು ದೂರ ಮಾಡುತ್ತಿರುವ ಶ್ರೇಯಸ್ಸು ಇವರದು. ದೇವರು ಮನುಷ್ಯನ ಜೀರ್ಣಾಂಗ ವ್ಯವಸ್ಥೆಯನ್ನು ಸಸ್ಯಾಹಾರಕ್ಕಾಗಿ ಮಾತ್ರ ಎಂದು ಅದ್ಭುತವಾಗಿ ನಿರ್ಮಿಸಿದ್ದಾನೆ; ಆದರೆ ನಮ್ಮಲ್ಲಿ ಮಾಂಸಾಹಾರ ಸೇವನೆ ಹೆಚ್ಚುತ್ತಿರುವುದು ದುರದೃಷ್ಟಕರ, ಎನ್ನುತ್ತಾರೆ. ನಾವಿರುವ ಪರಿಸರಕ್ಕನುಗುಣವಾಗಿ ಸಿಗುವ ಸಹಜ ಉತ್ಪನ್ನಗಳನ್ನು ಸೇವಿಸಬೇಕು. 'ಊಟ ಬಲ್ಲವನಿಗೆ ರೋಗವಿಲ್ಲ' ಎನ್ನುವ ಮಾತು ಅನುಭವದಿಂದಲೇ ಬಂದಿರುವುದು ಎನ್ನುವ ಇವರು ಔಷಧದೊಂದಿಗೆ ಆಹಾರ ಸೇವನೆಯ ಬಗ್ಗೆ ನಾಗರಿಕರಲ್ಲಿ ಜಾಗೃತಿ ಮೂಡಿಸುವ ಪ್ರಯತ್ನದಲ್ಲಿದ್ದಾರೆ. ''ಸಹಜ ಕೃಷಿ ಪದ್ಧತಿಯಲ್ಲಾಗಲೀ ಹೋಮಿಯೋಪತಿಯಲ್ಲಾಗಲೀ ನನ್ನ ಯೋಚನೆ ಮನುಷ್ಯರಿಗೆ ನಿಲುಕುವಂತಾದರೆ ನನ್ನ ಶ್ರಮ ಸಾರ್ಥಕ'' ಎಂದು ಚಿಂತಿಸುವ ಡಾ॥ ಖಾದರ್ 'ನಾನುಂಟು ಮೂರು ಲೋಕವುಂಟು' ಎಂದು ಇರುವ ಜನರ ನಡುವೆ ವಿಭಿನ್ನ ವ್ಯಕ್ತಿಯಾಗಿ ಕಂಡುಬರುತ್ತಾರೆ. ಇವರು ಪ್ರಕೃತಿಯಲ್ಲಿ ಮಾನವನು ಕೂಡ ಒಂದು ಪ್ರಾಣಿ, ಎಲ್ಲಾ ಸಹ ಜೀವಿಗಳಂತೆಯೇ ಅವನೂ ಬದುಕಬೇಕು; ಪ್ರಾಣಿಗಳು ಮಾಡದ ಪ್ರಕೃತಿಯ ನಾಶವನ್ನು ಮಾನವ ಮಾಡುವುದು ಎಷ್ಟು ಸರಿ, ಎಂದು ಕೇಳುತ್ತಾರೆ ಡಾ॥ ಖಾದರ್.

ಡಾ॥ ಖಾದರ್ ಅವರ ದೂರವಾಣಿ ಸಂಖ್ಯೆ : ೨೫೪೪೫೩೮೯.

ಸಿ. ಎಸ್. ಪೂರ್ಣಿಮಾ
ಇಂಗ್ಲಿಷ್ ಅಧ್ಯಾಪಕಿ
ನಂ. ೨೯೨, ಇ – ಬ್ಲಾಕ್, ವಿಜಯನಗರ, ೩ನೇ ಹಂತ, ಮೈಸೂರು - ೧೭



# ಪವಾಡಿಗ ಸಂತರ 'ರಾಜ ಇನ್ನಿಲ್ಲ'; 'ರಾಜ ಚಿರಕಾಲ ಇರುವ'

**ಸಾ**ಯಿಬಾಬ ಇನ್ನಿಲ್ಲ. ಅವರ ಖ್ಯಾತಿ ಗಗನಕ್ಕೇರಿ ನಿಂತಿದೆ. ಕಾರಣ ಇಷ್ಟೆ: ಇವರ ಹಾಗೆ ಯಾರೂ, ಇಷ್ಟು ಅಲ್ಪ ಕಾಲದಲ್ಲಿ ಈ ಸ್ಫೋಟಕ ವೇಗದಲ್ಲಿ ಹಲವು ವಿಷಯಗಳಲ್ಲಿನ ದಾಖಲೆಗಳ ಈ ಮಟ್ಟವನ್ನು ತಲಪಿರಲಿಲ್ಲ. ಹಿಂದೆಂದೂ ಎಲ್ಲಿಯೂ ಸಹ, ಏಕೈಕ ವ್ಯಕ್ತಿಯೊಬ್ಬನ ಪ್ರಭಾವದಲ್ಲಿ ಇಷ್ಟು ಹೆಚ್ಚಿನ ಸಂಖ್ಯೆಯ ಇಷ್ಟೊಂದು ಅನನ್ಯಶರಣರಾದ ಭಕ್ತರು ಇನ್ನು ಯಾವ ದೈವಿಕ ಗುರುವಿಗೂ ಸಿಕ್ಕಿರಲಿಲ್ಲ. ಉನ್ನತ ರಾಜಾಶ್ರಯವಾಗಲಿ ಮಠಮಾನ್ಯಗಳ ಬೆಂಬಲ, ಬಂಡವಾಳಗಳಾಗಲಿ ಇಲ್ಲದೆಯೆ ಇಷ್ಟು ಭಾರಿ ಮೊತ್ತದ ಧನ, ಚಿನ್ನ, ಆಸ್ತಿಪಾಸ್ತಿಗಳನ್ನು ಯಾರೂ ಹೀಗೆ ಸಂಗ್ರಹಿಸಿರಲಿಲ್ಲ. ಎಲ್ಲ ಜಾತಿಮತಗಳ ಜನ ಇವರ ಶರಣುಹೊಕ್ಕರು. ಜನಸಂದಣಿ ಇರುವಲ್ಲೆಲ್ಲ ಹಾಜರಿ ಹಾಕಿ ಕೈಮುಗಿವ ರಾಜಕಾರಣಿಗಳಲ್ಲೂ ಸಹ, ಹೆಚ್ಚು ಹೆಚ್ಚಿನ ಮಟ್ಟದವರು ಹೆಚ್ಚುಹೆಚ್ಚು ಸಂಖ್ಯೆಗಳಲ್ಲಿ ದರ್ಶನಮಾಡಿ, ಹೆಚ್ಚು ಸಲಾಮುಗಳನ್ನು ಹಾಕಿದರು. ಶರಣು ಹೊಕ್ಕವರೆಲ್ಲರ ಆತ್ಮಸಮರ್ಪಣೆಯ ಅತಿರೇಕವು ಮತ್ತೂ ಮೇಲೇರಿತ್ತು. ಒಂದು ಉದಾಹರಣೆ ಸಾಕು : ಬಹು ಪ್ರಸಿದ್ಧ ಉಚ್ಚ ನ್ಯಾಯಾಧೀಶರೊಬ್ಬರು, 'ನಾನು ಕೊಡುತ್ತಿದ್ದ ಪ್ರತಿಯೊಂದು ಮೊಕದ್ದಮೆಯ ತೀರ್ಪೂ, ಬಾಬಾರವರೇ 'ಡಿಕ್ಟೇಟ್'ಮಾಡಿ (ಆಜ್ಞೆ ಕೊಟ್ಟು) ನನ್ನ ಕೈಹಿಡಿದು ಬರೆಸಿದಂತಿರುತ್ತಿತ್ತು.' ಎಂದು ಸಾರ್ವಜನಿಕವಾಗಿ ಸಾರಿಬಿಟ್ಟಿದ್ದಾರೆ. ಹಾಗೆಂದು, ಈ ಸಂತನಲ್ಲಿ ಹಿಂದಿನ ಹಲವರಿಗಿದ್ದಂತೆ ಯಾವುದೇ ವಿಷಯದಲ್ಲಿ ಜ್ಞಾನ, ವಿದ್ವತ್ತು, ಪ್ರೌಢಿಮೆಗಳೇನೂ ಇರಲಿಲ್ಲ; ಯಾವುದೇ ಒಂದು ಮತಮೂಲದ ಮಹಾನೀತಿಯ ಪುನರುದ್ಧಾರದ ಪಂಥವನ್ನೂ ಈತ ಹೊರತರಲಿಲ್ಲ. ಯಾವ ನವೀನ ಕ್ರಾಂತಿಕಾರಿ ಸ್ಫೂರ್ತಿದಾಯಕ ನೀತಿಬೋಧೆಯನ್ನು ಮಾಡಲಿಲ್ಲ. ಹೀಗಿದ್ದವರಿಗೆ ಈ ಮಟ್ಟದ 'ಕರಿಷ್ಮಾ (ವರ್ಚಸ್ಸು)' ಹೇಗೆ ಬಂತು ? ಇಷ್ಟೊಂದು ಮಿತಿ ಗಳಿದ್ದರೂ ಈ ಭಾರಿ ಪ್ರಮಾಣದ ಜನ ಮತ್ತು ಧನಗಳ ಆಕರ್ಷಣೆಯ ಮಹಾದಾಖಲೆಗಳನ್ನು ಈ ಸಂತ ಸಾಧಿಸಿದ್ದು ಹೇಗೆ ? ಕೇವಲ ಒಂದೆರಡು ಅತಿಸರಳ 'ಪವಾಡ' ಗಳಿಗಾಗಿಯೇ ? ಅರವತ್ತು ವರ್ಷಗಳಿಗೂ ಹಿಂದೆ, ಬೀದಿಬೀದಿ ಅಲೆದು ಹೊಟ್ಟೆಹೊರೆಯುತ್ತಿದ್ದ ಹಾವಾಡಿಗನೊ, ಮಂತ್ರವಾದಿಯೊ, ನಾಗಶಕ್ತಿಯದ್ದೊ, ಪ್ರೇತವಶೀಕರಣದ್ದೊ ಮಹಿಮೆಯೆಂದು ತೋರಿಸುತ್ತಿದ್ದ ಚಿಲ್ಲರೆ ಪವಾಡಗಳಿಗಿಂತ, ಇವು ಹೇಗೆ ತಾನೆ ಶ್ರೇಷ್ಠ ಎನ್ನಲು ಸಾಧ್ಯ ?

ಡಾ॥ ಎಮ್. ಎನ್. ಕೇಶವ ರಾವ್

ಹೇಗಾದರೇನು, ಜಗದ್ಗುರುವಾಗಿ ಹೋದ ಸಾಯಿಯವರನ್ನು ಮಹಾಸಂತರೆನ್ನುವುದಕ್ಕೆ ಎಂತಹ ಅಡ್ಡಿ ? ಆದರೂ ಹಲವಾರು ವಿಖ್ಯಾತ ವಿಜ್ಞಾನಿಗಳು, ಅನೇಕ ವೈಜ್ಞಾನಿಕ ಮನೋಭಾವಿ ಚಿಂತಕರು ಅವರನ್ನು ವಿರೋಧಿಸಿದರು. ಭಕ್ತರ ಸಂಖ್ಯೆಯ ಎದುರು ಈ ವಿಚಾರವಾದಿ ವಿರೋಧಿಗಳ ಸಂಖ್ಯೆ ಅತ್ಯಲ್ಪವಾದರೂ ವಿರೋಧದ ಅಲೆಯ ತೀಕ್ಷ್ಣತೆ ಎಲ್ಲರನ್ನೂ ಎಚ್ಚರಿಸಿತು. ವಿರೋಧಿಗಳಲ್ಲಿ, ಇದಕ್ಕೆ ಹಿಂದೆ ಸಾಮಾನ್ಯವಾಗಿ ಇರದಿದ್ದ ಸಾಮಾಜಿಕ ಪರಿಜ್ಞಾನ, ಅಲ್ಪಸಂಖ್ಯಾತರು ಬಹುಸಂಖ್ಯಾತರನ್ನು ಎದುರಿಸುವ ಸಾಹಸದ ಚಟುವಟಿಕೆಗಳು, ಸಂಘಟನೆ, ಸಾಮೂಹಿಕ ನಿಲುವು, ಇವೂ ಉತ್ತೇಜಿತವಾದವು. ಈ ವಿರೋಧದ ಮುಖ್ಯ ಆಕ್ರಮಣ ಕೇಂದ್ರೀಕೃತವಾಗಿದ್ದದ್ದು ಸಾಯಿಯ ಪವಾಡಗಳನ್ನು ಅಲ್ಲಗಳೆದು ಅವು ಕೈಚಳಕ ಮಾತ್ರದಿಂದಾದ 'ವಂಚನೆ'ಗಳೆಂದು ತೋರಿಸಿ ಕೊಡುವುದರಲ್ಲಿ. ಅಬ್ರಹಾಂ ಕೋವೂರ್, ಪ್ರೇಮಾನಂದ್, ನರೇಂದ್ರ ನಾಯಕ್ ಮತ್ತು ಅನೇಕರು ಸಾಯಿಯವರಂತೆಯೆ ಶೂನ್ಯದಿಂದ ವಿಭೂತಿ 'ಸೃಷ್ಟಿಸಿ' ಹಂಚಿ ತೋರಿಸಿದರು. ಪವಾಡಭಂಜಕರೆಂದು ಪ್ರಸಿದ್ಧರಾದ ಪ್ರೇಮಾನಂದ್, ಸಾಯಿಯವರ ಕೆಲವು ಕಾನೂನುಬಾಹಿರ ಆಚಾರ ವ್ಯವಹಾರಗಳಿಗಷ್ಟೇ ಅಲ್ಲದೆ, ಹೊಸ ಭಾರಿ ಬೆಲೆಯ ವಿದೇಶಿ ಕೈಗಡಿಯಾರಗಳನ್ನು ಕಳ್ಳ ಆಮದು ಮಾಡಿದರೆಂದು ಸಹ, ಕೋರ್ಟ್‌ನಲ್ಲಿ ಮೊಕದ್ದಮೆ ಹೂಡಿದರು; ಪುಸ್ತಕಗಳಲ್ಲಿ, 'ಇಂಡಿಯನ್ ಸ್ಕೆಪ್ಟಿಕ್' ಮಾಸಪತ್ರಿಕೆಯಲ್ಲಿ ಇವರ ಅನೇಕ ಆಚಾರ ವ್ಯವಹಾರಗಳನ್ನು ವಿರೋಧಿಸುವ ನೂರಾರು ಲೇಖನಗಳನ್ನು ಪ್ರಕಟಿಸಿದರು. ಇಂತಹ ಸಂಪ್ರದಾಯ-ವಿರೋಧಕ್ಕೆ ಮೀಸಲಾದ ಪತ್ರಿಕೆ ಭಾರತದಲ್ಲಂತು ಒಂದು ಪ್ರಪ್ರಥಮ ಸಾಹಸ ! ಪ್ರೊ॥ ಎಚ್. ನರಸಿಂಹಯ್ಯನವರು ವಿಭೂತಿಯ ಬದಲು ಒಂದು ಕುಂಬಳಕಾಯಿಯ ಪ್ರಸಾದ ಕೇಳಿ ಸವಾಲಿನಲ್ಲಿ ಗೆದ್ದರು. ಜಾದುಗಾರ ಸರ್ಕಾರ್, ಸಾಯಿಯವರಿಂದ ಪಡೆದ ವಿಭೂತಿಯ ನೂರು ಪಾಲಷ್ಟನ್ನು ಹಿಂತಿರುಗಿಸಿ, 'ಮ್ಯಾಜಿಕ್‌ಗಳನ್ನು ಪವಾಡಗಳೆನ್ನುವವರೆಲ್ಲ ವಂಚಕರು' ಎಂದು ಅಲ್ಲಗಳೆದರು. ವಿಜ್ಞಾನಿ ನಾಯುಡಮ್ಮ, ತನ್ನ ಬಾಸ್ ಭಗವಂತಂ ಅವರ ಬಲವಂತಕ್ಕೆ ಸಾಯಿಯವರಿಗೆ ಕೈಮುಗಿದು, ಮುಗಿದ ಕೈಗಳ ಮಧ್ಯೆ ಒಂದು ಹುಲ್ಲುದಳದ ಪ್ರಸಾದ ಕೇಳಿ ದಂಗುಬಡಿಸಿದರು. ಎಲ್ಲದಕ್ಕು ಈ ಜಾಣ ಪವಾಡಿಗ ಸಂತ ನಿರುತ್ತರರೆ !

ಬಹುಕಾಲ ಬದುಕಿ ಇಚ್ಛಾಮರಣಿಯಾಗುವ ಸಾಯಿಯವರ ಅಂತಿಮ ಪವಾಡ ಫಲಿಸಲಿಲ್ಲ, ನಿಜ; ಆದರೆ, ಸಾಯಿಬಾಬನ ಮರು ಅವತಾರದ ಭವಿಷ್ಯವಾಣಿಯನ್ನು ಭಕ್ತಜನ ನಡೆಸಿಯೇ ಕೊಡುತ್ತಾರೆ; ಉತ್ಸಾಹದ ಬುಗ್ಗೆಗಳಲ್ಲಿ; ಹಲವು ಬಾರಿ, ಹಲವಾರು ಸ್ಪರ್ಧಿಗಳ ಸಂಘರ್ಷಮೇಳಗಳ ಸಹಿತ ! ''ರಾಜ ಸತ್ತ; ರಾಜ ಚಿರಕಾಲ ಬಾಳಲಿ !'' ಎಂಬ ಇಂಗ್ಲಿಷ್ ನಾಣ್ಣುಡಿಯಂತೆಯೆ, ಈ ಪವಾಡಿಗ ಸಂತರ 'ರಾಜ ಇನ್ನಿಲ್ಲ; ರಾಜ ಚಿರಕಾಲ ಇರುವ !'.

ಪಾಪ ! ಈ ಪವಾಡಿಗ ಸಂತನನ್ನು ಇಷ್ಟು ಗೇಲಿ ಮಾಡಬಾರದಿತ್ತು, ಈ ಜನರು ! ಈ ಜಗತ್ತಿನ ಇತಿಹಾಸದಲ್ಲಿ ಎಷ್ಟು ಅಸಾಧ್ಯದ ಪವಾಡಗಳನ್ನು ಸಂತರುಗಳು ಮಾಡಿಲ್ಲ? ಯಾವುದೇ ದೇವಸ್ಥಾನದ ಎಷ್ಟೊಂದು ಭಕ್ತರು

# ಆ-ಗಳು



ತೆವಳುತ್ತಾ
ಆಟಿಕೆಗಳ ಮಧ್ಯೆ
ಜಾರಿಬಿದ್ದು ನೋವಾಗಿ
ಚೀರಾಟ
ಎಲ್ಲರೂ ಬಂದು ಎತ್ತಿ
ಮುದ್ದಿಸಿ
ಅಪ್ಪಿಕೊಂಡು
ಎಲ್ಲರ ಕೇಂದ್ರಬಿಂದುವಾದ
ಆ ದಿನಗಳು

ಎಷ್ಟೋ ಸಾರಿ
ಅಪ್ಪನ ಮುತ್ತಿಗೆ
ಗಡ್ಡ ಮೀಸೆ
ಚುಚ್ಚಿ ಅತ್ತಾಗ
ಅಮ್ಮನ ಹಗುರ
ಅಪ್ಪುಗೆಯಲಿ
ನೋವು ಮಾಯವಾದ
ಆ ಮಧುರ ಸ್ಪರ್ಶಗಳು

ಅಮ್ಮ
ಚಂದಾಮಾಮನ ತೋರಿಸಿ
ಗುಮ್ಮನ ಕಲ್ಪನೆಗೆ ಭಯಪಟ್ಟು
ಬೇಡವಾದುದ್ದನ್ನೆಲ್ಲ
ಬಲವಂತವಾಗಿ ತಿಂದ
ಆ ಘಳಿಗೆಗಳು

ತಲೆಗೆ
ಅಕ್ಷರ, ಅರ್ಥ, ಜ್ಞಾನ
ಕಾಮನ ಬಿಲ್ಲಿನ ಬಣ್ಣದ ಓಕುಳಿ
ಕುಂಟಬಿಲ್ಲೆ, ಚೆನ್ನೆಮಣೆ
ಚೌಕಾಬಾರಾ, ಹಾವು ಏಣಿ
ಆಟಗಳ
ಆ ಕಾಲಗಳು

ಅಕ್ಕ ತಂಗಿ
ಅಣ್ಣ ತಮ್ಮಗಳೊಂದಿಗೆ
ಜಗಳ
ತಾತಾ ಅಜ್ಜಿಯರು
ಹೆಣೆದ ಕಥೆಗಳು
ಗುರು, ಸ್ನೇಹಿತರ
ಆ ಸಂಬಂಧಗಳು

ಎಲ್ಲವೂ ಮಾಸಿ
ಕಣ್ಣಿಗೆ ಕತ್ತಲಾಗುವ ಮುನ್ನ
ದೂರದ ಆಕಾಶದಲಿ
ಹೊಳೆವುದು ಅಲ್ಲಲ್ಲಿ
ನಗೆಯ
ನಕ್ಷತ್ರಗಳು

**ಕಮಲಂ ಅರಸು**
ಸಂಖ್ಯೆ ೧೧, ೧೦ನೇ ಅಡ್ಡರಸ್ತೆ ೩ನೇ ಲೇಔಟ್
ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

ಇನ್ನೂ ಅತಿ ವಿಚಿತ್ರ ಪವಾಡಗಳನ್ನು ಕಣ್ಣಾರೆ ಕಂಡ ಸಾಕ್ಷ್ಯ ಘೋಷಿಸಿಲ್ಲ? ತಮಗೂ ನಡೆಯಿತೆಂದು ಆಣೆ ಇಟ್ಟಿಲ್ಲ? ಸಾವಿರಾರು ಸ್ಥಳಪುರಾಣಗಳಲ್ಲಿ ಬರೆದಿಟ್ಟಿಲ್ಲ? ಅವುಗಳಿಗೆ ಹೋಲಿಸಿದರೆ ಈ ಸಂತ ಪ್ರದರ್ಶಿಸಿದ್ದು ಚಿಲ್ಲರೆ ಪವಾಡಗಳಷ್ಟೆ! ಯಾರೆಂದರವರು ಎರಡು ದಿನದಲ್ಲಿ ಕಲಿತು ಮಾಡಬಹುದಾದವನ್ನು ಮಾತ್ರ! ಜೊತೆಗೆ ಈತ ತನ್ನ ದೈವಕಾರ್ಯದ ಆರಂಭಕ್ಕೆ ಆರಿಸಿಕೊಂಡದ್ದು, ಶಿರಡಿ ಸಾಯಿಬಾಬಾನ ಅವತಾರವನ್ನಲ್ಲವೇ? ಅವತಾರವೆನ್ನಲಿಕ್ಕೆ ಈ ಜನಾಕರ್ಷಣೆಯ ಪವಾಡ-ಯುಕ್ತಿ ಬೇಕೇ ಇತ್ತಲ್ಲವೇ? ಇಷ್ಟು ಕಡಿಮೆ ಬಂಡವಾಳದಿಂದ ಇಷ್ಟು ಭಾರಿ ಸಾಮ್ರಾಜ್ಯವನ್ನು ಕಟ್ಟಿದ ಈತ ವಿಚಾರವಾದಿಗಳಿಂದ ನಿಂದನೆಗಷ್ಟೇ ಅಲ್ಲ, - ಅಭಿನಂದನೆಗೂ ಖಂಡಿತವಾಗಿಯೂ ಅರ್ಹ! ಒಂದು ಬಾರಿ ಸಫಲನಾದ ಮೇಲೆ, ತಂತ್ರವನ್ನು ಬಿಡಬಹುದಿತ್ತೇನೋ? ಆದರೆ ಆ ಅನಗತ್ಯ ಅಪಾಯ ತಂದುಕೊಳ್ಳುವುದು ಬೇಡವೆನಿಸಿತೇನೋ? ಜೊತೆಗೆ, ಮಕ್ಕಳಂತೆ ಈ ಚಮತ್ಕಾರಕ್ಕೆ ತೃಪ್ತಿಗೊಂಡು ಉದ್ಧಾರವಾದೆವೆಂದು ಹೇಳಿಕೊಳ್ಳುತ್ತಿದ್ದ ಅಪಾರ ದಾನಿ ಭಕ್ತವೃಂದಕ್ಕೆ ನಿರಾಶೆ ಮಾಡಲಿಕ್ಕೆ ಮನಸ್ಸಾಗಿರಲಿಕ್ಕಿಲ್ಲ; ಅತಿಸ್ನೇಹೀ ವರ್ತನೆಗಳಿಗೂ ಹೆಸರಾದವರು ಅವರು! ಆ ಶಿಷ್ಯವೃಂದದಲ್ಲಿನ ಕೆಲವೇ ಚಿಂತಕರಾದರೂ ಈ ಚಮತ್ಕಾರಗಳ ಬಗ್ಗೆ ಅಸಮಾಧಾನಗೊಂಡಿರಬೇಕು; ನಂತರ ಇಂತಹದೊ ಎಂತಹದೊ ಸಮಾಧಾನವೊಂದನ್ನು ಹುಡುಕಿಕೊಂಡಿರಬೇಕು! ಎಲ್ಲಾ ಮತಧರ್ಮಿಗಳೂ, ತಮ್ಮ ಸ್ವಂತ ಸಂತ ಜಂಗುಳಿಯ ವರ್ತನೆಯ ಬಗ್ಗೆ ನಿರಸನಗೊಂಡರೂ, 'ಸಂಶಯದಿಂದ ವಿನಾಶ' ಆಗದಿರುವುದಕ್ಕೆ, ಇಂತಹ ಭ್ರಾಂತಿಗಳನ್ನು ಮೊರೆಹೋಗಲೇ ಬೇಕು; ಇಲ್ಲದಿದ್ದರೆ, 'ಸ್ವಧರ್ಮದಲ್ಲಿಯೇ ನಿಧನರಾಗುವ ಶ್ರೇಯಸ್ಸು' (ಅಂದರೆ, ಆಮರಣಾಂತ ಶರಣಾಗತಿಯ ಕೈವಲ್ಯ) ಕೈತಪ್ಪಿ ಹೋಗಬಹುದು!

ಪ್ರತಿಸಂತರಿಂದ ಪವಾಡ ನಡೆಸುವ ಗೀಳು ಭಾರತವಾಸಿಗಳಿಗಷ್ಟೆ ವಿಶೇಷವಲ್ಲ. ಇದು ದೈವಿಕ ಮತೀಯತೆಯಷ್ಟೆ ಮೂಲಭೂತವಾಗಿ ಮಾನವರಿಗೆಲ್ಲ ಅಂಟಿಕೊಂಡದ್ದು. ಬಹುಶ್ರಮದ ಬೇಟೆಗೆ ಮತ್ತು ಅದರಿಂದ ಪಡೆದ ಆಹಾರದ ಶೇಖರಣೆಗೆ ಅನುಕೂಲವಾಗುವಂತೆ ಗುಂಪುಕಟ್ಟಿ ಜೀವನ ನಡೆಸುವ ಪ್ರವರ್ತನೆಯನ್ನು ಬೆಳೆಸಿಕೊಂಡ ಆದಿ ಮಾನವಸಂಕುಲಗಳಲ್ಲಿಯೆ, ಬಯಸಿದ್ದನ್ನೆಲ್ಲ ಶ್ರಮವಿಲ್ಲದೆ ಪಡೆದುಕೊಳ್ಳುವ ಕನಸುಗಳ ಕಲ್ಪನೆ ಪ್ರಾರಂಭ ಆಗಿಬಿಟ್ಟಿತ್ತು. ಆ ಕುಲಗಳಲ್ಲಿ, ಅಲ್ಪ ಶ್ರಮದಲ್ಲಿ ಹೆಚ್ಚು ಲಾಭ ಪಡೆಯುವ ಕ್ರಿಯಾತಂತ್ರಗಳನ್ನು ಪ್ರಯೋಗಗಳಲ್ಲಿ ಕಂಡುಕೊಂಡ ಕೆಲವು ಬುದ್ಧಿವಂತರು, ಅವುಗಳನ್ನು ಬಹಿರಂಗ ಪಡಿಸದೆ 'ಮ್ಯಾಜಿಕ್(ಪ್ರಕೃತಿಗೆ ಮೀರಿದ ವಿದ್ಯಮಾನ, ಯಕ್ಷಿಣಿ, ಮಂತ್ರವಿದ್ಯೆ)'ಅನ್ನು ಮಾಡಿ ತೋರಿಸಿ, ಇವು, 'ತಮ್ಮ ಅಮಾನುಷ ಶಕ್ತಿಯ ನಿದರ್ಶನಗಳು' ಎಂದು ಕಥೆಕಟ್ಟಿ ಹೇಳಿ, ಕುಲಗೌರವದ ಶ್ರೇಷ್ಠ ಸ್ಥಾನಮಾನಗಳನ್ನು ಪಡೆಯತೊಡಗಿದರು. ಆ ಹಿಂದಿನ ಪುರೋಹಿತಶಾಹಿ ಜಾದುಗಾರ-ಪವಾಡಿಗರೇ, ಮುಂದಿನ ವಿಜ್ಞಾನ ಪ್ರವರ್ತಕರು! ವಿವಿಧ ದೇವರುಗಳನ್ನು ಹುಟ್ಟುಹಾಕಿ ಬೆಳೆಸಿದ ಪೂಜಾರಿಗಳು! ಹಾಗೆಯೆ ಸಂತರೂ ಸಹ! ಮ್ಯಾಜಿಕ್‌ನೊಡನೆ ಪವಾಡಗಳ ಸಂಬಂಧ ಇಷ್ಟೊಂದು ಹಳೆಯದು. ಈ ಸ್ವಾರಸ್ಯಮಯ 'ಆಂಥ್ರೋಪಾಲಜಿ'ಯ (ಪ್ರಾಚೀನ ಮಾನವಶಾಸ್ತ್ರದ) ಅಧ್ಯಯನವನ್ನು ಇಲ್ಲಿ ಮುಂದುವರಿಸದೆ, ಮತಗಳು ಇಂತಹ ಪವಾಡಗಳ ಭ್ರಮೆಗಳನ್ನು ಬೆಳೆಸಿ ಬಳಸುವ ಕಸರತ್ತಿನಲ್ಲಿ ತಾವೂ ಸಿಲುಕಿ ಪಾಡುಪಡುವುದನ್ನು ನೋಡೋಣ.

ಇಂತಹ ಪವಾಡಗಳನ್ನು ಒಂದು ಮಾನ್ಯ ಸಿದ್ಧಾಂತದ ಸಂಘಟಿತ ಮಟ್ಟಕ್ಕೇರಿಸಿ, ಅದರಡಿಯಲ್ಲಿ ಸಿಕ್ಕಿ ಇನ್ನೂ ಹೆಣಗಾಡುತ್ತಿರುವ ಮತ, ಜಗದಾದ್ಯಂತ ವ್ಯಾಪ್ತಿಯ ಮಹಾಶಕ್ತ ಕ್ಯಾಥೊಲಿಕ್ ಮತ. ಹಳೆಯ ಯೆಹೂದಿ ಮತವನ್ನು ಧಿಕ್ಕರಿಸಿ, ಹೊಸ ಮತ ಕಟ್ಟುವ ಸಂಭ್ರಮದಲ್ಲಿ, ಹಳೆಯ ಮತದ ಸುಧಾರಕನಾಗಿದ್ದ ಮತ್ತು ಪವಾಡಿಗ ಮಹಾಸಂತನೆಂದು ಹೆಸರು ಮಾಡಿದ್ದ ಏಸುಕ್ರಿಸ್ತನನ್ನು ಪ್ರವಾದಿಯಾಗಿ ಇಟ್ಟುಕೊಂಡು, ಜನಾಕರ್ಷಣೆಯ ಕಥೆಗಳ ಲಾಭ ಪಡೆದ ಮೇಲೆ, 'ಪವಾಡಿಗರಾಗಿರದವರು

ನಿಜವಾದ ಸಂತರಲ್ಲ' ಎನ್ನುವ ಹಳೆಯ ಸಂಪ್ರದಾಯವನ್ನು ಈಗ ಸಹ ಬಿಡಲಾಗುತ್ತಿಲ್ಲ. ಯಾವುದೇ ಕ್ರಿಶ್ಚಿಯನ್ ವ್ಯಕ್ತಿಯನ್ನು ಸಂತನೆಂದು ಅಧಿಕೃತಗೊಳಿಸುವುದಕ್ಕೆ ಇವರು ಆರಿಸಿಕೊಂಡಿರುವ ಕಟ್ಟಳೆ ಬಹಳ ವಿಚಿತ್ರವಾದುದು. ಆ ವ್ಯಕ್ತಿ ಕಡೆಯ ಪಕ್ಷ ಎರಡು (-ಒಂದು ಸಾಲದು) ಪವಾಡಗಳನ್ನಾದರೂ ಮಾಡಿರಲೇಬೇಕು. ಇದಕ್ಕಾಗಿ ಕ್ಯಾಥೊಲಿಕ್ ಚರ್ಚು, ಕೋರ್ಟಿನ ಮೊಕದ್ದಮೆಯಂತೆ ತಾನೇ ನಡೆಸುವ ಪರ ಮತ್ತು ವಿರುದ್ಧ ವಾದಗಳಲ್ಲಿ, ಸಾಕಷ್ಟು ಸಾಕ್ಷ್ಯ ಪುರಾವೆಗಳನ್ನು ಒದಗಿಸಬೇಕು. ಇವನು ಸಂತನಲ್ಲ ಎಂದು ಸೈತಾನನಂತೆ ವಾದಿಸುವುದಕ್ಕೂ, ಅದೇ ಚರ್ಚಿನ ಬಿಷಪ್‌ಗಳಿಗೂ ಮೇಲಿನ ಒಬ್ಬ ಪಾದ್ರಿ ನಿಯುಕ್ತನಾಗಿರಬೇಕು. ಇವನನ್ನೆ 'ಡೆವಿಲ್ಸ್ ಅಡ್ವೋಕೇಟ್ (ಸೈತಾನನ ವಕೀಲ)' ಎನ್ನುವುದು. (ಈ ಸಂದರ್ಭದಲ್ಲಿ ಹುಟ್ಟಿಕೊಂಡ ಈ ಪದ ನುಡಿಗಟ್ಟಾಗಿ, ಇಂಗ್ಲಿಷ್ ಭಾಷೆಯಲ್ಲಿ ಸ್ಥಾನ ಗಳಿಸಿದೆ.) ಇದುವರೆಗೂ ಹತ್ತು ಹದಿನೈದು ಸಾವಿರಕ್ಕೂ ಹೆಚ್ಚು ಮನುಷ್ಯರನ್ನು ಪವಾಡಿಗ ಸಂತರು ಎಂದು ಚರ್ಚ್ ಘೋಷಿಸಿಬಿಟ್ಟಾಗಿದೆ, ಅವರಲ್ಲಿ ಹಲವು ಮಹಾಸಂತರು, ಅವರ ಕಾಲದಲ್ಲಿ ಅವರಿಂದ ನಡೆಯಿತು ಎನ್ನಲಾದ ಪವಾಡಗಳಿಗೆ ಅನುಗುಣವಾಗಿ, ಯಾರು ಯಾರು ಯಾವ ಯಾವ ಪೋರ್ಟ್‌ಫೋಲಿಯೊಗಳ (ರೋಗನಿವಾರಣೆ, ಪರೀಕ್ಷೆಗಳಲ್ಲಿ ರ್‍ಯಾಂಕು, ಸಂತಾನಭಾಗ್ಯ, ಪ್ರೇಮಿಯ ವಶೀಕರಣ, ಮಳೆಬೆಳೆ ಪ್ರಾಪ್ತಿ, ಇತ್ಯಾದಿ ಕಾರ್ಯಖಾತೆಗಳ) ಇಷ್ಟಾರ್ಥಗಳನ್ನೆ ಕರುಣಿಸುವರು ಎಂದು ಭಕ್ತರು ತಮ್ಮ ನಂಬಿಕೆಗಳಲ್ಲಿ ನಿಗದಿ ಮಾಡಿಬಿಟ್ಟಿದ್ದಾರೆ. ಹಿಂದೂ ಹಾಗೂ ಎಲ್ಲ ಮತಗಳ ಪೌರಾಣಿಕ ದೇವತೆಗಳ ಕೆಲಸಗಳೂ ಹೀಗೆಯೆ ತಾನೆ ! ದೇವತೆಗಳನ್ನು ನಿರಾಕರಿಸಿದ ಇಸ್ಲಾಂ ಸಹ ಇದಕ್ಕಾಗಿ ಸಂತರನ್ನು, ಅವರ ಗೋರಿಗಳನ್ನು ಆರಿಸಿಟ್ಟುಕೊಂಡಿದೆ. ಧನಿಕ, ರಾಜಕೀಯ, ಅಧಿಕಾರಿ, ಮತ್ತು ಮತೀಯ ವರ್ಗಗಳ ಬಹುಶಕ್ತ ಅಭ್ಯರ್ಥಿಗಳು ಅಧಿಕೃತ ಸಂತರಾಗುವುದಕ್ಕೆ ನಡೆಸಿದ ಹುನ್ನಾರಗಳು, ಪೋಪ್ ಹಾಗೂ ವ್ಯಾಟಿಕನ್ ಯಾವುದೇ ಅಭ್ಯರ್ಥಿಯನ್ನು ಆರಿಸಲೊ ಹೊರಗಿಡಲೊ ಸ್ವೇಚ್ಛೆಗನುಸಾರ ದುರುಪಯೋಗಿಸುತ್ತಿದ್ದ ನಿಯಮಗಳು, ಇವೆಲ್ಲವೂ ಕ್ಯಾಥೊಲಿಕ್ ಚರ್ಚುಗಳ ಮುಚ್ಚಿಡಲಾಗದ ಚರಿತ್ರೆಯ ಕರಾಳ ಅಪಮಾನಕರ ಅಧ್ಯಾಯಗಳಲ್ಲಿ ದಾಖಲಾಗಿಹೋಗಿವೆ. ಈಗಿನ ಪೋಪ್ ತಮ್ಮ ಕೆಲವು ವರ್ಷಗಳಲ್ಲೆ, ಬಹು ಹಿಂದಿನ ಮತ್ತು ಈಗಿನ ೪೮೦ಕ್ಕೂ ಹೆಚ್ಚು ಅಭ್ಯರ್ಥಿಗಳಿಂದ ಪವಾಡಗಳು ನಡೆದವೆಂದು ಒಪ್ಪಿಕೊಂಡು ಸಂತರನ್ನಾಗಿ ಅಧೀಕರಿಸಿ ಹೊಸ ದಾಖಲೆ ನಿರ್ಮಿಸಿದ್ದಾರೆ. ಪ್ರತಿ ಅಧೀಕರಣದ ಈಗಿನ ಖರ್ಚು ಸುಮಾರು ೪೩,೦೦೦ ಡಾಲರ್‌ಗಳಷ್ಟು ಆಗುವುದರಿಂದ, ವ್ಯಾಟಿಕನ್ ಇದರಲ್ಲಿ ಬಹಳಷ್ಟನ್ನು ಅಭ್ಯರ್ಥಿಯ ಸ್ಥಳೀಕ ಬೆಂಬಲಿಗರಿಂದ ಪಡೆದುಕೊಳ್ಳುತ್ತದೆ. ಇಷ್ಟಾದರೂ, ಸಾವಿರಾರು ಸಂತ್ರಸ್ತರಿಗೆ ನೆರವು ನೀಡಿ ನೊಬೆಲ್ ಪ್ರಶಸ್ತಿ ಪಡೆದ ಮದರ್ ಥೆರೇಸಾಳ ವಾಸ್ತವಿಕ ಸೇವಾಕಾರ್ಯಗಳನ್ನು ಪವಾಡಗಳೆನ್ನಲಿಕ್ಕಾಗದೆ ಅವಳನ್ನು ಸಂತಳಾಗಿಸಲಾಗಿಲ್ಲ. ಪಾಪ! ಆ ತಾಯಿ, ಸಾಯಿಯವರಿಂದ ಪವಾಡ ವಿದ್ಯೆ ಕಲಿತಿದ್ದರೆ ಸುಲಭದಲ್ಲಿ ಸಂತಳಾಗಬಹುದಿತ್ತೇನೊ !

ಸಾಯಿಯವರೇ ನಡೆಸುವರೆಂದು ಭಕ್ತರಿಂದ ಹೇಳಲಾಗುತ್ತಿದ್ದ ಅನೇಕ ಸಂಘ, ಸಂಸ್ಥೆ, ವ್ಯವಹಾರ, ಜನೋಪಯೋಗಿ ನಿರ್ಮಾಣಗಳು ಕಳೆದ ೨೦-೩೦ ವರ್ಷಗಳಲ್ಲಿ ವ್ಯವಸ್ಥೆಗೊಂಡವುಗಳು. ಅದಕ್ಕೆ ಸಾಕಷ್ಟು ಹಿಂದೆಯೆ, ಅವರು ತಮ್ಮ ಸುತ್ತ ಕಟ್ಟಿಕೊಂಡಿದ್ದ ಮಠ, ಆಶ್ರಮ ಇತ್ಯಾದಿಗಳು ಅವರ ವ್ಯಕ್ತಿಶಃ ಆಸಕ್ತಿ, ಉದ್ದೇಶ, ವ್ಯವಹಾರಜ್ಞಾನಗಳನ್ನು ಮೀರಿ ನಡೆಯತೊಡಗಿದ್ದವು; ಅವರು ಯೋಚಿಸಿರದ ಹೊಸ ತಿರುವುಗಳು, ಕವಲುಗಳು ಆರಂಭವಾಗಿದ್ದವು; ಧನಸಂಗ್ರಹಣೆ ಹಿಂದಿಗಿಂತ ಹೆಚ್ಚು ರಹಸ್ಯವಾಗಿಯೂ ಬಹುಗುಣವಾಗಿಯೂ, ವೃದ್ಧಿಯಾಗತೊಡಗಿತ್ತು. ಇಲ್ಲಿ ಇದಕ್ಕೂ ಹೆಚ್ಚು ಮುಖ್ಯವಾಗಿ ಗಮನಿಸಬೇಕಾದ ವಿಷಯ ಇನ್ನೊಂದಿದೆ. ಇದೇ ಸಮಯದಲ್ಲಿ, ಇದೇ ನಿಗೂಢ ರೀತಿಯಲ್ಲೇ, ಭಾರತದಲ್ಲಿನ ಬಹಳಷ್ಟು ಹೊಸ ಮತ್ತು ಹಳೆಯ ದೇವಸ್ಥಾನ, ಆಶ್ರಮ, ಮಾನ್ಯಮಠ, ಗುರುಪೀಠಗಳು ಬಹುಗುಣವೃದ್ಧಿಯ ಧನಸಂಗ್ರಹಣೆಯ ಜೊತೆಜೊತೆಗೆ, ಅವೇ ಸಂಸ್ಥೆ ಹಿಂದೆಂದೂ ಮಾಡದಿದ್ದ ಹೊಸ ಬಹುಮುಖಿ ಬಹುಭಾರಿ ಧನರಾಶಿಯ ಉದ್ಯಮಿಕ ಕಾರ್ಯಾಚರಣೆಗಳನ್ನು (ಶಾಲಾಕಾಲೇಜು, ವಿಶ್ವವಿದ್ಯಾಲಯಗಳು, ಇಂಜನಿಯರಿಂಗ್ ಮತ್ತು ವೈದ್ಯಕೀಯ ಮುಂತಾದ ಲಾಭದಾಯಕ ಮತ್ತು ರಾಜಕೀಯ -ಶಕ್ತಿವರ್ಧಕ ಜನೋಪಯೋಗಿ ಘಟಕಗಳನ್ನು) ನಡೆಸತೊಡಗಿದವು. ಬಹುಮಟ್ಟಿಗೆ ಅವುಗಳೆಲ್ಲ, ದೈವಿಕ, ಆಧ್ಯಾತ್ಮಿಕ, ಜಾತೀಯ ಅಥವಾ ಮತೀಯ ಪ್ರಭಾವದ ಒಬ್ಬ ವ್ಯಕ್ತಿಯ ವರ್ಚಸ್ಸಿನಲ್ಲಿ ನೆಲೆಗೊಂಡು ವ್ಯಕ್ತಿಯ ಸ್ವಂತದ್ದೆನ್ನುವಂತೆ ಬೆಳೆದು ಬಂದವೇ! ಈ ಸತ್ಯಸಾಯಿ ಸಂಸ್ಥೆ ಈಗಿನ ಮಟ್ಟಿಗೆ ಅಂತಹವುಗಳಿಗೆ ಅಗ್ರಗಣ್ಯವೆನಿಸಿದೆ. ಈ ಸ್ಥಿತಿಯಲ್ಲಿ ಇಂತಹ ಸಂಸ್ಥೆಗಳೆಲ್ಲವುಗಳಲ್ಲಿ ಈಗ ನಡೆಯುತ್ತಿರುವ ಇಂತಹ ವಿದ್ಯಮಾನಗಳ ವಿಶ್ಲೇಷಣೆ ಅತ್ಯಗತ್ಯ.

ಸಿಎಂ ಆಗಿ 'ತಿಂಗಳು' ಕಳೆದ ಸದಾನಂದ




'ನವಮಾಸ' ಕಳೆಯೋದು ಸಂಶಯವಂತೆ... ಅದ್ಕೇ ಒಂದೊಂದು ತಿಂಗಳು ಪೂರೈಸಿದ್ದಕ್ಕೆ ಸಿಹಿ ಹಂಚುತ್ತಿದ್ದೇವೆ... !

ಸಾಯಿಯವರ ಇದುವರೆಗಿನ ಸಂಗತಿಯ ಪರಾಮರ್ಶೆಯಿಂದ ಒಂದು ಉಪಯೋಗಿ ನಿರ್ಣಯವನ್ನು ಹೀಗೆ ತಲಪಬಹುದು: ಬಡಜನರ ಭಾರತದಲ್ಲಿ ಭಗವಂತರು ಬಹಳ! ವರ್ಚಸ್ಸಿನ ಒಂದು ಗುಡ್ಡವನ್ನು ಏರಿದವರನ್ನೆಲ್ಲ 'ಹಿಂದಿರದ, ಮುಂದೆಂದೂ ಬಾರದ ಮಹಿಮಾವಂತ; ಇಷ್ಟಾರ್ಥಗಳನ್ನು ಅನುಗ್ರಹಿಸಿ, ಸಕಲರನ್ನು ಸುಖವಾಗಿಡಬಲ್ಲ!' ಎಂದು ಹೇಳಿ ಜನರನ್ನು ಒಲಿಸುವುದು, ಧನ ಸಂಗ್ರಹಿಸಿ ಅದರ ಸ್ವಲ್ಪ ಭಾಗವನ್ನು ಜನೋಪಯೋಗಕ್ಕೆ ವಿನಿಯೋಗಿಸಿ ಖ್ಯಾತಿ ಪಡೆಯುವುದು ಇಲ್ಲಿಯ ಜನರ ಸಂಪ್ರದಾಯ. ತಾವು ಒಪ್ಪದಿರುವಂತಹವನ್ನೂ ಸಹ ಪ್ರಶ್ನಿಸದೆ, ಬಹುಜನರ ನಂಬಿಕೆಗಳನ್ನೆ ಮೆತ್ತೆಹಾಸಾಗಿ ಹಾಕಿಕೊಂಡು ಶವಾಸನದಲ್ಲಿ ಶಾಂತಯೋಗಿಗಳಾಗಿರುವುದು ಇಲ್ಲಿಯ ಬುದ್ಧಿಜೀವಿಗಳ ಪುರಾತನ ಚಾಳಿ. ವರ್ಚಸ್ಸನ್ನು ಯಥೇಚ್ಛವಾಗಿ ಸ್ಫೋಟಕವೇಗದಲ್ಲಿ ಉತ್ಪಾದಿಸಿ ರಾಶಿರಾಶಿಯಾಗಿ ಒದಗಿಸಬಲ್ಲ ಯಾಂತ್ರಿಕ ಹಾಗೂ ಕಾಂಟ್ರಾಕ್ಟರುಗಳ ಅನುಕೂಲಗಳಿರುವ ಆಧುನಿಕ ಯುಗದಲ್ಲಿ, ಸಾಮಾನ್ಯ ವ್ಯಕ್ತಿಯೊಬ್ಬ ಈಗಷ್ಟೆ ವರ್ಚಸ್ಸಿನ ಶಿಖರವನ್ನೇರಿ ಹೊಸ ದಾಖಲೆ ಸಾಧಿಸಿಟ್ಟಿದ್ದಾನೆ. ತತ್‌ಕ್ಷಣದ ಉತ್ಸಾಹ, ಅಭಿನಂದನೆಗಳನ್ನು ತೋರಿದ ನಂತರವಾದರೂ, ಇಂತಹ ವಿದ್ಯಮಾನದ ವಿಶ್ಲೇಷಣೆ ಮಾಡುವುದು ಅಗತ್ಯ. ಇದು ವ್ಯಕ್ತಿ ಕೇವಲವಲ್ಲದ ಒಂದು ಪ್ರಸ್ತುತ ಸಾಮಾಜಿಕ ವರ್ತನೆ, ಹಾಗೂ ಬಹು ಭಾರಿ ಧನಪ್ರಮಾಣದ ರಹಸ್ಯಮಯ ವ್ಯವಹಾರ ಎಂಬುದನ್ನು ಗಮನಿಸಿದಾಗ ಮಾತ್ರ ಈ ವಿಶ್ಲೇಷಣೆಯಿಂದ ಪಾಠ ಕಲಿಯಬಹುದು; ವಂಚನೆ ಭ್ರಷ್ಟತೆಗಳು ಕಾಣಿಸಿದರೆ ನಿವಾರಿಸಬಹುದು.

ಅನೇಕ ಪ್ರಶ್ನಾತ್ಮಕ ಅನುಮಾನಗಳು ಏಳುವುದು ಸಹಜ. ಈ ವಿದ್ಯಮಾನ ಎಂತಹುದು ? ದೈವಿಕಮತೀಯತೆ ಮತ್ತು ವಿಜ್ಞಾನಗಳ ನಡುವಣ ಶಾಶ್ವತ ಯುದ್ಧದಲ್ಲಿ ಇದು ಮತ್ತೊಂದು ಕಾಳಗವೊ ? ಹಳೆಯ ಫ್ಯೂಡಲ್ ಸಂಘಟನೆಗಳು ಹೊಸ ಬಂಡವಾಳಶಾಹಿಗೆ ಅಳವಡುತ್ತಿರುವ ತಿರುವೋ ? ಅಥವಾ, ಇಂದಿನ ಬಂಡವಾಳಶಾಹಿ, ಹಿಂದಿನ ಫ್ಯೂಡಲಿಸಂಅನ್ನು ಬಳಸಿಕೊಳ್ಳುತ್ತಿರುವ ಯುಕ್ತಿಯೊ ? ಇಂದಿನ ಆರ್ಥಿಕ ವಲಯಗಳಿಗಷ್ಟೆ ಅಲ್ಲದೆ ಎಲ್ಲ ರಾಜಕೀಯ ಮತ್ತು ಸಾಮಾಜಿಕ ವಲಯಗಳಿಗೂ ಅತ್ಯಗತ್ಯವಾಗಿಬಿಟ್ಟಿರುವ 'ಕಪ್ಪು ಹಣವನ್ನು ಬಿಳಿದಾಗಿಸುವ' ಹುನ್ನಾರವೊ ? ಅಮೆರಿಕಾದ ಸಂಯುಕ್ತ ಸಂಸ್ಥಾನಗಳಂತಹ ರಾಜ್ಯಗಳ ಭಾರಿ ಉದ್ಯೋಗಪತಿಗಳು, ತಮ್ಮ ಮತ್ತು ಇತರ ದೇಶಗಳ ಡೆಮೊಕ್ರಸಿಗಳ ರಾಜಕಾರಣಿಗಳನ್ನು ಮೇಲಧಿಕಾರಿಗಳನ್ನು ತಮ್ಮ ಅನುಕೂಲಕ್ಕೆ ಬಳಸಿಕೊಳ್ಳಲು ಹೆಣೆದಿಟ್ಟುಕೊಂಡಿರುವ ಲಾಬಿ(ಸರಕಾರಿನೀತಿ ನಿಯಂತ್ರಣಜಾಲ)ಗಳ ತರಹೆಯ ಛದ್ಮವೇಷಿ ಸಂಘಟನೆಯೊ ? ಅಥವಾ, ಇವೆಲ್ಲವುಗಳ ಮಿಶ್ರಣವಾಗಿದ್ದು, ಹಳೆಯ ದಾರಿದ್ರ್ಯಪೀಡಿತ ಸಮಾಜದಲ್ಲಿ ಹೊಸಮುಸುಕು ಹಾಕಿ ಬರಲಿರುವ ಒಂದು ಭ್ರಷ್ಟಶಕ್ತಿಕೇಂದ್ರದ ಪ್ರಾಥಮಿಕ ಮಾದರಿಯೊ ?

ಎಷ್ಟು ಬೇಗ ರೋಗಪರೀಕ್ಷೆ ಮಾಡಿದರೆ ಅಷ್ಟು ಪ್ರಮಾಣದ ನಷ್ಟ ಕಡಿಮೆಯಾಗುತ್ತದೆ.

■ ಎಮ್. ಎನ್. ಕೇಶವ ರಾವ್
ನಂ. ೩೮೮, ವೆಂಕಟೇಶ ದಾಸ್ ರೋಡ್, ಪದ್ಮನಾಭನಗರ
ಬೆಂಗಳೂರು - ೫೬೦ ೦೭೦

ಮರುದಿನ ರಾತ್ರಿ ಪ್ರಭಾಕರ ಕಾಣೆಯಾದ. ಇದಾದ ತಿಂಗಳ ಒಳಗೇ ತೋಟದ ಮನೆಯಲ್ಲಿ ವೀರಾರೆಡ್ಡಿ ವಿಶ್ವನಾಥರೆಡ್ಡಿ ಹಾಡ ಹಗಲೇ ಕೊಲೆಯಾದರು. ಈರಣ್ಣ ತಿಕ್ಕಣ್ಣರ ಹೆಣಗಳು ಗದ್ದೆಯ ಬದುವಿನ ಮೇಲೆ ಬಿದ್ದಿದ್ದವು. ಮತ್ತೊಂದು ವಾರದಲ್ಲಿ ಸಿಂಧನೂರಿನ ಮನೆಯಲ್ಲೇ ಸುಬ್ಬಯ್ಯ ನಾಯ್ಡು ಕೊಲೆಯಾದ. ಆಲೂರಿನ ನಡು ರಸ್ತೆಯಲ್ಲಿ ರಾಘವರೆಡ್ಡಿ ಕೊಲೆಯಾಗಿ ಬಿದ್ದಿದ್ದ. ಏಳೆಂಟು ಜನರ ತಂಡ ನಮ್ಮೆದುರೇ ಗುಂಡು ಹಾರಿಸಿ ಕೊಂದು ಹೋದ್ರು ಅಂತ ಆಲೂರಿನ ಜನ ಹೇಳಿದ್ದರು. ಸುಬ್ಬಯ್ಯ ನಾಯ್ಡು ಹೆಂಡತಿ ತನ್ನ ಗಂಡನ್ನ ಕೊಂದವ್ನು ಪ್ರಭಾಕರರಾವು. ನನ್ನೆದುರಿಗೇ ಕೊಂದ ಅಂತ ದೂರು ಕೊಟ್ಟಳು. ಮನೆಗೆ ಪೊಲೀಸರು ಬಂದು ಲಕ್ಷ್ಮಮ್ಮ ಗೋವಿಂದನ್ನ ಎಳೆದೊಯ್ದು ವಿಚಾರಣೆ ನಡೆಸಿ, ನಂತರ, "ಪ್ರಭಾಕರ ಬಂದರೆ ತಿಳಿಸಿ, ಮುಚ್ಚಿಟ್ಟರೆ ಒದ್ದು ಒಳಗೆ ಹಾಕ್ತೀವಿ", ಅಂತ ಬೆದರಿಸಿ ಕಳಿಸಿದ್ದರು. ಪೊಲೀಸರ ಕಾಟ ತಾಳಲಾರದೇ ಇದ್ದ ನಾಲ್ಕೆಕರೆ ಗದ್ದೆಯನ್ನು ಸಿಕ್ಕಿದ ರೇಟಿಗೆ ಮಾರಿ ಲಕ್ಷ್ಮಮ್ಮ ಮಕ್ಕಳೊಡನೆ ಆದೋನಿಯ ತವರಿಗೆ ಸೇರಿಕೊಂಡಿದ್ದರು.

ಜಿ. ಎಸ್. ಸುಶೀಲಾದೇವಿ. ಆರ್. ರಾವ್

**ಹೊ**ರಗೆ ಸಣ್ಣಗೆ ಮಳೆ ಹನಿಯುತ್ತಿದೆ. ಭರ್ರನೆ ತಣ್ಣನೆ ಗಾಳಿ ಬೀಸಿ ಬಂದಾಗ ಹೆಬ್ಬಾಗಿಲು ಮುಚ್ಚಿ ಒಳಬಂದರು ಲಕ್ಷ್ಮಮ್ಮ. ಮೊಮ್ಮಕ್ಕಳು ಹೋಂವರ್ಕ್ ಮಾಡ್ತಿದ್ದಾರೆ. ಸೊಸೆ ಒಳಗೇನೋ ಕೆಲಸ ಮಾಡ್ತಿದ್ದಾಳೆ. ಮಗ ಗೆಳೆಯನ ಲಗ್ನಕ್ಕೆಂದು ಬಳ್ಳಾರಿಗೆ ಹೋಗಿದ್ದಾನೆ. ನಾಳೆ ಬಂದಾನು. ಬೇಸರವೆನಿಸಿ ಟಿವಿ ಹಾಕಿ ಕುಳಿತರು. ನ್ಯೂಸ್ ಚಾನಲ್‌ನಲ್ಲಿ ಪೊಲೀಸರ ಎನ್‌ಕೌಂಟರ್‌ನಲ್ಲಿ ಸತ್ತ ಇಬ್ಬರು ನಕ್ಸಲರ ಮುಖ ಪದೇಪದೇ ತೋರಿಸುತ್ತಿದ್ದಾರೆ. ಬೆಚ್ಚಿಬಿದ್ದರು ಲಕ್ಷ್ಮಮ್ಮ. ಹಣೆಯ ಎಡಭಾಗದಲ್ಲಿ ರೂಪಾಯಗಲ ಕರೀಮಚ್ಚೆ. ಕಣ್ಣಲ್ಲಿ ಕಣ್ಣಿಟ್ಟು ನೋಡಿದರು. ನೀಳಮೂಗು, ಗುಂಗುರು ಕೂದಲು... ಮೈ ಥರಥರ ನಡುಗತೊಡಗಿತು.

"ರೇಣಿಗುಂಟದ ಬಳಿ ನಡೆದ ಎನ್‌ಕೌಂಟರ್‌ನಲ್ಲಿ ಇಬ್ಬರು ನಕ್ಸಲರ ಸಾವು. ಅಪಾರ ಪ್ರಮಾಣದ ಮದ್ದು ಗುಂಡು ರೈಫಲ್‌ಗಳು ದೊರೆತಿವೆ. ಸತ್ತ ಇಬ್ಬರು ನಕ್ಸಲ್ ನಾಯಕರ ತಲೆಗೆ ಸರ್ಕಾರ ೫ ಲಕ್ಷ ರೂಪಾಯಿ ಬಹುಮಾನ ಘೋಷಿಸಿತ್ತು. ಅವರು ಭಾಗಿಯಾಗಿದ್ದ ಹಲವಾರು ಪ್ರಕರಣಗಳನ್ನು ಹೇಳಿ ಸತ್ತ ನಕ್ಸಲ್ ನಾಯಕ ದೇಶನೂರು ಕರಣಂ ಪ್ರಭಾಕರರಾವು ಮತ್ತು ನಂದ್ಯಾಲ ವೆಂಕಟೇಶ್ವರಲು ಎಂದು ತಿಳಿದುಬಂದಿದೆ."

ನ್ಯೂಸ್ ನೋಡುತ್ತಿದ್ದ ಲಕ್ಷ್ಮಮ್ಮ ಗಡಗಡ ನಡುಗುತ್ತ ಕೆಳಗೆ ಉರುಳಿಬಿದ್ದರು. ಮೊಮ್ಮಕ್ಕಳ ಕೂಗು ಕೇಳಿ ಸೊಸೆ ಓಡಿ ಬಂದು ಅವರನ್ನ ಎತ್ತಿ ಹಾಸಿಗೆ ಮೇಲೆ ಮಲಗಿಸಿ "ಬಿ.ಪಿ.ಜಾಸ್ತಿ ಆಗಿರಬೇಕು. ಮಾತ್ರೆ ನುಂಗ್ತೀರಾ ?" ಎಂದು ಕೇಳಿದಳು. ಬೇಡ ಎಂದರು ಲಕ್ಷ್ಮಮ್ಮ. ಹೊಟ್ಟೆಯೊಳಗೆ ಹುಚ್ಚು ಸಂಕಟ. ಕಣ್ಣಲ್ಲಿ ಹನಿ ನೀರೂ ಬಾರದು. ಮೈಯಿಡೀ ಗಡಗಡ ನಡುಗುತ್ತಿದೆ. ತಲೆ ಗಿಮ್ಮನೇ ಸುತ್ತುತ್ತಿದೆ. ಹೊಟ್ಟೆಯ ಸಂಕಟ ತಾಳಲಾರದೆ ಲಕ್ಷ್ಮಮ್ಮ ಹೊರಳಾಡಿದರು. ರಾತ್ರಿಯಿಡೀ ಕಣ್ಣೆವೆ ಮುಚ್ಚಲಿಲ್ಲ.

ಆದೋನಿಯಿಂದ ದೇಶನೂರು ಕರಣಂ ಸುಬ್ಬಾರಾವಿನ ಕೈ ಹಿಡಿದು ಬಂದವಳು ತಿಕ್ಕಲಕ್ಷ್ಮಮ್ಮ. ಅತ್ತೆ ಅಂಬಕ್ಕ ಹದಿನೈದಕ್ಕೇ ಮಗನನ್ನು ಹಡೆದು ಹದಿನಾರರ ಪ್ರಾಯಕ್ಕೆ ವಿಧವೆಯಾಗಿ ತಲೆಬೋಳಿಸಿಕೊಂಡು ಮಡಿಯಾದ ಹೆಂಗಸು. ಗಂಡ ಹೆಂಡಿರು ಜೊತೆಯಾಗಿದ್ದು ನಕ್ಕು ಮಾತಾಡಿದರೆ ಆಕೆಗೆ ಸಹಿಸಲಾಗುತ್ತಿರಲಿಲ್ಲ. ಸೊಸೆಗೆ ಕತ್ತೆ ಚಾಕರಿಗೆ ಹಚ್ಚಿ ಕೊಡಬಾರದ ಕಾಟ ಕೊಟ್ಟಳು. ಗಂಡಹೆಂಡಿರು ದೂರವಿರುವಂತೆ ಮಾಡುವಲ್ಲಿ ಯಶಸ್ವಿಯಾಗಿದ್ದಳು. ಎಚ್ಚೆತ್ತ ಲಕ್ಷ್ಮಮ್ಮ ಅತ್ತೆಯನ್ನು ಧಿಕ್ಕರಿಸತೊಡಗಿದಾಗ ಮಗನಿಗೆ ಚಾಡಿ ಹೇಳಿ ಹೊಡೆಸುತ್ತಿದ್ದಳು. ತಾಯಿ ಚಾಡಿ ಕೇಳಿ ಕೇಳಿ ಮಗ ಹೆಂಡತಿ ಮುಖ ಕಂಡೊಡನೆ ಸಿಡಿಮಿಡಿ ಮಾಡತೊಡಗಿದ. ಮನೆಯ ನಿರಂತರ ಜಗಳಕ್ಕೆ ರೋಸಿ ಸುಬ್ಬರಾವು ಹೊರಗಡೆ ಹೋಗತೊಡಗಿದ. ಲಕ್ಷ್ಮಮ್ಮ ಅತ್ತರೆ ಮಗನನ್ನು ತಿದ್ದದೇ ಅಂಬಕ್ಕ "ನನ್ನ ಮಗ ಗಂಡಸು ಕಣೇ. ನೀನು ಸರಿಯಾಗಿ ಇದ್ದಿದ್ದರೆ ಅವನು ಹಿಂಗ್ಯಾಕೆ ಮಾಡುತ್ತಿದ್ದ" ಎಂದು ಅಬ್ಬರಿಸತೊಡಗಿದಳು.

ಕಾಲ ಸರಿಯುತ್ತಾ ಲಕ್ಷ್ಮಮ್ಮ ಬದುಕನ್ನು ಬಂದಂತೆ ಸ್ವೀಕರಿಸಿದಳು. ಗೋವಿಂದರಾವು, ಪ್ರಭಾಕರರಾವು, ಅಪರ್ಣ, ಶಕುಂತಲರಿಗೆ ತಾಯಿಯಾದಳು. ಗಂಡನ ಹೊರಚಾಳಿಯಿಂದ ಹನ್ನೆರಡೆಕರೆ ನೀರಾವರಿ ಜಮೀನು ಇದ್ದರೂ ಬಂದ ಬಡತನದಿಂದಾಗಿ ರೋಸಿದ್ದಳು. ಅಂಬಕ್ಕ ಇಷ್ಟಾದರೂ ಬುದ್ಧಿ ಕಲಿಯಲಿಲ್ಲ. ಗೋವಿಂದ ಪುಕ್ಕಲ. ತೆಳ್ಳಗೆ ಎತ್ತರವಿದ್ದ. ಪ್ರಭಾಕರ ಎತ್ತರ, ಆಜಾನುಬಾಹು. ವಯಸ್ಸಿಗೆ ಮೀರಿ ಬೆಳೆದಿದ್ದ ಶಕ್ತಿವಂತ. ತಾಯಿಯ ಮಾತು ಕೇಳಿ ಸುಬ್ಬರಾವು ಹೆಂಡತಿಗೆ ಸೀಳು ಸೌದೆ ಹಿಡಿದು ಬಡಿಯುವಾಗ ಹನ್ನೆರಡರ ಪ್ರಭಾಕರ ತಂದೆಯ ಕೈಯ ಸೌದೆ ಕಸಿದು




# ಅಪರಿಮಿತ ಕತ್ತಲೊಳಗೆ...

ಆತನಿಗೇ ಬಾರಿಸಿದ. ತಡೆಯಲು ಬಂದ ಅಂಬಕ್ಕನನ್ನು ದೂರ ತಳ್ಳಿದ. ದುರ್ಬಲ ಸುಬ್ಬರಾವು ಮಗನನ್ನ ಎದುರಿಸಲಾಗದೇ ''ಅಮ್ಮ, ಅವನಿಗೆ ಕೂಳು ಹಾಕಬ್ಯಾಡ. ಉಪವಾಸ ಸಾಯಲಿ'' ಎಂದು ಅಬ್ಬರಿಸಿ ಹೊರಹೋದ.

ಅಂಬಕ್ಕ ಅಡಿಗೆ ಮುಗಿಸಿ ಉಂಡಮೇಲೆ ಅಡಿಗೆಮನೆಗೆ ಬೀಗ ಜಡಿದು ಕೂಡುತ್ತಿದ್ದಳು. ಅಂಬಕ್ಕನನ್ನು ಉರುಳಿಸಿ ಬಾರಿಸಿ, ಬೀಗದ ಕೈ ಕಸಿದು ಉಂಡುಹೋಗುತ್ತಿದ್ದ ಪ್ರಭಾಕರ. ಅಂಬಕ್ಕ ಬೀಗ ಹಾಕಿ ಕೀಯನ್ನು ಅಕ್ಕಪಕ್ಕದವರ ಮನೆಯಲ್ಲಿ ಇಡತೊಡಗಿದಳು. ಪ್ರಭಾಕರ ಥೂ! ಎಂದು ಉಗಿದು, ಗೆಳೆಯ ಬೇಡರ ಭರಮಣ್ಣನ ಮನೆಗೆ ನಡೆಯುತ್ತಿದ್ದ. ಭರಮಣ್ಣ ಅವನ ಚಿಕ್ಕಪ್ಪನ ಮಗ ಭೀಮಣ್ಣ ಅವನ ಆತ್ಮೀಯ ಗೆಳೆಯರು. ಭರಮಣ್ಣನ ಅಜ್ಜಿ ಈರಮ್ಮವ್ವ 'ಬಾ ತಮ್ಮಾ, ಕೈ ಕಾಲು ತ್ವಳಕಂಡು ಬಾ' ಅಂತ ಕರೆದು ಹೊಟ್ಟೆ ತುಂಬ ಊಟ ಹಾಕುತ್ತಿದ್ದಳು. ತಾವು ಊಟ ಹಾಕದಿದ್ದರೂ ಆರಾಮಾಗಿ ಅಡ್ಡಾಡುತ್ತಿದ್ದವನನ್ನು ಕಂಡು ಅಂಬಕ್ಕ ಪತ್ತೆಮಾಡಿ ಮಗನ ಕಿವಿ ಊದಿದಾಗ ಸುಬ್ಬರಾವು ಅಬ್ಬರಿಸಿದ್ದ. ''ಲೇ ಪ್ರಭ್ಯಾ, ಮುಂಜಿ ಆದೋನು ಆ ಬ್ಯಾಡರ ಮನೀಲಿ ಉಂಡು ಬರ್ತೀಯೇನೋ? ನಿನ್ನ ಜನಿವಾರ ಕಿತ್ತು ಬಿಸಾಕು. ಅಯೋಗ್ಯ.''

''ಮೊದ್ಲು ನಿನ್ನ ಜನಿವಾರ ಕಿತ್ತು ಬಿಸಾಕು. ಆ ಪಾತರದೋಳ ಮನೇಲಿ ವಾರಗಟ್ಲೇ ಇರ್ತಿ. ಅಲ್ಲೇ ಉಂಡು ಹಾದರ ಮಾಡ್ತಿ. ನೀನೇ ಅಯೋಗ್ಯ.''

ಬಾರಿಸಲು ಸುಬ್ಬರಾವು ನುಗ್ಗಿದಾಗ ತಪ್ಪಿಸಿಕೊಳ್ಳದಂತೆ ಅಂಬಕ್ಕ ಪ್ರಭಾಕರನ್ನ ಬಿಗಿಯಾಗಿ ಹಿಡಿದಿದ್ದಳು. ಆ ಹದಿನಾಲ್ಕರ ಹುಡುಗ ಅಜ್ಜಿಯನ್ನೇ ತಳ್ಳಿ ಅಪ್ಪನಿಂದ ತಪ್ಪಿಸಿಕೊಂಡು ಓಡಿಹೋಗಿದ್ದ. ಮುಸ್ಸಂಜೆ ವೇಳೆ ಬೆಕ್ಕಿನಂತೆ ಹೆಜ್ಜೆ ಇಡುತ್ತಾ ಮನೆಗೆ ಬಂದಾಗ ಅಮ್ಮ ಚಾಪೆ ಮೇಲೆ ಮಲಗಿ ನರಳುತ್ತಿದ್ದುದನ್ನು ಕಂಡು, ಮೈ ಮೇಲಿನ ಬಾಸುಂಡೆ ನೋಡಿ ತನ್ನ ಮೇಲಿನ ಸಿಟ್ಟಿಗೆ ತನ್ನಮ್ಮನಿಗೆ ಏಟು ಬಿದ್ದಿದೆ ಎಂದು ಅರಿವಾಗಿ ಪ್ರಭಾಕರ ಕತಕತ ಕುದಿದ. ದೇವರ ಮುಂದೆ ಕುಳಿತು ಮಣಮಣ ಅನ್ನುತ್ತಿದ್ದ ಅಂಬಕ್ಕನನ್ನು ದರದರ ಎಳತಂದು, ಬಿಡಿಸಲು ಹೋದ ಗೋವಿಂದನನ್ನು ದೂರತಳ್ಳಿ, ಅಂಬಕ್ಕ ಚೀರಿದರೂ ಬಿಡದೆ ಆವೇಶದಿಂದ ಚೆನ್ನಾಗಿ ಹೊಡೆದ. ನಂತರ ಕಾಲಿಂದ ತಳ್ಳುತ್ತಾ, ''ನಿನ್ನ ಆ ಬಹದ್ದೂರ್ ಗಂಡಸು ಮಗನಿಗೆ ಹೇಳು, ನೀನು ಅವನ ಅಮ್ಮನನ್ನು ಹೊಡೆದೆಯಂತೆ, ಅದಕ್ಕೆ ಅವನು ನಿನ್ನ ಅಮ್ಮನನ್ನು ಹೊಡೆದಿದ್ದಾನೆ ಅಂತ'' ಎಂದ.

ಒಂದು ವಾರ ಪ್ರಭಾಕರ ಮನೆಯತ್ತ ಸುಳಿಯಲಿಲ್ಲ. ನಂತರ ಏನೂ ಆಗದವನಂತೆ ಅಪ್ಪನ ಎದುರೇ ತಲೆಎತ್ತಿ ತಿರುಗಿದ. ಅದೇ ಕೊನೆ - ಲಕ್ಷ್ಮಮ್ಮನ ಮೈ ಮುಟ್ಟುವ, ಬಡಿಯುವ ಧೈರ್ಯ ಆ ತಾಯಿ, ಮಗ ಮಾಡಲಿಲ್ಲ.

ಒಂದು ಸಲ ಪ್ರಭಾಕರನ ಅಮ್ಮನ ಹತ್ತಿರ ಭರಮಣ್ಣನ ಅಜ್ಜಿ ಈರಮ್ಮವ್ವ ಹೇಳಿದ್ಲು, ''ನಿಮ್ಮತ್ತೆ, ನಾನೂ ಇಬ್ರೂ ಒಂದೇ ವರ್ಸದಾಗೆ ಈ ಊರಿಗೆ ಸೊಸೆಯಾಗಿ ಬಂದಿದ್ವಿ. ಅಂಬವ್ವ ಮಾರ್ನೇ ವರ್ಸಾನೇ ಹಡದ್ಲು. ಅದೇ ವರ್ಸ ಗಂಡನ್ನ ಕಳಕಂಡು ಮಡಿಯಾದ್ಲು. ನಾನು ಎರಡು ವರ್ಸ ಆದಮ್ಯಾಲೆ ಐದು ತಿಂಗ್ಳ ಹೊಟ್ಯಾಗಿದ್ದಾಗ ಗಂಡನ್ನ ಕಳ್ಕಂಡೆ. ನನ್ ಗಂಡನ ಅಣ್ಣನ ಹೆಣ್ತಿ ಅದೆಂತದೋ ದೊಡ್ಡ ಬ್ಯಾನಿ ಬಂದು ಸತ್ಲು. ನಿಮ್ಮತ್ತಿ ನನ್ನ ಅಪ್ರ ಹಿರೀ ಮಗಂಗೆ ಉಡುಕಿ ಮಾಡ್ಕಂಡ್ಲು. ನನ್ ಮೊದ್ಲ ಮಗ ಮೊದ್ಲ ಗಂಡನ ಮಗ. ಆಮ್ಯಾಲ ಎರಡನೆಯಾತಗೆ ಎರಡನೇನು. ನಿಮ್ಮತ್ತಿಗೆ ಹಿಂಗಾಗ್ಲಿಲ್ಲ ನೋಡು. ಸಣ್ಣ ವಯಸ್ಸಿಗೇ ಮಡಿ ಮಾಡಿ ಕುಂಡ್ರಿಸಿದ್ರು. ಆಸಿ ನುಂಗಿ ಬದ್ಕಿದ್ದ ಜೀವಾ ಅದು. ಅದಕ್ಕೇ ನೀನೂ ನಿನ್ ಗಂಡ ಸೇರಿ ಬಾಳಾದು ಸಹಿಸ್ಲಿಲ್ಲ ಅನ್ನಿಸ್ತದೆ. ಆಕಿ ಮಾತ್ಕೇಳಿ ನಿನ್ನ ಹೊಡ್ದು ಬಡ್ದು ಹೊರಚಾಳಿಗೆ ಬಿದ್ದ ನಿನ್ ಗಂಡ. ಆಕಿನಿಂದ್ಲೇ ನಿನ್ ಬಾಳೇವು ಹಾಳಾಯ್ತು ಕಣವ್ವ'', ಎಂದು ಉಸಿರಿಟ್ಟರೆ, ಲಕ್ಷ್ಮಮ್ಮ ಮುಸುಮುಸು ಅತ್ತು, ''ಎಲ್ಲಾ ನನ್ ಹಣೇಬರ'', ಎಂದಾಗ ಅಲ್ಲೇ ಇದ್ದ ಪ್ರಭಾಕರ ಎಲ್ಲಾ ಕೇಳಿಸಿಕೊಂಡು ಕತಕತ ಕುದಿದಿದ್ದ.

ಅವನಿಗೆ ಅನ್ಯಾಯ ಕಂಡರೆ ಸಹಿಸಲಾಗುತ್ತಿರಲಿಲ್ಲ. ತಂದೆ ಇಲ್ಲದ ಎಂಟು ವರ್ಷದ ಐನೋರ ವಿರೂಪಾಕ್ಷಿನ ಹನುಮಂತ ದೇವರ ಪೂಜಾರಿ ಸಲಿಂಗ ಕಾಮಕ್ಕೆ ಬಳಸ್ಕಂಡ ಅಂತ ಅವನನ್ನ, ಅಗಸರ ಹನುಮಕ್ಕನನ್ನ ಕೆಡಿಸಲು ಬಂದಿದ್ದ ಅಂತ ರೆಡ್ಡೇರ ಚಂಬಸ್ಯನ್ನ ಪ್ರಭಾಕರ ಮತ್ತು ಅವನ ಗೆಳೆಯರು ಹಿಡ್ಕಂಡು ಹೊಡೆದ ಸುದ್ದಿ ನಿಜಾನೇನೋ ಅಂತ ಕೇಳಿದ್ದಕ್ಕೆ ''ಮತ್ತೇನು? ಅವರಿಗೆ ಘನಂದಾರಿ ಕೆಲ್ಸ ಮಾಡಕ್ಕೆ ಬಿಡಬೇಕಿತ್ತಾ?'' ಅಂತ ಉರಿದುಬಿಡುತ್ತಿದ್ದ. ''ಸರಿ ಮಗ್ನೇ. ಆದ್ರೆ ಹೊಡೆತ ಬಡಿತ ಒಳ್ಳೇದಲ್ಲ, ಅದೆಲ್ಲಾ ನಮಗಲ್ಲ'' ಅಂತ ಲಕ್ಷ್ಮಮ್ಮ ಮಗನಿಗೆ ತಿಳಿಹೇಳೋ ಪ್ರಯತ್ನ ಮಾಡಿದ್ದಳು.

ಪ್ರಭಾಕರನಿಗೆ ವಿದ್ಯೆ ಹತ್ತಲಿಲ್ಲ, ಗದ್ದೆ ಕೆಲಸದಲ್ಲಿ ತೊಡಗಿಕೊಂಡಿದ್ದ. ಗೋವಿಂದ ಓದ್ಲಿ ಅನ್ನುತ್ತಿದ್ದ. ಓದಿನಲ್ಲಿ ಜಾಣರಿದ್ದ ಗೋವಿಂದ, ಅಪರ್ಣ ಸಿರುಗುಪ್ಪದಲ್ಲಿ ಓದುತ್ತಿದ್ದರು. ಪ್ರಭಾಕರ ಹದಿನೆಂಟಕ್ಕೇ ಭೀಮನಂತೆ ಬೆಳೆದಿದ್ದ, ಗೋವಿಂದನಿಗೇ ಅಣ್ಣ ಅನ್ನಬೇಕು, ಹಾಗೆ. ಅವನಪ್ಪ, ಅಂಬಕ್ಕ ಅವನಿಗೇ ಹೆದರುತ್ತಿದ್ದರು! ಅಂಬಕ್ಕ ಇವರಮ್ಮನನ್ನು ಬೈದರೆ ಮಡಿಯಲ್ಲಿದ್ದ ಅಜ್ಜಿಯನ್ನು ಮುಟ್ಟಿ ಆಕೆ ಮಡಿ ಹಾಳಾಯ್ತಲ್ಲೋ ಎಂದರೆ ''ಎಂತಾ ಮಡಿ? ಹೊಟ್ಟೆ ತುಂಬಾ ಹೊಲಸು ಬುದ್ಧಿ, ಬಾಯ್ತುಂಬಾ ಹೊಲಸು ಬೈಗುಳ, ಮೈಮ್ಯಾಲೆ ನಾಲಕು ಚಂಬು ನೀರು ಬಿದ್ರೆ ಮಡಿಯಾಗ್ತಿಯಾ?!'' ಅಂತ ಕಿಚಾಯಿಸುತ್ತಿದ್ದ.

ಸಿರುಗುಪ್ಪದಿಂದ ತಾಲ್ಲೂಕಾಫೀಸಲ್ಲಿ ಕೆಲಸ ಮಾಡೋ ಆದಿಕೇಶವುಲು ಬಂದಿದ್ದರು. ಅವರು ಲಕ್ಷ್ಮಮ್ಮನ ದೂರದ ಸಂಬಂಧಿ. ''ಲಕ್ಷ್ಮಮ್ಮ ಘಾತ ಆಗ್ತಾಯಿದೆ. ನಾಡಿದ್ದು ನಿನ್ನ ಗಂಡ ಪಾತರದೋರ ಸೂಗೂರಮ್ಮನಿಗೆ ನಾಲ್ಕೆಕರೆ ಗದ್ದೆ ರಿಜಿಸ್ಟರ್ ಮಾಡ್ಸಿ ಕೊಡ್ತಿದಾನೆ. ನಿಂಗೆ ಮಕ್ಳುಮರಿ ಇವೆ. ಏನ್ ಮಾಡ್ತೀ ನೋಡು'', ಎಂದು ಎಚ್ಚರಿಸಿ ಹೋಗಿದ್ದರು. ಅಂಬಕ್ಕ ತಿರುಪತಿ ಯಾತ್ರೆಗೆ ಹೋಗಿದ್ಲು. ಲಕ್ಷ್ಮಮ್ಮ ಅಸಹಾಯಕಳು. ಪ್ರಭಾಕರನ ರಕ್ತ ಕುದ್ದು ಆದೋನಿಯ ನೆಂಟರಿಗೆ ಸುದ್ದಿ ಕಳಿಸಿದ್ದ.

ಭಾನುವಾರ ರಾತ್ರಿ ಹನ್ನೆರಡಕ್ಕೆ ಬಾಗಿಲು ಬಡಿದಾಗ ಸೂಗೂರಮ್ಮ ಬಾಗಿಲು ತೆಗೆದಳು. ಯಾರೋ ನೀನು ಅಂದಿದ್ದಕ್ಕೆ ''ನಿನ್ನ ಮಿಂಡನ್ನ ಹೊರಗೆ ಕರಿ'', ಎಂದಿದ್ದ ಪ್ರಭಾಕರ. ಮಗನನ್ನ ನೋಡಿ ಸುಬ್ಬರಾವು ಅಬ್ಬರಿಸಿ, ಮೈಮೇಲೆ ಏರಿಹೋದ. ಆದರೆ ಹೊರಗಡೆ ನಿಂತಿದ್ದ ಇಬ್ಬರು ಭಾವಮೈದುನರು, ಸಿರುಗುಪ್ಪದ ದಾಯಾದಿ, ಆಲೂರಿನ ಸೋದರಮಾವ ಎಲ್ಲರೂ ಬಾಯಿಗೆ ಬಂದಂತೆ ಬೈದು ಛೀಮಾರಿ ಹಾಕಿದಾಗ, ತಲೆ ತಗ್ಗಿಸಿ ಮನೆಗೆ ಬಂದಿದ್ದ ಸುಬ್ಬರಾವು. ನಂತರ ಎರಡು ತಿಂಗಳಲ್ಲಿ ಹೆಡೆ ತುಳಿಸಿಕೊಂಡ ಹಾವಿನಂತೆ ಅವಮಾನದಿಂದ ಕುದಿಯುತ್ತಿದ್ದ ಸುಬ್ಬರಾವು ಒಂದು ದಿನ ಸದ್ದಿಲ್ಲದೆ ನಾಲ್ಕರ ಬದಲಿಗೆ ಎಂಟು ಎಕರೆ ಗದ್ದೆಯನ್ನು ಸೂಗೂರಮ್ಮನ ಹೆಸರಿಗೆ ರಿಜಿಸ್ಟರ್ ಮಾಡಿಸಿ ಊರುಬಿಟ್ಟಿದ್ದ. ಬಳ್ಳಾರಿಯಲ್ಲಿ ಸೂಗೂರಮ್ಮನ ತಂಗಿ ಮನ್ಯಾಗೆ ಅದಾನಂತೆ, ಆಕೀ ತಮ್ಮಂದಿರು ಜಮೀನಿಗೆ ಬೇಲಿ ಹಾಕ್ಯಾರಂತೆ ಅಂತ ಗೊತ್ತಾದಾಗ ಲಕ್ಷ್ಮಮ್ಮ, ಗೋವಿಂದ ಅತ್ತರೆ, ಪ್ರಭಾಕರ ಸಿಡಿದಿದ್ದ. ಸೀದಾ ಬಚ್ಚಲು ಮನೆಗೆ ಹೋಗಿ ಎರಡು ಕೊಡ ನೀರು ಹುಯ್ದುಕೊಂಡು, ಅಡಿಗೆ ಮನೇಲಿ ಶ್ಯಾವಿಗೆ ಪಾಯಸ ಬೇಯಿಸಿ, ''ಮಡೀಲಿದ್ದೀನಿ, ಬ್ಯಾಡ ಕಣೋ'', ಅಂತ ಅಂಬಕ್ಕ ಕೊಸರಿದರೂ ಬಿಡದೆ, ''ನಾನು ಮಡೀಲಿದ್ದೀನಿ. ಸೀ ತಿನ್ನು, ನನ್ನ ಅಮ್ಮನ ಬಾಳು ಹಾಳು ಮಾಡ್ದೋಳು ನೀನು, ನನ್ನ ಮಗ ಗಂಡ್ಸು ಕಣೇ, ನೀನು ಸರೀ ಇಲ್ಲ, ಅದಕ್ಕೇ ಅವನು ಹೊರಗೆ ಹೋಗ್ತಾನೆ ಅಂತ ಅಮ್ಮನ ಬಾಯಿ ಬಡೀತಿದ್ಯಲ್ಲೇ ಬೋಸುಡೀ. ನಿನ್ನ ಬಹಾದ್ದೂರ್ ಗಂಡಸುಮಗ ಅವನ ಸೂಳೆಗೆ ಎಂಟೆಕರೆ ಗದ್ದೆ ಬರೆದಿದ್ದಾನೆ. ತಿನ್ನು, ಸೀ ತಿನ್ನು'', ಎಂದು ಬಲವಂತವಾಗಿ ಬಾಯಿಗೆ ತುರುಕತೊಡಗಿದ. ಅವನನ್ನು ತಡೆಯಲಾಗದೆ ಲಕ್ಷ್ಮಮ್ಮ, ಗೋವಿಂದ, ಅಪರ್ಣ, ಶಕುಂತ್ಲ ಎಲ್ಲರೂ ನಡುಗುತ್ತ ನಿಂತಿದ್ದರು. ಅಂಬಕ್ಕನನ್ನು ಕಾಲಿಂದ ಜಾಡಿಸಿ, ''ನಿಂಗೆ ಗಂಡ ಇರ್ಲಿಲ್ಲ ಅಂತ ಮಗ ಸೊಸೆ ಚಂದಾಗಿರದು ಸೈರಿಸದೆ, ನಮ್ಮ ಬದುಕು ಹಾಳುಮಾಡಿದೆ. ನಿಂಗ್ಯಾಕೆ ಸಾವು ಬರಲ್ಲ'' ಅಂತ ಅಬ್ಬರಿಸಿದ್ದ.

ವರ್ಷವಿನ್ನೂ ಕಳೆದಿರಲಿಲ್ಲ, ಪಾರ್ಶ್ವವಾಯು ಬಡಿದು ಹೆಣದಂತಾಗಿದ್ದ ಸುಬ್ಬಾರಾವನ್ನು ಸೂಗೂರಮ್ಮನ ತಮ್ಮಂದಿರು ಮನೆಗೆ ತಂದು ಮಲಗಿಸಿಹೋಗಿದ್ದರು. ಅಂಬಕ್ಕ ಮಗನನ್ನ ಬಾಯಿಗೆ ಬಂದಂತೆ ಬೈಯ ತೊಡಗಿದ್ದಳು. ಸುಬ್ಬರಾವು, ಅಂಬಕ್ಕ ಇಬ್ಬರೂ ಮೂರು ತಿಂಗಳೊಳಗೇ ಸತ್ತರು. ಉಳಿದಿದ್ದ ನಾಲ್ಕೆಕರೆ ಗದ್ದೆಯಲ್ಲೇ ಬದುಕು ಸಾಗುತ್ತಿತ್ತು. ಪ್ರಭಾಕರ ಒಂದು ದಿನ ಗೆಲುವಾಗಿ ಬಂದು ತಾಯಿಗೆ ಹೇಳಿದ್ದ: ''ಅಪ್ಪ ಬರೆದುಕೊಟ್ಟ ಎಂಟೆಕರೆ ಗದ್ದೆ ಪಿತ್ರಾರ್ಜಿತ ಆಸ್ತಿಯಂತೆ. ಹೆಂಡತಿ, ನಾಲ್ಕು ಮಕ್ಕಳ ಸೈನು ಹಾಕದೆ ರಿಜಿಸ್ಟ್ರೇಷನ್ ಊರ್ಜಿತ ಆಗಲ್ಲಂತೆ. ನಾವು ಕೋರ್ಟಿಗೆ ಹೋದರೆ ಅದು ನಮಗೆ ವಾಪಸ್ ಸಿಗ್ತದಂತೆ. ಲಾಯರ್ ವೆಂಕೋಬರಾಯರು ಹೇಳಿದರು. ಕೋರ್ಟಿನಲ್ಲಿ ಕೇಸ್ ಹಾಕ್ರಿ, ನಾನು ನೋಡ್ಕಂತೀನಿ ಅಂದಿದಾರೆ.''

''ಅಪ್ಪನೇ ಬರ್ದು ಕೊಟ್ಟ. ನಾವು ಕೋರ್ಟ್ ಅಲಿಯಾದು ಬ್ಯಾಡ ಕಣೋ. ಸೂಗೂರವ್ವನ ತಮ್ಮಂದಿರು ಮೊದ್ಲೇ ರೌಡಿಗಳು'' ಗೋವಿಂದ ಹೆದರಿ ನಡುಗಿದ್ದ.

''ಹೆಣ್ಗ್ಯಾ, ಸೀರೆ ಉಟ್ಕಂಡು ಕೂತ್ಕ. ಅದನ್ನ ಅವರಿಂದ ಕಕ್ಕಿಸ್ದಿದ್ರೆ ನಾನು ನಮ್ಮಪ್ಪನಿಗೆ ಹುಟ್ಟಿದೋನಲ್ಲ'', ಎಂದ ಪ್ರಭಾಕರ ಯಾರ ಮಾತಿಗೂ ಜಗ್ಗದೆ ಕೋರ್ಟ್‌ನಲ್ಲಿ ಕೇಸ್ ಹಾಕಿದ್ದ.

ತಿಂಗಳು ಕಳೆದಿತ್ತು. ಒಂದು ಸಂಜೆ ಕಾಲೇಜಿಗೆ ಹೋಗಿದ್ದ ಅಪರ್ಣ ಮನೆಗೆ ಬರಲಿಲ್ಲ. ಪಿ.ಯು.ಸಿ. ಓದುತ್ತಿದ್ದ ಅವಳು ಸ್ಪೆಷಲ್ ಕ್ಲಾಸಿದ್ದರೆ ಮೊದಲೇ ತಿಳಿಸಿ ಗೆಳತಿ ಮೀರಾಳ ಮನೇಲಿ ಉಳಿಯುತ್ತಿದ್ದಳು. ಪ್ರಭಾಕರ ಅವಳ ಗೆಳತಿಯರ ಮನೇಗೆಲ್ಲಾ ಹೋಗಿಬಂದ. ಎರಡು ದಿನ ಕಳೆದರೂ ಅವಳು ಬಾರದಿದ್ದಾಗ ಲಕ್ಷ್ಮಮ್ಮ ನಿಜಕ್ಕೂ

ಗಾಬರಿಯಾಗಿದ್ದರು. ''ನಾಳೆ ಪೊಲೀಸ್ ಸ್ಟೇಷನ್ನಿಗೆ ಹೋಗಿ ಕಂಪ್ಲೇಂಟ್ ಕೊಟ್ಟು ಬರ್ತೀನಿ'', ಅಂದ ಪ್ರಭಾಕರ. ''ಬ್ಯಾಡ ಕಣೋ, ಲಗ್ನ ಆಗಾ ಹುಡುಗಿ, ಕಂಪ್ಲೇಂಟ್ ಕೊಟ್ರೆ ಹೆಸರು ಕೆಡ್ತದೆ'' ಅಂತ ಲಕ್ಷ್ಮಮ್ಮ ಮುಳುಮುಳು ಅತ್ತರು.

ರಾತ್ರಿ ಹನ್ನೆರಡು ದಾಟಿರಬೇಕು. ದಬದಬ ಬಾಗಿಲು ಬಡಿದಾಗ ಲಕ್ಷ್ಮಮ್ಮ ಬಾಗಿಲು ತೆಗೆದರು. ಗಡಗಡ ನಡುಗುತ್ತಿದ್ದ ಅಪರ್ಣ ತಾಯಿಯನ್ನು ತಬ್ಬಿಕೊಂಡಳು. ಹಿಂದೆಯೇ ಜಮೀನ್ದಾರ್ ವೀರಾರೆಡ್ಡಿ, ಅವನ ಆಳುಗಳು ತಿಕ್ಕಣ್ಣ, ಈರಣ್ಣ ಒಳಗೆ ಬಂದರು.

''ಲಕ್ಷ್ಮಮ್ಮ, ನಿನ್ ಗಂಡ ಅವನ ಸೂಳಿಗೆ ಬರೆದ ಎಂಟೆಕರೆ ಜಮೀನು ಆಕಿ ನನಗೆ ಮಾರಿದಾಳೆ. ನೀವು ಕೋರ್ಟಿನಾಗೆ ಹಾಕಿರಾ ಕೇಸ್ ಹಿಂದಕ್ಕೆ ತಗಳ್ರಿ. ಇಲ್ಲಾಂದ್ರೆ ನಿಮ್ಮ ಮಗಳಿಗಾದ ಗತಿ ಇನ್ನೊಬ್ಬಳಿಗೂ ಆಗ್ತದೆ. ನನ್ನ ಎದುರು ಹಾಕ್ಕೊಂಡೋನು ಉಳೀಯಾಕಿಲ್ಲ'', ಅಂತ ಅಬ್ಬರಿಸಿದ. ಲಕ್ಷ್ಮಮ್ಮ ದನಿ ಎತ್ತಲಿಲ್ಲ. ಪ್ರಭಾಕರ ಆಗಿನ್ನೂ ಎದ್ದು ಬಂದವನಿಗೆ ಏನೆಂದು ಅರ್ಥವಾಗುವುದರೊಳಗೆ ರೆಡ್ಡಿ ಮತ್ತವನ ಆಳುಗಳು ಹೊರಟುಹೋಗಿದ್ದರು. ಲಕ್ಷ್ಮಮ್ಮ ವೀರಾರೆಡ್ಡಿ ಹೇಳಿದ ಮಾತುಗಳನ್ನ ಮಗನಿಗೆ ಹೇಳಿ ಕೇಸು ಹಿಂದಕ್ಕೆ ತಗೊಳ್ಳೋ ಅಂತ ಅಂಗಲಾಚಿ, ಅಪರ್ಣಳನ್ನ ಅಪ್ಪಿ ಗಳಗಳ ಅಳತೊಡಗಿದರು. ಪ್ರಭಾಕರ ತಂಗಿಯ ಬಳಿ ಬಂದು ತಲೆ ನೇವರಿಸಿ ಕೇಳಿದ, ''ಅಪ್ಪಿ, ಏನಾತು ಹೇಳು'', ಅಪರ್ಣ ಬಿಕ್ಕಿಬಿಕ್ಕಿ ಅತ್ತಳು. ತಂಗಿಯನ್ನು ತಬ್ಬಿದ ಪ್ರಭಾಕರ ''ಅಪ್ಪಿ, ಆದದ್ದು ಕೆಟ್ಟ ಕನಸು ಅಂತ ಮರ್ತುಬಿಡು. ನಿನ್ನ ಹೊಸಪ್ಯಾಟ್ಯಾಗೆ ಸುಮಂಗಲ ಚಿಕ್ಕಿ ಹತ್ರ ಬಿಡ್ತೀನಿ. ಆಮ್ಯಾಲೆ ಆ ಸೂಳಿಮಕ್ಳನ್ನ ಹುಟ್ಟಲಿಲ್ಲ ಅನ್ನಿಸಿಬಿಡ್ತೀನಿ'' ಅನ್ನುತ್ತ ಪ್ರಭಾಕರ ಸಿಟ್ಟಿನಿಂದ ಕಂಪಿಸುತ್ತಿದ್ದ.

ರಾತ್ರಿ ಎಲ್ಲರೂ ಮಲಗಿದ್ದಾಗ ಅಪರ್ಣ ನೇಣು ಹಾಕಿಕೊಂಡಳು. ''ಪ್ರಭಣ್ಣ, ಅವರು ಬರೀ ನನ್ನ ಹಾಳು ಮಾಡಿ ಸುಮ್ನಾಗಲಿಲ್ಲ. ಅವ್ರ ತೋಟದ ಮನೇಲಿ ನನ್ನ ಬೆತ್ತಲೆ ಮಾಡಿ ಫೋಟೋ ತೆಗೆದಿದಾರೆ. ಆ ವೀರಾರೆಡ್ಡಿ, ಅವನ ತಮ್ಮ ವಿಶ್ವನಾಥ ರೆಡ್ಡಿ, ಸುಬ್ಬಯ್ಯ ನಾಯ್ಡು ರಾಘವ ರೆಡ್ಡಿ ಅವ್ರ ಆಳುಗಳೂ ನನ್ನ ಮ್ಯಾಲೆ ಎರ್ಗಿದ ದಿನ ... ಇಷ್ಟೆಲ್ಲಾ ಆದಮ್ಯಾಲೆ ನಾನು ಯಾವ ಮಕ ಎತ್ತಿಕೊಂಡು ತಿರುಗ್ಲಿ. ಎಲ್ಲರೂ ನನ್ನ ಕ್ಷಮಿಸಿ'' ಎಂದು ಬರೆದಿದ್ದ ಅವಳ ಪತ್ರ ಸಿಗ್ತು. ಎಲ್ಲರ ಆಘಾತದ ಸಮಯದಲ್ಲೂ, ''ಈ ಪತ್ರದಿಂದ ಅವರೆಲ್ಲರನ್ನ ಒಳಗ್ಹಾಕಸ್ತೀನಿ,'' ಅಂತ ಪ್ರಭಾಕರ ಕೆರಳಿ ಆರ್ಭಟಿಸಿದ್ದ. ''ಬ್ಯಾಡ ಕಣೋ. ಆ ಕೇಸನ್ನೇ ಹಿಂದಕ್ಕೆ ತಗಳ್ಳಾಣ. ಶಕುಂತ್ಲ ಅದಾಳೆ. ನಮ್ಮ ಜೀವಕ್ಕೂ ಅಪಾಯ ಬರ್ತದೆ'' ಎನ್ನುತ್ತ ಗೋವಿಂದ ಹೆದರಿ ನಡುಗುತ್ತಿದ್ದ. ಎಲ್ಲರೂ ಅತ್ತು ಅಪರ್ಣಳ ಶವ ಸಂಸ್ಕಾರ ಮಾಡಿದರು. ಹೊಟ್ಟೆನೋವು ತಾಳಲಾರದೆ ಸತ್ತಳು ಅಂತ ಪೊಲೀಸ್ ಕೇಸಾಗದಂತೆ ನೋಡಿಕೊಂಡಳು ಲಕ್ಷ್ಮಮ್ಮ.

ಮರುದಿನ ರಾತ್ರಿ ಪ್ರಭಾಕರ ಕಾಣೆಯಾದ. ಇದಾದ ತಿಂಗಳ ಒಳಗೇ ತೋಟದ ಮನೆಯಲ್ಲಿ ವೀರಾರೆಡ್ಡಿ ವಿಶ್ವನಾಥರೆಡ್ಡಿ ಹಾಡ ಹಗಲೇ ಕೊಲೆಯಾದರು. ಈರಣ್ಣ, ತಿಕ್ಕಣ್ಣರ ಹೆಣಗಳು ಗದ್ದೆಯ ಬದುವಿನ ಮೇಲೆ ಬಿದ್ದಿದ್ದವು. ಮತ್ತೊಂದು ವಾರದಲ್ಲಿ ಸಿಂಧನೂರಿನ ಮನೆಯಲ್ಲೇ ಸುಬ್ಬಯ್ಯ ನಾಯ್ಡು ಕೊಲೆಯಾದ. ಆಲೂರಿನ ನಡು ರಸ್ತೆಯಲ್ಲಿ ರಾಘವರೆಡ್ಡಿ ಕೊಲೆಯಾಗಿ ಬಿದ್ದಿದ್ದ. ಏಳೆಂಟು ಜನರ ತಂಡ ನಮ್ಮೆದುರೇ ಗುಂಡು ಹಾರಿಸಿ ಕೊಂದು ಹೋದ್ರು ಅಂತ ಆಲೂರಿನ ಜನ ಹೇಳಿದ್ದರು. ಸುಬ್ಬಯ್ಯ ನಾಯ್ಡು ಹೆಂಡತಿ ತನ್ನ ಗಂಡನ್ನ ಕೊಂದವ್ನು ಪ್ರಭಾಕರರಾವು. ನನ್ನೆದುರಿಗೇ ಕೊಂದ ಅಂತ ದೂರು ಕೊಟ್ಟಳು. ಮನೆಗೆ ಪೊಲೀಸರು ಬಂದು ಲಕ್ಷ್ಮಮ್ಮ, ಗೋವಿಂದನ್ನ ಎಳೆದೊಯ್ದು ವಿಚಾರಣೆ ನಡೆಸಿ, ನಂತರ, ''ಪ್ರಭಾಕರ ಬಂದರೆ ತಿಳಿಸಿ, ಮುಚ್ಚಿಟ್ಟರೆ ಒದ್ದು ಒಳಗೆ ಹಾಕ್ತೀವಿ'', ಅಂತ ಬೆದರಿಸಿ ಕಳಿಸಿದ್ದರು. ಪೊಲೀಸರ ಕಾಟ ತಾಳಲಾರದೆ ಇದ್ದ ನಾಲ್ಕೆಕರೆ ಗದ್ದೆಯನ್ನು ಸಿಕ್ಕಿದ ರೇಟಿಗೆ ಮಾರಿ ಲಕ್ಷ್ಮಮ್ಮ ಮಕ್ಕಳೊಡನೆ ಆದೋನಿಯ ತವರಿಗೆ ಸೇರಿಕೊಂಡಿದ್ದರು. ಪೆರಟಾಲ ರವಿಯ ಹತ್ಯೆಯಾದಾಗ ಪೊಲೀಸರು ಆದೋನಿಗೂ ಹುಡುಕಿಕೊಂಡು ಬಂದಿದ್ದರು. ''ನಮಗೂ ಅವನಿಗೂ ಸಂಪರ್ಕವೇ ಇಲ್ಲ. ಅವನೆಲ್ಲಿದ್ದಾನೆ ಅಂತ ನಮಗೆ ಗೊತ್ತಿಲ್ಲ'', ಅಂತೆಲ್ಲಾ ಅಂಗಲಾಚಿದರೂ ಪೊಲೀಸರ ಕಿರುಕುಳ ತಪ್ಪಿರಲಿಲ್ಲ. ವರ್ಷಗಳು ಕಳೆದಂತೆ ಪೊಲೀಸರು ಇವರ ತಂಟೆಗೆ ಬರದೆ ಸುಮ್ಮನಾಗಿದ್ದರು.

ಚಿತ್ತೂರಿನ ಬಳಿ ಜಮೀನ್ದಾರ್ ನಾಗಿರೆಡ್ಡಿ, ಅವನ ಹೆಂಡತಿ ಮಕ್ಕಳನ್ನ ಅಮಾನುಷವಾಗಿ ಕೊಚ್ಚಿಹಾಕಿದ್ದರಂತೆ. ಸರ್ಕಾರ ಪ್ರಭಾಕರರಾವು, ವೆಂಕಟೇಶ್ವರುಲು, ಪರಮೇಶ್ವರಿ, ಅಪ್ಪಾರೆಡ್ಡಿ ಮೊದಲಾದ ನಕ್ಸಲರ ತಲೆಗೆ ತಲಾ ಐದು ಲಕ್ಷ ಬಹುಮಾನ ಘೋಷಿಸಿದಾಗ ಲಕ್ಷ್ಮಮ್ಮ ಗೋವಿಂದ ಅತ್ತು ಅತ್ತು ಸಾಕಾಗಿ ನಿರ್ಲಿಪ್ತರಾಗಿದ್ದರು

ಗೋವಿಂದನಿಗೆ ಪ್ರೈಮರಿ ಶಾಲೆ ಮಾಸ್ತರನಾಗಿ ಕುರುಗೋಡಿಗೆ ಹಾಕಿದ್ದರು. ಬಳ್ಳಾರಿಯ ಪಾರ್ಥನೊಂದಿಗೆ ಶಕುಂತಲಳ ಲಗ್ನವಾಯಿತು. ಗೋಂವಿದನ ಲಗ್ನವೂ ಆಗಿ ಎರಡು ಮಕ್ಕಳಾದವು. ಶಕುಂತಲಳ ಗಂಡ ಪಿ. ಯು. ಕಾಲೇಜು ಮಾಸ್ತರರ ಪರೀಕ್ಷೆ ಬರೆದಿದ್ದನಂತೆ.

''ಸೆಲೆಕ್ಟ್ ಆಗಿದೀನಿ. ಸರ್ಕಾರಿ ನೌಕರಿ ಸಿಗ್ತದೆ, ಆದರೆ ಮೂರು ಲಕ್ಷ ಕೇಳ್ತಿದಾರೆ. ಮೂರುವರೆ ಕೊಟ್ಟರೆ ಕೇಳಿದ ಜಾಗ ಕೊಡ್ತಾರಂತೆ. ಸಹಾಯ ಮಾಡ್ತೀರಾ ?'' ಅಂತ ಅವನು ಬಂದಾಗ ''ಹೆಂಗಾರ ಐವತ್ತು ಸಾವ್ರ ಹೊಂದ್ಸಿ ಕೊಟ್ಟೇನು. ನನ್ನ ಶಕ್ತಿ ಅಷ್ಟೇ'' ಅಂದ ಗೋವಿಂದ. ಪಾರ್ಥ ಪೆಚ್ಚುಮೋರೆಯೊಡನೆ ಹಿಂದಿರುಗಿದ್ದ. ಎರಡು ವಾರ ಕಳೆದಿತ್ತು, ಗೋವಿಂದ ಅಮ್ಮನಿಗೆ ಹೇಳಿದ ''ಅಮ್ಮಾ ಪಾರ್ಥನಿಗೆ ಕೆಲಸ ಸಿಕ್ತಂತೆ. ಕೊಪ್ಪಳಕ್ಕೆ ಹಾಕ್ಯಾರಂತೆ''

''ಹೌದೇನೋ ! ದುಡ್ಡು ಹೆಂಗೆ ಜೋಡಿಸಿದ್ನಂತೆ ?''

''ಏನೂ ಕೊಟ್ಟಿಲ್ಲಂತಮ್ಮ. ಜೊತೆಯೋರೆಲ್ಲಾ ಎರಡೂವರೆ, ಮೂರು, ಮೂರೂವರೆ ಲಕ್ಷ ಕೊಟ್ಟಿದ್ದಾರಂತೆ. ಅವನಿಗೆ ಯಾರೋ ಫೋನ್ ಮಾಡಿ ಕೆಲ್ಸ ಸಿಕ್ತಾ, ಎಲ್ಲಿಗೆ ಹಾಕಿದ್ದಾರೆ , ಅಂತ ವಿಚಾರಿಸಿ ಗಹಗಹಿಸಿ ನಕ್ಕು ಫೋನ್ ಇಟ್ಟರಂತೆ. ಅಮ್ಮಾ ಅವ್ನು ಪ್ರಭಾಕರನೇ ಇರಬೇಕು. ಅವನು ರೊಕ್ಕ ಕೊಟ್ಟಿರ್ಬೇಕು ಇಲ್ಲಾ ಸಂಬಂಧಿಸಿದವರಿಗೆ ಜೀವ ಬೆದರಿಕೆ ಹಾಕಿರ್ಬೇಕು.''

''ಶಕುಂತ್ಲಿ ಲಗ್ನಾಗಿದ್ದೇ ಅವನಿಗೆ ಗೊತ್ತಿಲ್ಲ ಕಣೋ.''

''ಅಮ್ಮ ನಿಂಗೆ ಹೇಳಿರ್ಲಿಲ್ಲ. ಲಗ್ನಾದ ಮ್ಯಾಲೆ ಶಕ್ಕು ಉಡುಗೊರೆ ಪ್ಯಾಕೆಟ್ ಬಿಚ್ಚಿ ನೋಡುವಾಗ ಒಂದು ಪ್ಯಾಕೆಟ್‌ನಲ್ಲಿ ಚಂದದ ರೇಷ್ಮೆ ಸೀರೆ, ಅರಿಸಿನ ಕುಂಕುಮ ಪ್ಯಾಕೆಟ್, 'ತಂಗಿಗೆ ತವರಿನ ಉಡುಗೊರೆ' ಅಂತ ಚೀಟಿ ಇತ್ತಂತೆ. 'ನೀನು ಹಿಂಗ್ಯಾಕೆ ಕೊಟ್ಯೋ ? ದೀಪಾವಳಿಗೆ ಕೊಟ್ರೆ ಆಗೋದು' ಅಂದ್ಲು. ''ನಾನಲ್ಲ'' ಅಂದೆ. ಪಕ್ಕನೇ ''ಪ್ರಭಣ್ಣ'' ಅಂತ ಶಕುಂತ್ಲ ಅತ್ಲು. ''ಯಾರಿಗೂ ಹೇಳ್ಬೇಡ'' ಅಂದಿದ್ದೆ .

ಲಕ್ಷ್ಮಮ್ಮ ಬಿಕ್ಕಿಬಿಕ್ಕಿ ಅತ್ತಿದ್ದರು. ''ಹೆಂಗರಳಿನ ಹುಡುಗ. ಒಬ್ರಿಗೆ ಅನ್ಯಾಯ ಮಾಡ್ದೋನಲ್ಲ. ಅನ್ಯಾಯಕ್ಕೆ ಸಿಡಿಯೋನು, ಅವ್ನು ಹಿಂಗ್ಯಾಕಾದ್ನೋ !'' ಗೋವಿಂದನೂ ಅತ್ತಿದ್ದ.

ತಿರುಪತಿಯಲ್ಲಿ ದರೋಜಿಯ ಎಲ್ಲಮ್ಮನಿಗೆ ಪ್ರಭಾಕರ ಸಿಕ್ಕಿದ್ನಂತೆ. ಎಲ್ಲಾ ಹೆಂಗದಾರೆ ಅಂತ ವಿಚಾರಿಸಿ ಅಮ್ಮನಿಗೆ ಕೊಡು ಅಂತ ತಿಮ್ಮಪ್ಪನ ಬೆಳ್ಳಿ ವಿಗ್ರಹ ಕೊಟ್ಟನಂತೆ. ಅವತ್ತೇ ಅಂತೆ ಬಾಂಬ್ ಸ್ಫೋಟದಲ್ಲಿ ಕೂದಲೆಳೆ ಅಂತರದಲ್ಲಿ ಚಂದ್ರಬಾಬು ನಾಯ್ಡು ಪಾರಾಗಿದ್ದು. 'ಬಂಗಾರದಂತ ಹುಡುಗ, ಎಲ್ಲರಂಗೆ ಬದುಕಕ್ಕೆ ಜನ ಬಿಡಲಿಲ್ಲ ಕಣವ್ವ' ಅಂದಿದ್ದಳು ಎಲ್ಲಮ್ಮ. ''ಹಂಗಂತ ಅವ್ನು ಹಿಡಿದ ದಾರಿ ಒಳ್ಳೇದಲ್ಲ. ಹೆಂಗಾರ ಚನ್ನಾಗಿರಲಿ'' ಅಂತ ಲಕ್ಷ್ಮಮ್ಮ ಅತ್ತಳು. ವರ್ಷಗಳು ಉರುಳಿ ಬದುಕು ಸಾಗುತ್ತಿತ್ತು. ಆದರೆ ಇವತ್ತು ಟಿವಿಯಲ್ಲಿ ನೋಡಿದ್ದು ಕಣ್ಣಿಗೆ ಕಟ್ಟಿದಂತಾಗಿ ಹೊಟ್ಟೆಯ ಸಂಕಟದಿಂದ ಒದ್ದಾಡಿದಳು. ಯಾವಾಗಲೋ ಜೋಂಪು ಹತ್ತಿರಬೇಕು. ಗೋವಿಂದ ಬಂದು ಅಲುಗಾಡಿಸಿದಾಗಲೇ ಎಚ್ಚರ.

''ಅಮ್ಮ, ಹೆಂಗಿದೀಯಾ ? ಬಿಪಿ ಜಾಸ್ತಿ ಆಗ್ಯದೆ ಅಂತ ಶಾರ್ದ ಹೇಳಿದ್ಲು. ಡಾಕ್ಟ್ರಹತ್ರ ಹೋಗ್ಬರಾಣ ನಡೀ'' ಅಂದಾಗ, ಮಗನನ್ನೇ ನೋಡುತ್ತಿದ್ದಾಗ ಇದುವರೆಗೆ ಬಾರದ ಅಳು ಒಮ್ಮೆಲೇ ಒತ್ತರಿಸಿಬಂದು ಬಿಕ್ಕಿಬಿಕ್ಕಿ ಅತ್ತಳು.

''ಹೆತ್ತ ಹೊಟ್ಟೆ ಧಗಧಗ ಉರೀತಿದೆ ಕಣೋ. ಬಂಗಾರದಂತ ಹುಡುಗ ಹೋದ. ...ಹೋದ'' ಅಂತ ಬಿಕ್ಕಳಿಸಿದಳು.

ಏನಾತು ? ಗೋವಿಂದ ಗಡಬಡಿಸಿದ.

''ರಾತ್ರಿ ಎನ್ಕೌಂಟರ್ನಲ್ಲಿ ಪ್ರಭಾಕರ ಸತ್ತೋದ. ಅವ್ನ ಹೆಣ ಟಿವಿನಾಗೆ ತೋರ್ಸಿದ್ರು. ನನ್ನ ಮಗ ಸತ್ನೋ'' ಎಂದು ಎದೆ ಬಡಿದುಕೊಂಡಳು. ಗೋವಿಂದ ಥಟ್ಟನೇ ಅರ್ಥವಾಗಿ ತಾಯಿಯನ್ನು ತಬ್ಬಿಹಿಡಿದ. ಅವನ ಕಣ್ಣೀರು ಲಕ್ಷ್ಮಮ್ಮನ ಮುಖದ ಮೇಲೆ ದಳದಳ ಉದುರುತ್ತಿತ್ತು.

**ಜಿ. ಎಸ್. ಸುಶೀಲಾದೇವಿ. ಆರ್. ರಾವ್**
ದ್ವಾರ. ಡಾ|| ಆನಂದ್ ಋಗ್ವೇದಿ, ಜಿಲ್ಲಾ ಮಲೇರಿಯಾ ಕಛೇರಿ
ಸಿ. ಜಿ. ಆಸ್ಪತ್ರೆ ಆವರಣ, ದಾವಣಗೆರೆ - ೫೭೭ ೦೦೪

## ಅಭಿನಂದನೆ



ಪಂಪ ಪ್ರಶಸ್ತಿ ಪುರಸ್ಕೃತ 'ಚಂಪಾ' ಅವರಿಗೆ 'ಹೊಸತು' ಮತ್ತು 'ನವಕರ್ನಾಟಕ'ದ ಹಾರ್ದಿಕ ಅಭಿನಂದನೆಗಳು

# ವಿಜ್ಞಾನ ಲೋಕದ ನಿಷ್ಠುರ ನಾವಿಕರು ಮತ್ತು ಅಡ್ನಾಡಿಗಳು

ಸಿ. ಯತಿರಾಜು

ನಾವಿಂದು ಜ್ಞಾನ ಸಮಾಜದಲ್ಲಿ ಬದುಕುತ್ತಿದ್ದೇವೆಂದು ಬಹಳ ಹೆಮ್ಮೆಯಿಂದ ಹೇಳಿಕೊಂಡು ಬೀಗುತ್ತಿದ್ದೇವೆ; ಅತ್ಯಂತ ಅಭಿವೃದ್ಧಿಗೊಂಡ, ತಾಂತ್ರಿಕ ಸಂಸ್ಕೃತಿಯುಳ್ಳ ಸಮಾಜದಲ್ಲಿ ಬದುಕುತ್ತಾ ವಿಜ್ಞಾನ ತಂತ್ರಜ್ಞಾನಗಳಿಲ್ಲದೆ ನಮ್ಮ ಬದುಕೇ ಸಾಧ್ಯವಿಲ್ಲ ಎಂಬ ಸಮಾಜದ ಭಾಗವಾಗಿದ್ದೇವೆ. ವಿಜ್ಞಾನ ತಂತ್ರಜ್ಞಾನದ ದಿಗಂತಗಳು ವಿಕಾಸಗೊಂಡು ವಿಸ್ತರಿಸುತ್ತಾ ಸಾಗಿ ಇಂದು ಅತ್ಯಂತ ಶೀಘ್ರಾತಿಶೀಘ್ರವಾಗಿ ಆಸ್ಫೋಟಿಸುತ್ತಿರುವ ಹಂತಕ್ಕೆ ತಲುಪಿದ್ದೇವೆ. ಜ್ಞಾನದ ವಿಸ್ತರಣೆಯು ಬಹುಮುಖಿಯಾಗಿ ಸೂಪರ್‌ಸಾನಿಕ್ ವೇಗದಲ್ಲಿ ಸಾಗುತ್ತಿದೆ. ಈ ಎಲ್ಲ ಬೆಳವಣಿಗೆಗಳ ನಡುವೆಯೂ ಮೂಢಾಚಾರ, ನಂಬಿಕೆ, ಅಂಧಶ್ರದ್ಧೆ, ಕಂದಾಚಾರ, ಅವೈಚಾರಿಕತೆ ಮುಂತಾದುವುಗಳು ಹೊಸ ಹೊಸ ಅತ್ಯಾಧುನಿಕ ರೂಪಗಳನ್ನು ಪಡೆದುಕೊಂಡು ವಿಶಾಲ ಜನಸಮೂಹಗಳನ್ನು ಆವರಿಸಿಕೊಂಡು ಆಳುತ್ತಿವೆ. ಅತ್ಯಂತ ಪ್ರಸಿದ್ಧ ವೃತ್ತಿಪರ ವಿಜ್ಞಾನಿಗಳೇ ಇಂತಹ ಕಂದಾಚಾರಗಳಲ್ಲಿ ಮುಳುಗೇಳುತ್ತಿರುವಾಗ ಅತ್ಯಂತ ಸಾಮಾನ್ಯ ಮುಗ್ಧ ಜನರ ಪಾಡೇನು ಎನ್ನುವಂತಾಗಿದೆ.

ಕಾರ್ಪೊರೇಟ್ ಗುರುಗಳ ಹಿಂಡೇ ಸಾಮೂಹಿಕ ಸಮ್ಮೋಹನಾ ತಂತ್ರಗಳನ್ನ ಇದೇ ವಿಜ್ಞಾನ ತಂತ್ರಜ್ಞಾನಗಳನ್ನು ಬಳಸಿಕೊಂಡು ವಿನೂತನ ಸಾಮೂಹಿಕ ಸನ್ನಿಗಳನ್ನೇ ಸೃಷ್ಟಿಸುತ್ತಾ ಸಾಗಿದೆ. ಉದ್ದಿಮೆಪತಿಗಳು, ಕೈಗಾರಿಕೋದ್ಯಮಿ ಸಾಮ್ರಾಟರು, ಬಂಡವಾಳಗಾರರು, ಹಾಗೂ ಕೆಲ ವಿಜ್ಞಾನಿಗಳೆಂದು ಕರೆದುಕೊಳ್ಳುವವರು ತಾವೇ ಸಾಮೂಹಿಕ ಸನ್ನಿಗಳಿಗೆ ಬಲಿಯಾಗಿರುವುದೇ ಅಲ್ಲದೆ ಅವರ ಅನುಯಾಯಿ ಸಮೂಹಗಳ ಸೃಷ್ಟಿ ಮತ್ತು ವಿಸ್ತರಣೆಯಲ್ಲಿ ಪ್ರಧಾನ ಪಾತ್ರ ವಹಿಸುತ್ತಿದ್ದಾರೆ.

ನಮ್ಮ ಸಮೂಹಮಾಧ್ಯಮಗಳು ವಿವಿಧ ರೀತಿಯ ಜ್ಯೋತಿಷ್ಯಕಾರರನ್ನ, ಬಾಬಾಗಳನ್ನ, ಕಪಟ ಕಾವಿಧಾರಿ ಮೋಸಗಾರ ಸಾಧು, ಸಂತ ವೇಷಧಾರಿಗಳನ್ನ ದಿನನಿತ್ಯ ವಿಜೃಂಭಿಸಿ ಕಪೋಲಕಲ್ಪಿತ, ಅತಿರಂಜಿತ ಘಟನಾವಳಿಗಳನ್ನ ಅತ್ಯಂತ ವಿಕೃತವಾಗಿ ಪದೇ ಪದೇ ಪ್ರಸ್ತಾಪಿಸಿ ಜನಸಮುದಾಯವನ್ನ ದಿಕ್ಕು ತಪ್ಪಿಸುವ ಬೇಜವಾಬ್ದಾರಿ ಕಾರ್ಯವನ್ನ ಅತ್ಯಂತ ಯಶಸ್ವಿಯಾಗಿ ಮಾಡುತ್ತಿರುವ, ನಮ್ಮ ರಾಜಕೀಯ ಮುಖಂಡರ ಡಂಭಾಚಾರದ ವ್ಯರ್ಥ, ಅರ್ಥಹೀನವಾದ ತೋರಿಕೆಯ ಧಾರ್ಮಿಕ ವಿಧೇಯತೆಯ ಹೊಸ ಹೊಸ ನಾಟಕ ಮತ್ತು ಪ್ರತಿನಾಟಕಗಳನ್ನ, ಮಠಮಾನ್ಯಗಳ ದೇವಾಲಯಗಳ ಭೇಟಿಗಳನ್ನ ಕಾಣಿಕೆ ಅರ್ಪಣೆಗಳನ್ನ ಮಾಧ್ಯಮಗಳು ಪ್ರಧಾನ ಸುದ್ದಿಗಳಾಗಿಸಿ ಜನರನ್ನು ದಿಕ್ಕೆಡಿಸುವ ಕೆಲಸವನ್ನ ಮಾಡುತ್ತಿವೆ. ಇಂತಹ ಪ್ರಧಾನ ಸುದ್ದಿಯ ಕೇಂದ್ರದಲ್ಲಿರಲು ಅನೇಕ ಸ್ವಾಮೀಜಿಗಳು, ಮಠಮಾನ್ಯಗಳು, ದೇವಾಲಯಗಳು ತಮ್ಮ ತಮ್ಮಲ್ಲೆ ಪ್ರಚಾರ ಸ್ಪರ್ಧೆಗೆ ಧುಮುಕಿ ತಮ್ಮ ಸಾಮಾಜಿಕ ಮತ್ತು ರಾಜಕೀಯ ಪ್ರಭಾವವನ್ನು ವಿಸ್ತರಿಸಿಕೊಳ್ಳುವ ಹೆಣಗಾಟದಲ್ಲಿ ಮುಳುಗೇಳುತ್ತಿವೆ. ಹೋಮ ಹವನಗಳು, ಬಹುವಿಧದ ಅರ್ಚನೆ ಪೂಜಾದಿಗಳನ್ನು ಈ ಪುಢಾರಿಗಳ ಪರವಾಗಿ ಮಾಡಿಸುವುದನ್ನೇ ಕಾಯ್ದು ಪ್ರಚಾರ ಮಾಡಲಾಗುತ್ತಿದೆ. ಈ ಪೈಪೋಟಿ ಇಂದು ಎಂತಹ ಲಜ್ಜೆಗೆಟ್ಟ ನಡವಳಿಕೆಗೆ ದಾರಿಮಾಡಿಕೊಟ್ಟಿದೆ ಎಂದರೆ ಇವರು ಅತ್ಯಂತ ಬಹಿರಂಗವಾಗಿ ಮಾಟ-ಮಂತ್ರ ಮುಂತಾದ ವಾಮಾಚಾರಗಳನ್ನ ಯಾವುದೇ ನಿರ್ಭಿಡೆ ಇಲ್ಲದೆ ಮಾಡಿಸಿ ಆರೋಪ, ಪ್ರತ್ಯಾರೋಪಗಳನ್ನ ಮಾಧ್ಯಮಗಳಲ್ಲೇ ಪ್ರಧಾನವಾಗಿ ಮಾಡಿ ವಾಮಾಚಾರಿಗಳ ಮಹಾ ಸಮರವನ್ನ ಸೃಷ್ಟಿಸಿದ್ದಾರೆ.

ಮಕರ ಜ್ಯೋತಿಯಂತಹ ಸಾರ್ವಜನಿಕ ಮೋಸಗಳನ್ನ ಬಯಲು ಮಾಡಲು ಪ್ರಗತಿಪರವೆಂದು ಬಡಾಯಿ ಕೊಚ್ಚಿಕೊಳ್ಳುವ ಸರ್ಕಾರಗಳೇ ನಿರಾಕರಿಸುತ್ತಿವೆ. ಜನರ ನಂಬಿಕೆಯ ಪ್ರಶ್ನೆಗಳಲ್ಲಿ ನಾವು ಮಧ್ಯ ಪ್ರವೇಶಿಸುವುದಿಲ್ಲವೆಂದು ಹೇಳಿಕೊಳ್ಳುತ್ತಾ ತಮ್ಮ ಸರ್ಕಾರಕ್ಕೆ ಮುಗ್ಧ ಯಾತ್ರಾರ್ಥಿಗಳ ಆಗಮನದಿಂದಾಗುವ ಲಾಭದ ಪಾಲನ್ನು ಕಾಪಾಡಿಕೊಳ್ಳಲು, ತಮ್ಮ ರಾಜ್ಯದ ದೇವಾಲಯಗಳ ತಿಜೋರಿ ತುಂಬಿಕೊಳ್ಳುವ ದಿಶೆಯಲ್ಲಿ ಸಹಕರಿಸಲು ಮುಂದಾಗಿ ಸಾಮೂಹಿಕ ಸನ್ನಿಯ ಮಹಾದುರಂತಗಳನ್ನ ಸೃಷ್ಟಿಸುತ್ತಿರುವುದೇ ಅಲ್ಲದೆ ಅವರ ಮಾರಣಹೋಮಕ್ಕೆ ಪರೋಕ್ಷ ಬೆಂಬಲ ನೀಡಿ ಸಾರ್ವಜನಿಕ ಮೋಸವನ್ನ ಬೆಂಬಲಿಸುತ್ತಿವೆ. ಮಾಟ-ಮಂತ್ರಗಳು, ಹೋಮ ಹವನಗಳು, ವಾಸ್ತುವಿಕಾರಗಳು, ದೇವಾಲಯಗಳು, ಸ್ಮಶಾನಗಳನ್ನು ಬಿಟ್ಟು ಮಂತ್ರಿ ಮಹೋದಯರ ಮನೆ ಕಛೇರಿಗಳಲ್ಲೂ ವಿಜೃಂಭಿಸುವುದನ್ನ ನಮ್ಮ ಮಾಧ್ಯಮಗಳು ಅತ್ಯಂತ ರಸವತ್ತಾಗಿ ಕಳೆ ಕಟ್ಟಿಸಿ ಬಿತ್ತರಿಸುತ್ತಿವೆ. ಇದು ಎಂತಹ ಲಜ್ಜೆಗೆಟ್ಟ ಉತ್ತುಂಗಕ್ಕೇರಿದೆಯೆಂದರೆ ಒಬ್ಬರನ್ನ ಅಧಿಕಾರದಿಂದ ಕೆಳಗಿಳಿಸುವ ತಂತ್ರವಾಗಿ ಅಧಿಕಾರದ ಗದ್ದುಗೆಯ ಆವರಣದಲ್ಲೇ ಮಾಟ-ಮಂತ್ರಗಳು ರಾರಾಜಿಸುತ್ತಿವೆ. ರಾಜ್ಯದ ಜನರನ್ನು ರಕ್ಷಿಸುವ ಭರವಸೆ ನೀಡಬೇಕಾದವರೇ ಈ ಮಾಟ-ಮಂತ್ರಗಳಿಂದ ತಮ್ಮ ಜೀವಕ್ಕೆ ಅಪಾಯವಿದೆ ಎಂದು ಸಾರ್ವಜನಿಕವಾಗಿ ಗೋಳಿಡುವ ಹಾಸ್ಯಾಸ್ಪದ ಹಂತಕ್ಕೆ ತಲುಪಿದೆಯೆಂದರೆ ಇನ್ನು ಅತ್ಯಂತ ಸಾಮಾನ್ಯಜನರ ಪಾಡೇನು ? ನ್ಯಾಯಾಲಯ ಮಕರ ಜ್ಯೋತಿಯ ಸತ್ಯಾಸತ್ಯತೆಯನ್ನು ಬಹಿರಂಗಪಡಿಸಲು ಆದೇಶಿಸಿದರೂ ಅದು ಸಾರ್ವಜನಿಕ ನಂಬಿಕೆ ಎಂಬ ನೆಪವೊಡ್ಡಿ ರಾಜ್ಯಾಂಗದ ಒಂದು ಮುಖ್ಯ ಕರ್ತವ್ಯವನ್ನು ನಿರ್ವಹಿಸಲು ನಿರಾಕರಿಸುವ ಸರ್ಕಾರದ ಪ್ರಗತಿಪರತೆಯ ಟೊಳ್ಳುತನ ಬಹಿರಂಗವಾಗಿದೆ.

ಯಾವ ವಿಜ್ಞಾನ ತಂತ್ರಜ್ಞಾನಗಳು ಇಂದು ಆಧುನಿಕ ಮಾನವನ ಕೈಯಲ್ಲಿ ನಿಸರ್ಗದ ನಿಗೂಢಗಳನ್ನ, ವಿದ್ಯಮಾನಗಳನ್ನ ಭೇದಿಸಲು ಅತ್ಯಂತ ಪ್ರಬಲ ಅಸ್ತ್ರಗಳಾಗಿವೆಯೋ, ಅವನ ಅರಿವಿನ ವಿಸ್ತಾರವನ್ನು ಅನಂತವಾಗಿ ವಿಸ್ತರಿಸುತ್ತಾ ಸಾಗಿವೆಯೋ, ಅವುಗಳನ್ನೇ ಬಳಕೆ ಮಾಡಿಕೊಂಡು ಹೊಸ ಅರಿವನ್ನೇ ಮಂಕಾಗಿಸುವ, ಗೊಂದಲ ಸೃಷ್ಟಿಸುವ ಪ್ರಯತ್ನಗಳು ಅದರ ನೆರಳಿನಂತೆ ಹಿಂಬಾಲಿಸುತ್ತಿವೆ. ಹಳೆಯ ಕಂದಾಚಾರಗಳು ಹೊಸ ರೂಪ ಪಡೆದು ವಿಜೃಂಭಿಸುತ್ತಿವೆ. ಇದಲ್ಲದೆ ಅತ್ಯಾಧುನಿಕ ಯುಗದ ವಿನೂತನ ಮೂಢಾಚಾರಗಳು, ಕಂದಾಚಾರಗಳು ಸೃಷ್ಟಿಯಾಗುತ್ತಾ, ವಿಶಾಲ ಜನಸಮೂಹಗಳನ್ನಾವರಿಸುತ್ತಾ ಸಾಗುತ್ತಿರುವುದು ಅತ್ಯಂತ ಢಾಳುಢಾಳಾಗಿ ಗೋಚರವಾಗುತ್ತಿದೆ.

ಜೆ. ಡಿ. ಬರ್ನಾಲ್ ಪ್ರಶಸ್ತಿ ಪುರಸ್ಕೃತ ಡಚ್ ವಿಜ್ಞಾನಿ ಡಬ್ಲ್ಯೂ. ಇ. ಬಿಜಕರ್ 'The paradox of Scientific Authority' ಎಂಬ ತನ್ನ ಇತ್ತೀಚಿನ ಪುಸ್ತಕದಲ್ಲಿ ಅತ್ಯಂತ ಪ್ರಧಾನವಾದ ಪ್ರಶ್ನೆಯೊಂದನ್ನು ಎತ್ತುವ ಮೂಲಕ ಈ ವೈರುಧ್ಯಪೂರ್ಣ ಬೆಳವಣಿಗೆಗಳನ್ನು ಅರ್ಥೈಸುವ ಪ್ರಯತ್ನ ಮಾಡುತ್ತಾನೆ. ನಾವಿಂದು ಅತ್ಯಂತ ಅಭಿವೃದ್ಧಿಗೊಂಡ ತಾಂತ್ರಿಕ ಸಂಸ್ಕೃತಿಯ ಸಮಾಜದಲ್ಲಿ ಬದುಕುತ್ತಿದ್ದರೂ, ವಿಜ್ಞಾನ ತಂತ್ರಜ್ಞಾನವಿಲ್ಲದೆ ನಮ್ಮ ಅಸ್ತಿತ್ವವೇ ಇಲ್ಲವೆನ್ನುವ ಸಮಾಜದಲ್ಲಿ ಬದುಕುತ್ತಿದ್ದರೂ, ನಮ್ಮ ವಿಜ್ಞಾನಿ ಮತ್ತು ತಂತ್ರಜ್ಞರ ಅಧಿಕಾರವೇ ಕೊಚ್ಚಿಹೋಗುತ್ತಿದೆ. ಅದರಲ್ಲೂ ವಿಶೇಷವಾಗಿ ಯುರೋಪ್ ಮತ್ತು ಅಮೆರಿಕಾ ದೇಶಗಳಲ್ಲಿ ಈ ಬೆಳವಣಿಗೆ ಅತ್ಯಂತ ನಿಚ್ಚಳವಾಗಿ ಕಂಡುಬರುತ್ತಿದೆ ಎಂದು ಗುರುತಿಸುತ್ತಾನೆ. ಇಷ್ಟೊಂದು ವೈಜ್ಞಾನಿಕ ಮತ್ತು ತಾಂತ್ರಿಕವಾಗಿರುವ ನಾವೆಲ್ಲಾ ಜೀವಿಸುತ್ತಿರುವ ಈ ಸಮಾಜದಲ್ಲಿ ವಿಜ್ಞಾನಿಗಳನ್ನ, ತಂತ್ರಜ್ಞರನ್ನ ನಾವೇ ನಂಬದಿರುವಂತಹ ಪರಿಸ್ಥಿತಿ ಹೇಗೆ ನಿರ್ಮಾಣಗೊಂಡಿತು ? ಈ ಪ್ರಶ್ನೆಯನ್ನು ವಿಶ್ಲೇಷಿಸಲು ಕೆಲವು ವಿವಾದಾತ್ಮಕ ವಿದ್ಯಮಾನಗಳನ್ನು ಕೈಗೆತ್ತಿಕೊಳ್ಳುತ್ತಾನೆ. ಅವುಗಳಲ್ಲಿ ಪ್ರಧಾನವಾಗಿ ಜೈವಿಕ ತಂತ್ರಜ್ಞಾನ, ನ್ಯಾನೋ ತಂತ್ರಜ್ಞಾನ, ಪರಮಾಣು ತಂತ್ರಜ್ಞಾನ ಮತ್ತು ಇವೆಲ್ಲವುಗಳಿಗಿಂತಲೂ ಅಧಿಕವಾಗಿ ಹವಾಮಾನ ವೈಪರೀತ್ಯಗಳ ವಿಜ್ಞಾನಗಳನ್ನು ಪ್ರಧಾನವಾಗಿಟ್ಟುಕೊಂಡು ಚರ್ಚಿಸುತ್ತಾನೆ.

ವಿಜ್ಞಾನವೆಂಬುದು ಸತ್ಯದ ಹುಡುಕಾಟ. ನಿಸರ್ಗಾನುಸಂಧಾನದ ಮೂಲಕವಾಗಿ ನಾವು ಲೋಕದ ಅರಿವನ್ನು ಪಡೆಯುತ್ತಾ ಸಾಗುತ್ತಿದ್ದೇವೆ. ನಿಸರ್ಗದ ಒಂದು ಭಾಗವಾಗಿರುವ ಮಾನವ ಅದರೊಂದಿಗೆ ಒಡನಾಡುತ್ತಲೇ ಅದರ ನಿಗೂಢಗಳನ್ನ ನಿಯಮಗಳನ್ನ ಅರಿಯುತ್ತ ಸಾಗಿ ಬರುತ್ತಿದ್ದಾನೆ. ಆದಿಮಾನವ ಕಂದ ಫಲ ಮೂಲಾದಿಗಳನ್ನು ಹುಡುಕುತ್ತಾ ಸಸ್ಯಶಾಸ್ತ್ರವನ್ನ ರೂಪಿಸಿದ; ಆಹಾರಕ್ಕಾಗಿ ಪ್ರಾಣಿಗಳನ್ನರಸಿ ಪ್ರಾಣಿಶಾಸ್ತ್ರವನ್ನರಿತುಕೊಳ್ಳುತ್ತಾ ಬಂದ; ಆಯುಧಗಳನ್ನು ರೂಪಿಸುವ ಪ್ರಯತ್ನದ ಮೂಲಕವಾಗಿ ವಸ್ತು ವಿಜ್ಞಾನವನ್ನರಿತ; ಬೇಟೆಯಾಡುವ ಮೂಲಕ ಚಲನಶಾಸ್ತ್ರದ ನಿಯಮಾವಳಿಗಳನ್ನರಿತ; ನಿಸರ್ಗದ ಶಕ್ತಿಗಳನ್ನು ತನ್ನ ಅನುಕೂಲಕ್ಕೆ ಬಳಸಿಕೊಳ್ಳಲು ಪ್ರಯತ್ನಿಸುತ್ತಲೇ ಅದನ್ನು ಬದಲಾಯಿಸುತ್ತಾ ಸಾಗಿದ. ಈ ಬದಲಾವಣೆಯ ಕರ್ತೃವಾದ

ಮಾನವ ಕೂಡ ನಿರಂತರವಾಗಿ ಬದಲಾಗುತ್ತ ಜ್ಞಾನದ ಒಂದು ಹಂತದಿಂದ ಮತ್ತೊಂದಕ್ಕೆ ನೆಗೆಯುತ್ತಾ ಸಾಗಿದ್ದಾನೆ. ನಿಸರ್ಗದ ಮುಂದೆ ಅತ್ಯಂತ ದುರ್ಬಲನಾಗಿ ಅದನ್ನು ಆರಾಧಿಸಲಾರಂಭಿಸಿದ. ಮಾನವ ಇಂದು ವಿಜ್ಞಾನ ತಂತ್ರಜ್ಞಾನಗಳ ಶಕ್ತಿಯಿಂದ ಅದನ್ನು ತನಗೆ ಬೇಕಾದಂತೆ ತಿರುಚುವ ಸಾಹಸಕ್ಕೆ ಮುಂದಾಗಿ ತನಗೆ ತಾನೇ ಅಪಾಯಗಳನ್ನ ಆಹ್ವಾನಿಸಿಕೊಂಡು ವಿನಾಶದ ಅಂಚಿಗೆ ಬಂದು ನಿಂತಿದ್ದಾನೆ. ಅತ್ಯಂತ ಮಾರಕಾಸ್ತ್ರಗಳ ಬ್ರಹ್ಮನಾಗಿ ಜಗದ ವಿನಾಶದ ಅಂಚಿಗೂ ತಲುಪಿದ್ದಾನೆ. ಇವುಗಳಿಂದ ಪಾಠ ಕಲಿತಿರುವ ಮಾನವ ಇಂತಹ ಮಾರಕ ಸಾಹಸಗಳಿಂದ ಹಿಂದೆ ಸರಿದು ವಿವೇಕವನ್ನು ರೂಢಿಸಿಕೊಳ್ಳುವ ಹಾದಿಯಲ್ಲಿದ್ದಾನೆ. ನಿಸರ್ಗಾನುಸಂಧಾನದ ಫಲವಾಗಿ ಅರಿವಿನ ವಿಸ್ತಾರವನ್ನು ಹೆಚ್ಚಿಸಿಕೊಂಡ ಮಾನವ ಇಂದು ಜೀವದ ಸ್ವರೂಪವನ್ನೇ ಬದಲಿಸುವ ನಿಸರ್ಗದ ನಿಯಮಾವಳಿಗಳಿಗೆ ಹೊಸ ವ್ಯಾಖ್ಯಾನ ಬರೆಯಲು ಮುಂದಾಗುತ್ತಿದ್ದಾನೆ. ಕಲ್ಪನೆಗಳಿಗೆ ಸವಾಲಾಗಿರುವ ಬ್ರಹ್ಮಾಂಡ ಹೊಸ ಹೊಸ ವಿವರಣೆಗಳನ್ನು ರೂಪಿಸುತ್ತಲೆ ಸೂಕ್ಷ್ಮ ಲೋಕದ ಅಂತರಾಳವನ್ನು ಭೇದಿಸುವ ನ್ಯಾನೋ ತಂತ್ರಜ್ಞಾನದ ಆಳಕ್ಕಿಳಿಯುತ್ತಿದ್ದಾನೆ. ಜೀವಿ ಪ್ರಭೇದಗಳ ಅನನ್ಯತೆಯನ್ನ ವಿಶಿಷ್ಟತೆಯನ್ನ ಅಳಿಸಿಹಾಕುವ ಪ್ರಯತ್ನದಲ್ಲಿದ್ದಾನೆ. ನಿಸರ್ಗ ನಿರಂತರವಾಗಿ ಮಾನವನ ಅರಿವಿನ ವಿಸ್ತಾರಕ್ಕೆ ಸವಾಲುಗಳನ್ನೆಸೆಯುತ್ತಲೇ ಇರುತ್ತದೆ. ಮಾನವ ಈ ಸವಾಲುಗಳನ್ನು ಸ್ವೀಕರಿಸುತ್ತಲೇ ತನ್ನರಿವನ್ನು ನಿರಂತರವಾಗಿ ಹಿಗ್ಗಿಸುತ್ತಾ ಸಾಗಿದ್ದಾನೆ.

## ಅಭಿನಂದನೆ



೨೦೧೦ನೇ ಸಾಲಿನ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ 'ಡಾ॥ ಚಂದ್ರಶೇಖರ ಕಂಬಾರ'ರಿಗೆ 'ಹೊಸತು' ಮತ್ತು 'ನವಕರ್ನಾಟಕ'ದ ಅಭಿನಂದನೆಗಳು

ಮನುಷ್ಯ ಸಂತತಿ ತಾನು ಅಸ್ತಿತ್ವದಲ್ಲಿರುವ ವಿಶ್ವವನ್ನು ಅರಿಯಲು ನಡೆಸಿದ ಪ್ರಯತ್ನ ಮತ್ತು ಅಧ್ಯಯನಗಳ ಮೂಲಕವಾಗಿ ಆ ಪ್ರಯತ್ನಮಾಡುವ ಜನರಿಂದ ರೂಪುಗೊಂಡ ಪರಿಕಲ್ಪನೆಗಳು ಮತ್ತು ಜ್ಞಾನ ಕಾಯವನ್ನೇ ನಾವು ವಿಜ್ಞಾನವೆಂದು ಕರೆಯುವುದು. ಇಂತಹ ನಿರಂತರ ಶ್ರಮ ಮತ್ತು ಆಲೋಚನೆಗಳ ಸಂಕಲಿತ ಉತ್ಪನ್ನವಾಗಿ ವಿಜ್ಞಾನ ವಿಕಾಸ ಗೊಳ್ಳುತ್ತದೆ. ವಿಜ್ಞಾನಿಗಳೇ ಪ್ರಯೋಗಗಳನ್ನು ವಿನ್ಯಾಸಗೊಳಿಸುತ್ತಾರೆ, ಪ್ರಯೋಗಗಳನ್ನು ನಡೆಸುತ್ತಾರೆ, ದತ್ತಾಂಶಗಳನ್ನು, ಪರಿಣಾಮ – ಫಲಿತಾಂಶಗಳನ್ನು ದಾಖಲಿಸುತ್ತಾರೆ. ಅವುಗಳನ್ನು ವಿಶ್ಲೇಷಿಸಿ ಚರ್ಚಿಸಿ ಪ್ರಯೋಗಗಳು ಮತ್ತವುಗಳ ಫಲಿತಾಂಶಗಳನ್ನು ವ್ಯಾಖ್ಯಾನಿಸುತ್ತಾರೆ. ವೈಜ್ಞಾನಿಕ ಮಾಹಿತಿಯ ಸೃಷ್ಟಿಯಲ್ಲಿ ಈ ಎಲ್ಲ ಮಾನವ ಶ್ರಮ ಅಡಕವಾಗಿದ್ದರೂ ಅದು ಮತ್ತೆ-ಮತ್ತೆ ತನ್ನನ್ನು ತಾನು ಅತ್ಯಂತ ಕಟುವಾದ ವಿಮರ್ಶೆಗೆ ಒಳಪಡಿಸಿಕೊಂಡು ಪುಟವಿಟ್ಟ ಸತ್ಯದ ಬಂಗಾರವಾಗಬೇಕು. ಆ ಪ್ರಯೋಗಗಳು, ಫಲಿತಗಳು, ದತ್ತಾಂಶಗಳು, ನಿರಂತರ ಬದಲಾಗುತ್ತಾ ಸಾಗಿರುವ ಬದಲಾವಣೆಗಳಿಗೆ ತನ್ನನ್ನು ನಿರಂತರವಾಗಿ ಉನ್ನತೀಕರಿಸಿಕೊಳ್ಳುತ್ತಾ ಸಾಗಿ ತನ್ನ ಪ್ರಸ್ತುತತೆ ಮತ್ತು ಪ್ರಯೋಜನಗಳನ್ನು ಸಾಬೀತು ಮಾಡುತ್ತಾ ಸಾಗಬೇಕು. ಪ್ರಶ್ನಿಸುವ, ಚರ್ಚಿಸುವ ಮೂಲಕ ಉನ್ನತ ಪರಿಕಲ್ಪನೆಗಳನ್ನು ರೂಪಿಸುತ್ತಾ ಸಾಗುವುದರಿಂದ ನಮ್ಮ ಅರಿವಿನ ವಿಕಾಸವಾಗುತ್ತದೆ. ಈ ಉನ್ನತ ಪರಿಕಲ್ಪನೆಗಳು ಮತ್ತು ಸಿದ್ಧಾಂತಗಳನ್ನು ನಮ್ಮ ಸುತ್ತಲಿನ ನಿಸರ್ಗದ ಬದಲಾವಣೆಗಳನ್ನ, ನಿಗೂಢಗಳನ್ನ ಅರಿಯಲು ಮತ್ತೆ ಮತ್ತೆ ಬಳಸುತ್ತಾ ಸಾಗಿ ಅರಿವಿನ ನಿರಂತರ ಪಥಿಕರಾಗಿ ಸಾಗಬೇಕಾಗಿದೆ. ಅನೇಕ ನಕಾರಾತ್ಮಕ ಬೆಳವಣಿಗೆಗಳು ವಿಜೃಂಭಿಸುತ್ತಿದ್ದರೂ ಇಂದು ಅಧಿಕಾರವನ್ನು ಪ್ರಶ್ನಿಸುವ ಮನೋಭಾವ ಅತ್ಯಂತ ನಿಚ್ಚಳವಾಗಿ ಹೆಚ್ಚುತ್ತಾ ಸಾಗಿದೆ. ಇಂದು ಅಧಿಕಾರ ಮತ್ತು ಸಂಸ್ಥೆಗಳನ್ನು ಸರ್ಕಾರಿ ಬೆಂಬಲಿತವೆಂದಾಗಲಿ ಅಥವಾ ವಿಚಿತ್ರ ಹೆಸರನ್ನು ಹೊಂದಿವೆಯೆಂದಾಗಲಿ ಜನ ನಂಬುತ್ತಿಲ್ಲ. ಅವುಗಳನ್ನು ಪ್ರಶ್ನಿಸುವ ಮೂಲಕ ವಿಜ್ಞಾನದ ಮತ್ತು ಆ ಮೂಲಕ ಅರಿವಿನ ಪ್ರಜಾತಾಂತ್ರೀಕರಣವಾಗುತ್ತಿದೆ. ಆಧುನಿಕ ವಿಜ್ಞಾನ-ತಂತ್ರಜ್ಞಾನ, ಪ್ರಜಾತಾಂತ್ರೀಕರಣ ಯಾವ ರೀತಿ ಕೆಲವು ಪ್ರಚಲಿತ ವೈಜ್ಞಾನಿಕ ವಿವಾದಗಳಿಂದ ನಡೆಯುತ್ತಿದೆಯೆಂಬುದನ್ನು ಅನೇಕ ಉದಾಹರಣೆಗಳಿಂದ ಚರ್ಚಿಸಬಹುದಾಗಿದೆ.

**ಜೈವಿಕ ತಂತ್ರಜ್ಞಾನದ ವಿವಾದಗಳು**

ದೇಶಾದ್ಯಂತ ಬಿಟಿ ಬೆಳೆಗಳ ವಿರುದ್ಧವಾಗಿ ನಡೆದ ಪ್ರತಿಭಟನೆ ಪ್ರತಿರೋಧಗಳನ್ನು ಗಮನಿಸಿದ ಅರಣ್ಯ ಮತ್ತು ಪರಿಸರ ಸಚಿವರಾದ ಜೈರಾಮ್ ರಮೇಶ್ ಮತ್ತು ಯೋಜನಾ ಆಯೋಗದ ಸದಸ್ಯರಾದ ಕಸ್ತೂರಿರಂಗನ್ ಬಿಟಿ ಬೆಳೆಗಳ ಸುರಕ್ಷತೆ ಮತ್ತು ಜೀವಸಾಮರ್ಥ್ಯದ ಬಗ್ಗೆ ವೈಜ್ಞಾನಿಕ ಅಂದಾಜು ಮಾಡುವ ಕಾರ್ಯವನ್ನು ದೇಶದ ಅತ್ಯಂತ ಪ್ರತಿಷ್ಠಿತ ವಿಜ್ಞಾನ ಅಕಾಡೆಮಿಗಳ ಪ್ರಾತಿನಿಧ್ಯವಿರುವ ಎಂ. ವಿಜಯನ್ ಸಂಚಾಲಕತ್ವದ ಸಮನ್ವಯ ಸಮಿತಿಗೆ ವಹಿಸಿದರು. ಈ ಸಮಿತಿ ಸೆಪ್ಟೆಂಬರ್ ೨೦೧೦ರಲ್ಲಿ ವರದಿಯೊಂದನ್ನು ನೀಡಿ ಬಿಟಿ ಬೆಳೆಗಳನ್ನು ವಾಣಿಜ್ಯಕ ಉದ್ದೇಶಗಳಿಗೆ ಬಿಡುಗಡೆ ಗೊಳಿಸಬಹುದೆಂಬ ವರದಿಯನ್ನು ನೀಡಿತು. ಈ ವರದಿ ಪ್ರಕಟಗೊಳ್ಳುತ್ತಿದ್ದಂತೆ ಹೊಸ ವಿವಾದದ ಅಲೆ ಸೃಷ್ಟಿಯಾಯಿತು. ಈ ವರದಿ ಯಾವುದೋ ಒಬ್ಬ ಬೆಳೆ ಅಭಿವೃದ್ಧಿಕಾರನ ಪ್ರಬಂಧವನ್ನೇ ಕೃತಿಚೌರ್ಯ ಮಾಡಿ ಅಳವಡಿಸಿಕೊಂಡು, ಸಮರ್ಥನಾಧಾರಗಳಿಲ್ಲದ, ಯಾವುದೇ ಗ್ರಂಥ, ಉಲ್ಲೇಖಗಳೂ ಇಲ್ಲದ, ಗಲೀಜಾದ, ಕಳಂಕಿತ ವರದಿಯೆಂದು ಕುಖ್ಯಾತಿ ಪಡೆಯಿತು. ಈ ಎಲ್ಲ ಟೀಕೆಗಳ ಫಲವಾಗಿ ೨೫ ಪುಟಗಳ ವರದಿಯನ್ನು ಒಬ್ಬ ರಾಜಕಾರಣಿಯಾದ ಜೈರಾಮ್ ರಮೇಶ್, ''ಈ ವರದಿ ಕಠೋರವಾದ ವೈಜ್ಞಾನಿಕ ವಿಶ್ಲೇಷಣೆಯಿಂದ ರೂಪಿತವಾದದ್ದಲ್ಲ'', ಎಂದು ತಿರಸ್ಕರಿಸಿದರು. ಇದು ವಿಜ್ಞಾನ ಲೋಕದ ಅತ್ಯಂತ ನಾಚಿಕೆಗೇಡಿನ ಸಂಗತಿ.

ಜೂನ್‌ನಲ್ಲಿ ಕಾಟಾಚಾರಕ್ಕೆ ಒಂದು ಸಭೆ ನಡೆಸಿ ಬೆಳೆ ಅಭಿವೃದ್ಧಿಕಾರರು ಮತ್ತು ನಿಯಂತ್ರಕರ ಅಭಿಪ್ರಾಯಗಳನ್ನೇ ಪ್ರಧಾನವಾಗಿ ಪರಿಗಣಿಸಿ ಅದಕ್ಕೆ ವಿರುದ್ಧವಾದ ಅಭಿಪ್ರಾಯಗಳನ್ನು ನಿರ್ಲಕ್ಷಿಸಿ ವರದಿಯನ್ನು ಉನ್ನತೀಕರಿಸಿ ಮತ್ತದೇ ತೀರ್ಮಾನಗಳನ್ನು ಪುನರುಚ್ಚರಿಸುವ ಪರಿಷ್ಕೃತ ವರದಿಯೊಂದನ್ನು ಸಮಿತಿ ನೀಡಿತು.

ಎಮ್.ಎಸ್.ಎಸ್.ಆರ್.ಎಫ್. ಸಂಸ್ಥೆಯ ಪಿ. ಸಿ. ಕೇಶವನ್ ಪ್ರಕಾರ ಈ ವರದಿ ಅತ್ಯಂತ ಬಾಲಿಶವಾದದ್ದು ಮತ್ತು ಕ್ಷುಲ್ಲಕವಾದದ್ದು. ಇದೊಂದು ಸ್ಥಾಪಿತ ಹಿತಾಸಕ್ತಿ ಮತ್ತು ಬೀಜಕಂಪನಿಗಳ ಪರವಾದ ವರದಿ. ಇದು ಬಿಟಿ ಬದನೆ ವಿರುದ್ಧವಾಗಿರುವ ಪರಿಸರಾತ್ಮಕ ಮತ್ತು ಆರೋಗ್ಯದ ವೈಜ್ಞಾನಿಕ ಪರಿಗಣನೆಗಳನ್ನು ಸಾರಾಸಗಟಾಗಿ ತಿರಸ್ಕರಿಸಿದೆ. ಸಿ.ಸಿ.ಎಮ್.ಬಿ. ಸಂಸ್ಥೆಯ ಮಾಜಿ ನಿರ್ದೇಶಕರು ಮತ್ತು ಜಿ.ಇ.ಎ.ಸಿ. ಸಂಸ್ಥೆಯ ಗೌರವಾನ್ವಿತ ಸದಸ್ಯರಾದ ಪಿ. ಎಂ. ಭಾರ್ಗವ ಈ ವರದಿಯನ್ನು ಅತ್ಯಂತ ಕಟುವಾದ ಶಬ್ದಗಳಲ್ಲಿ ನಿಂದಿಸಿದ್ದಾರೆ :

''ಈ ಪರಿಷ್ಕೃತ ವರದಿ ಮೊದಲಿನ ವರದಿಗಿಂತಲೂ ಅಪಹಾಸ್ಯಕರವಾದದ್ದು, ವೈಜ್ಞಾನಿಕವಾಗಿ ಮತ್ತು ಸಾಮಾಜಿಕವಾಗಿ ನಿಸ್ಸಾರವಾದದ್ದು ಮತ್ತು ಅಸಮಂಜಸವಾದದ್ದು. ರಾಸಾಯನಿಕವಾಗಿ ಎಲ್ಲ ಡಿಎನ್‌ಎಗಳು ಒಂದೇ ಎಂಬುದು ಅಸಂಬದ್ಧ ಮತ್ತು ಹಾಸ್ಯಾಸ್ಪದ ಹೇಳಿಕೆ. ಇಡೀ ಜಗತ್ತಿನಲ್ಲಿ ಜಿ.ಎಂ. ಪರವಾಗಿರುವ ಯಾವುದೇ ವಿಜ್ಞಾನಿಗಳ ಗುಂಪು ಕೂಡ ಇಂತಹ ನಿರೂಪಣೆಯನ್ನು ಸಮರ್ಥಿಸಿಕೊಳ್ಳಲಾರರು'', ಎಂದು ವರದಿಯನ್ನು ಜರಿದಿದ್ದಾರೆ.

ಈ ದೇಶದ ಅತ್ಯುನ್ನತ ವಿಜ್ಞಾನ ಸಂಸ್ಥೆಗಳ ಕೆನೆಯೆಂದೇ ಪರಿಗಣಿಸಲ್ಪಟ್ಟಿರುವ ವಿಜ್ಞಾನಿ ಸಮೂಹವೇ ಇಷ್ಟೊಂದು ನಿರ್ಲಜ್ಜೆಯಿಂದ ಏಕಪಕ್ಷೀಯವಾಗಿ ತೀವ್ರ ಟೀಕೆ ಮತ್ತು ಪ್ರತಿರೋಧಗಳ ನಡುವೆಯೂ ಹೀಗೆ ವರ್ತಿಸುತ್ತದೆ ಎಂದರೆ ಇಂತಹವರಿಂದ ಯಾವ ಶೋಧ ಪ್ರತಿಶೋಧನೆಯ ಅರಿವಿನ ವಿಸ್ತಾರವನ್ನು ನಿರೀಕ್ಷಿಸಬಹುದು? ರಾಜ್ಯದ ನಿಲುವನ್ನು, ಬೀಜ ಕಂಪನಿಗಳ ಹಿತಾಸಕ್ತಿಗಳನ್ನು ಬೆಂಬಲಿಸುವ ಭರದಲ್ಲಿ ವಿರೋಧಿ ವೈಜ್ಞಾನಿಕ ಅಭಿಪ್ರಾಯಗಳಿಗೆ ಸಂಪೂರ್ಣ ಕುರುಡಾಗಿ ತಮ್ಮ ಈ ಪಕ್ಷಪಾತದ ತೀರ್ಮಾನಗಳಿಂದ ವಿಜ್ಞಾನದ ಹೆಸರಿಗೆ ಕಳಂಕ ತರುವ ಬೆಳವಣಿಗೆಯಾಗಿದೆ. ಮಾನವ ಕಲ್ಯಾಣದ ಪರವಾಗಿ ನಿಲ್ಲಬೇಕಾದ ವಿಜ್ಞಾನಿಗಳು ಬಹುರಾಷ್ಟ್ರೀಯ ಬೀಜ ಕಂಪನಿಗಳ ಪರವಾಗಿ ನಿಂತು ವಿಜ್ಞಾನ ವಿರೋಧೀ ನಿಲುವನ್ನು ತಳೆದಿರುವುದು ಅತ್ಯಂತ ವಿಷಾದನೀಯ.

**ಹವಾಮಾನ ವೈಪರೀತ್ಯ ವಿಜ್ಞಾನದ ವಿವಾದಗಳು**

ಹವಾಮಾನ ವೈಪರೀತ್ಯ ವಿಜ್ಞಾನ ಮತ್ತೊಂದು ಅತ್ಯಂತ ವಿವಾದಾತ್ಮಕ ಕ್ಷೇತ್ರ. ವಿಶ್ವಸಂಸ್ಥೆಯ ಐಪಿಸಿಸಿ-೨೦೦೭ರ ತನ್ನ ೪ನೇ ವರದಿಯಲ್ಲಿ ೨೦೩೫ರ ವೇಳೆಗೆ ಹಿಮಾಲಯದ ಹಿಮಗಡ್ಡೆಗಳೆಲ್ಲಾ ಕರಗಿ ಕಣ್ಮರೆಯಾಗುತ್ತವೆ ಎಂದು ಹೇಳಿತ್ತು. ಈ ನಿರೂಪಣೆ ವೈಜ್ಞಾನಿಕವಾಗಿ ಸಮರ್ಥನೀಯವಲ್ಲದ್ದೆಂದು ಸವಾಲು ಮಾಡಿದಾಗ

ಐ.ಪಿ.ಸಿ.ಸಿ. ವಿಜ್ಞಾನಿಗಳು ಅದನ್ನು 'ವೂಡೂ ಸೈನ್ಸ್' ಎಂದು ಅಪಹಾಸ್ಯ ಮಾಡಿದ್ದರು. ಆದರೆ ವೈಜ್ಞಾನಿಕ ಅಧ್ಯಯನಗಳ ದತ್ತಾಂಶಗಳನ್ನು ಐ.ಪಿ.ಸಿ.ಸಿ.ಯ ತೀರ್ಮಾನಗಳಿಗೆ ಮುಖಾಮುಖಿಯಾಗಿಸಿದಾಗ ತಮ್ಮ ಹಿಮಾಲಯದ ಹಿಮ ಕರಗಿ ಕಣ್ಮರೆಯಾಗಬಹುದಾದ ಅಪಾಯವನ್ನು ಮಾನ್ಯ ಮಾಡುತ್ತಲೆ, ೨೦೩೫ರ ವರ್ಷ ನಿಗದಿಪಡಿಸಲಾಗಿರುವುದು ಅಸಮರ್ಥನೀಯವಾದುದೆಂದು ಒಪ್ಪಿಕೊಳ್ಳಲಾಯಿತು ಮತ್ತು ಅದರ ಬಗ್ಗೆ ಮತ್ತಷ್ಟು ವ್ಯಾಪಕ ಅಧ್ಯಯನದ ಅಗತ್ಯವನ್ನು ಮಾನ್ಯಮಾಡುವ ಮೂಲಕ ವಿಜ್ಞಾನದ ಅರಿವಿನ ವಿಸ್ತಾರವನ್ನು ಮಾನ್ಯ ಮಾಡಲಾಯಿತು.




ಕೋಪನ್‌ಹೇಗನ್‌ನಲ್ಲಿ ಹವಾಮಾನ ವೈಪರೀತ್ಯಗಳ ೧೫ನೇ ಭೂಶೃಂಗ ನಡೆಯುವ ಸ್ವಲ್ಪ ಸಮಯದ ಮುಂಚೆ ಈಸ್ಟ್ ಎಂಗ್ಲಿಯಾ ವಿಶ್ವವಿದ್ಯಾಲಯದ ಹವಾಮಾನ ವಿಜ್ಞಾನಿಗಳ ಈಮೇಲ್‌ಗಳಿಂದ ತಮಗೆ ಬೇಕಾದ ಭಾಗಗಳನ್ನು, ವಾಕ್ಯಗಳನ್ನು ಮತ್ತು ಪದಗುಚ್ಛಗಳನ್ನು ಆಯ್ದು ಕತ್ತರಿಸಿ ಅವುಗಳನ್ನೇ ಉಲ್ಲೇಖಿಸಿ ಸಾಕ್ಷ್ಯಗಳನ್ನಾಗಿ ಬಳಸಿಕೊಂಡ ಈ ಹವಾಮಾನ ಸಂಶಯ ಪಿಶಾಚಿಗಳೇ ಐ.ಪಿ.ಸಿ.ಸಿ.ಯ ತೀರ್ಮಾನಗಳು ಪ್ರಶ್ನಾರ್ಹವೆಂದು ಗೊಂದಲ ಸೃಷ್ಟಿಸಲು ಪ್ರಯತ್ನಿಸಿದ್ದೇ ಅಲ್ಲದೆ ಕೋಪನ್‌ಹೇಗನ್ ಚರ್ಚೆಯ ದಿಕ್ಕನ್ನು ಬದಲಿಸುವ ಪ್ರಯತ್ನ ಮಾಡಲಾಯಿತು.

೧೯೮೯ರಲ್ಲಿ 'ಗ್ಲೋಬಲ್ ಕ್ಲೈಮೇಟ್ ಕೊಯಿಲೇಷನ್' ಎಂಬ ಸಂಘ ಬೃಹತ್ ತೈಲ ಕಲ್ಲಿದ್ದಲು ಮತ್ತು ಮೋಟಾರು ಉದ್ದಿಮೆಗಾರರ ಮುಖವಾಣಿಯಾಗಿ ಅಸ್ತಿತ್ವಕ್ಕೆ ಬಂತು. ಜನರಲ್ ಮೋಟಾರ್ಸ್, ಫೋರ್ಡ್, ಬಿ. ಪಿ. ಷೆಲ್, ಎಕ್ಸಾನ್ ಇತ್ಯಾದಿ ಕಂಪೆನಿಗಳು ಈ ಸಂಘದ ಮೂಲಕ ತಮ್ಮ ವಿತಂಡವಾದಗಳನ್ನು ಪ್ರತಿಪಾದಿಸುತ್ತಾ ಬಂದವು. ಅಂತರರಾಷ್ಟ್ರೀಯ ಗೋಷ್ಠಿಗಳಲ್ಲಿ ವಿಶ್ವಸಂಸ್ಥೆಯ ಚರ್ಚೆಗಳಲ್ಲಿ ಇವರಿಗೆ ಪ್ರಾಮುಖ್ಯತೆ ದೊರೆಯುವಂತೆ ಲಾಬಿ ನಡೆಸಿ ಈ ಗುಂಪು ತನ್ನನ್ನು ತಾನು ಬಹುರಾಷ್ಟ್ರೀಯ ಬಂಡವಾಳಗಾರರ ಬೆಂಬಲದಿಂದ ಪ್ರತಿಷ್ಠಾಪಿಸಿಕೊಂಡಿತು. ಹವಾಮಾನ ವೈಪರೀತ್ಯಗಳು ಆಗಾಗ್ಗೆ ನಡೆಯುತ್ತಲೇ ಇರುತ್ತವೆ. ಮನುಕುಲ ವಿಸರ್ಜನೆಗಳಿಂದ ಈ ಸಮಸ್ಯೆಯೇನೂ ಉಂಟಾಗಿಲ್ಲ ಎಂಬ ಪ್ರತಿಪಾದನೆಗಳನ್ನು ಇವರು ಮಾಡುತ್ತಿದ್ದಾರೆ. ಹವಾಮಾನ ವೈಪರೀತ್ಯಗಳ ವಿಜ್ಞಾನಿಗಳು ನೀಡುವ ಸಾಕ್ಷ್ಯಾಧಾರಗಳಿಗೆ ಪ್ರತಿಯಾಗಿ ತಮ್ಮ ಆಧಾರಗಳನ್ನು ಮಂಡಿಸಿ ಪ್ರತಿಪಾದನೆ ಮಾಡುವುದನ್ನು ಕೈಬಿಟ್ಟು ಗೊಂದಲ ಸೃಷ್ಟಿಸಿ ಚರ್ಚೆಯ ಮತ್ತು ತೆಗೆದುಕೊಳ್ಳಬೇಕಾದ ತೀರ್ಮಾನಗಳ ದಿಕ್ಕು ತಪ್ಪಿಸಲು ಪ್ರಯತ್ನಿಸಲಾಗುತ್ತಿದೆ.

ತೀರಾ ಇತ್ತೀಚೆಗೆ ಲೀಡ್ಸ್ ವಿಶ್ವವಿದ್ಯಾಲಯದ ಪ್ರೊ|| ಆ್ಯಂಡ್ರೂ ಷೆಫರ್ಡ್ ಬಿಸಿಯಾಗಲಿರುವ ಬೇಸಗೆಗಳಿಂದ ಗ್ರೀನ್‌ಲ್ಯಾಂಡ್‌ನ ಹಿಮದ ಹಾಳೆಗಳು ವೇಗವಾಗಿ ಜಾರಿ ಸಮುದ್ರ ಸೇರಿ ಅದರ ಮಟ್ಟವನ್ನು ಹೆಚ್ಚಿಸಲಿವೆ ಎಂಬ ಆತಂಕ ನಿರಾಧಾರವಾದದ್ದೆಂದು ತಮ್ಮ ಅಧ್ಯಯನದಿಂದ ಸಾಬೀತುಪಡಿಸಿದ್ದಾರೆ.

ಕ್ಯಾಲಿಫೋರ್ನಿಯಾ ಮತ್ತು ಪಾಟ್ಸ್‌ಡ್ಯಾಂ ವಿಶ್ವವಿದ್ಯಾಲಯಗಳ ವಿಜ್ಞಾನಿಗಳು ಹಿಮಾಲಯದ ಕಾರಾಕೋರಂ ವಲಯದ ೨೮೬ ಹಿಮಪರ್ವತಗಳನ್ನು ಅಧ್ಯಯನ ಮಾಡಿ ವರದಿಯನ್ನು ನೇಚರ್ ಜಿಯೋಸೈನ್ಸ್ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಇದರ ಪ್ರಕಾರ ಹಿಮಾಲಯ ಹಿಮಪರ್ವಗಳು ಕರಗಿ ಹಿಂದಕ್ಕೆ ಸರಿಯದೇ ವೃದ್ಧಿಗೊಂಡು ಮುಂಚಾಚುವುದೆಂದು ಹೇಳಲಾಗಿದೆ.

ಇದೇ ಜನವರಿಯಲ್ಲಿ Current Science ಪತ್ರಿಕೆಯಲ್ಲಿ ಪ್ರೊ|| ಯು. ಆರ್. ರಾವ್ ಹವಾಮಾನ ವೈಪರೀತ್ಯಗಳ ಚರ್ಚೆಯಲ್ಲಿ ಅತ್ಯಂತ ಪ್ರಮುಖವಾದ ಅಂಶವೊಂದನ್ನು ಕಡೆಗಣಿಸಿರುವುದರ ಬಗ್ಗೆ ಗಮನ ಸೆಳೆದಿದ್ದಾರೆ. ಪ್ರಾಥಮಿಕ ವಿಶ್ವಕಿರಣಗಳ (Cosmic rays) ತೀವ್ರತೆಯಲ್ಲಿನ ಇಳಿಕೆ ಮೋಡದ ಕವಚನ್ನು ಕಡಿಮೆ ಮಾಡುತ್ತದೆ. ಹೀಗೆ ತೆಳುವಾದ ಕೆಳಮೋಡದ ಕವಚದಿಂದ ಬಾಹ್ಯಾಕಾಶಕ್ಕೆ ಪ್ರತಿಫಲಿಸಲ್ಪಡುವ ಶ್ವೇತತೆ

## ಬದುಕಬೇಕಯ್ಯ



ಬದುಕ
ದಾರಿಯ ತುಂಬ
ಕಾಣದಾ ತಿರುವುಗಳು

ಬೀಳಿಸುವುದಕೇ ಎದ್ದು
ನಿಂತ ಉಬ್ಬುಗಳು
ಕಾಲೆಳೆದೇ ಮಾತಾಡಿಸುವ
ತಗ್ಗುಗಳು

ತಿರುವುಗಳಲ್ಲೇ ತಿರುಗಿ
ತಿರುಗಿ ಹೆದ್ದಾರಿಯ
ಮರೆತುಬಿಟ್ಟಿದೆ
ಹೌದು ! ಹೆದ್ದಾರಿಯು
ಮರೆತುಬಿಟ್ಟಿದೆ

ದಡ ಬಿಡುವ
ಮುನ್ನ ದಿಕ್ಕು ತೋಚಲೇ
ಯಿಲ್ಲ
ಹಾಳು ದಿಕ್ಸೂಚಿಯೂಯಿಲ್ಲ
ದಿಕ್ಕೇ 'ಕೈ ಬೀಸಿ ಕರೆದೀತು';
ಹುಚ್ಚು ಹುಮ್ಮಸ್ಸು
ಬದುಕಿನಗ್ಗಿ ಕುಂಡಕ್ಕೆ ಕನಸುಗಳ
ಹವಿಸ್ಸು

ಬಂದದ್ದು ಬಂದ
ಹಾಗೇ ಹೋಗಿಬಿಟ್ಟಿದೆ
ಬಾರದ್ದು ಬಾರದೇ ಹೋಗಿ
ಬಿಟ್ಟಿದೆ.
ಅಳಿದುಳಿದವುಗಳದೇ ಕಾರುಬಾರು
ಅವಶೇಷಗಳ ಬೀಡುಬಿಟ್ಟಿದೆ

ದಾರಿದ್ರ್ಯ ನಾಚಿ
ನಿಂತು ಬಿಟ್ಟಿದೆ
ವಿಳಾಸ ಸರಿಯಿದ್ದರೂ
ಅದೃಷ್ಟ ಯಾರದೋ ಕದ
ತಟ್ಟುತ್ತಿದೆ.

ತಂದು ಬಿಟ್ಟವನ
ಅಡ್ರೆಸ್ಸೇಯಿಲ್ಲ
ಸಿಕ್ಕರೆ ನಿಲ್ಲಿಸಿ ಕೇಳಿಯೇನು
'ಬಿಟ್ಟುಹೋದರೆ ಹೇಗಯ್ಯ ?
ನಿಂತಾಗೆಲ್ಲ ನೂಕು ಬದುಕ;
ಬದುಕಬೇಕಯ್ಯ.'

ಮೃತ್ಯುಂಜಯ ಎಂ. ಸಾಲಿಮಠ್
೨೮೯, ೩ನೇ 'ಎ' ಕ್ರಾಸ್, ೨ನೇ ಬ್ಲಾಕ್, ೩ನೇ ಹಂತ,
ಬಸವೇಶ್ವರನಗರ, ಬೆಂಗಳೂರು - ೫೬೦೦೭೯




ವಿಕಿರಣಗಳು (albedo radiation) ಭೂಮೇಲ್ಮೈನ ಉಷ್ಣತೆಯನ್ನು ಹೆಚ್ಚಿಸುತ್ತದೆ. ಸೌರ ಕ್ರಿಯಾಶೀಲತೆ ನಿರಂತರವಾಗಿ ಕಳೆದ ೧೫೦ ವರ್ಷಗಳಿಂದ ಹೆಚ್ಚಾಗಿರುವುದರಿಂದ ಪ್ರಾಥಮಿಕ ವಿಶ್ವವಿಕಿರಣಗಳ ತೀವ್ರತೆ ಶೇಕಡ ೯ರಷ್ಟು ಇಳಿಕೆಯಾಗಿದೆ. ಆದ್ದರಿಂದ ಭವಿಷ್ಯದಲ್ಲಿ ಜಾಗತಿಕ ಬಿಸಿಯೇರುವಿಕೆಯನ್ನು ಮುನ್ಸೂಚಿಸುವಾಗ ಗೆಲೆಕ್ಸಿಯ ವಿಶ್ವವಿಕಿರಣಗಳ ತೀವ್ರತೆಯಲ್ಲುಂಟಾಗುವ ದೀರ್ಘಕಾಲೀನ ಬದಲಾವಣೆಗಳನ್ನು ಪ್ರಮುಖವಾಗಿ ಪರಿಗಣಿಸಬೇಕಾಗಿದೆ. ಹೀಗೆ ಪ್ರಾಥಮಿಕ ವಿಶ್ವವಿಕಿರಣಗಳ ತೀವ್ರತೆ ಕಡಿಮೆಯಾಗುವುದರಿಂದ ಇಂಗಾಲದ ಡೈ ಆಕ್ಸೈಡ್‌ನಿಂದಾಗುವ ಶೇಕಡ ೬೦ರಷ್ಟು ಜಾಗತಿಕ ಉಷ್ಣತೆಯ ಹೆಚ್ಚಳ ಈ ಕ್ರಿಯೆಯಿಂದಾಗಲಿದೆ ಎಂದು ಅಂದಾಜಿಸಲಾಗಿದೆ. ಇದು ಜಾಗತಿಕ ಬಿಸಿಯೇರಿಕೆಯ ಚರ್ಚೆಯನ್ನು ಮಾನವಜನ್ಯ ವಿಸರ್ಜನೆಗಳ ಪರಿಣಾಮಗಳಿಂದುಂಟಾದುದೆಂಬ ನೆಲೆಯಿಂದ ನೈಸರ್ಗಿಕ ಕಾರಣಗಳಿಂದುಂಟಾಗುವುದರ ಕಡೆಗೆ ವಾಲಿಸುತ್ತದೆ.

ಹವಾಮಾನ ವೈಪರೀತ್ಯ ಒಂದು ಸಂಕೀರ್ಣವಾದ ತೀರ ಇತ್ತೀಚೆಗಷ್ಟೆ ಹೊರಹೊಮ್ಮುತ್ತಿರುವ ವಿಜ್ಞಾನವಾಗಿದೆ. ಅತ್ಯಂತ ವೈವಿಧ್ಯಮಯವಾದ ಕ್ಷೇತ್ರಗಳಲ್ಲಿ ಸೂಕ್ಷ್ಮ ವೀಕ್ಷಣೆ ಮತ್ತು ಅಧ್ಯಯನಗಳನ್ನು ವಿಶ್ವವ್ಯಾಪಕವಾಗಿ ನಡೆಸಿ ಹೋಲಿಸಿ, ತಾಳೆ ನೋಡಿ ಅತ್ಯಂತ ಎಚ್ಚರಿಕೆಯ ತೀರ್ಮಾನಗಳಿಗೆ ಬರಬೇಕಾಗುತ್ತದೆ. ಈ ವಿದ್ಯಮಾನಗಳಿಗೆ ಜಾಗತಿಕವಾದ ಬಾಹ್ಯಾಕಾಶೀಯ ಬೃಹತ್ ವಿಸ್ತಾರವಿದ್ದರೂ ಅವುಗಳ ಪರಿಣಾಮಗಳು ಅತ್ಯಂತ ತೀವ್ರವಾಗಿ ಸ್ಥಳೀಯವಾಗಿ ಗೋಚರವಾಗುತ್ತವೆ. ಇದಲ್ಲದೆ ಈ ಜಗತ್ತಿನ ಪ್ರತಿ ಜೀವಿಪ್ರಭೇದವು ಈ ವೈಪರೀತ್ಯಗಳಿಗೆ ಅತ್ಯಂತ ವಿಶಿಷ್ಟವಾಗಿ ಪ್ರತಿಕ್ರಿಯಿಸುತ್ತದೆ, ಸ್ಪಂದಿಸುತ್ತದೆ.

ಇದು ಕಾಲಾಂತರದ ವಿದ್ಯಮಾನಗಳ ವಿಶ್ಲೇಷಣೆಯನ್ನು ಒಳಗೊಳ್ಳುತ್ತದೆ. ಜಾಗತಿಕ ಬಿಸಿಯೇರಿಕೆಯನ್ನುಂಟು ಮಾಡುವುದರಲ್ಲಿ ಯಾವುದೇ ಪಾತ್ರ ವಹಿಸದವರು ಇಲ್ಲಿ ಅಪಾರ ಕಷ್ಟ-ನಷ್ಟಗಳಿಗೆ ಪ್ರಾಣಹಾನಿ ಮತ್ತು ಆಸ್ತಿಪಾಸ್ತಿ ಹಾನಿಗೀಡಾಗುತ್ತಾರೆ. ಆದರೆ ಈ ವೈಪರೀತ್ಯಗಳನ್ನುಂಟುಮಾಡುವವರು ತಮ್ಮ ಜೀವನಶೈಲಿಯನ್ನು ಅಲ್ಪವೂ ಬದಲಾಯಿಸಿಕೊಳ್ಳದೆ ವಿಶ್ವದ ಸಕಲ ಚರಾಚರಗಳನ್ನು ಅಪಾಯದಂಚಿಗೆ ತಂದು ನಿಲ್ಲಿಸುತ್ತಾರೆ. ಇದು ಸಾಲದೆಂಬಂತೆ ತಾವುಂಟುಮಾಡುವ ಮಾಲಿನ್ಯಗಳ ಹೊಣೆ ಹೊರುವುದನ್ನು ತಪ್ಪಿಸಿಕೊಳ್ಳಲು ವಿತಂಡವಾದಗಳನ್ನು, ವಿಕೃತ ಮಂಡನೆಗಳನ್ನು ಮಾಡಿ ಪರಿಹಾರಾತ್ಮಕ ಕ್ರಮಗಳ ದಿಕ್ಕೆಡಿಸುತ್ತಾರೆ. ಇಂತಹ ಪ್ರಕ್ರಿಯೆಗಳಲ್ಲಿ ಅತ್ಯಂತ ಪ್ರತಿಭಾನ್ವಿತ ವಿಜ್ಞಾನಿಗಳು ಅತ್ಯಂತ ನಿರ್ಣಾಯಕ ಪಾತ್ರ ವಹಿಸುತ್ತಾರೆ. ಅವರ ಒಂದು ಸಣ್ಣ ಪ್ರಮಾದ ಇಡೀ ಜಗತ್ತಿಗೆ, ಸಕಲ ಜೀವಸಂಕುಲಗಳಿಗೆ ಮಾರಕವಾಗಿಬಿಡಬಹುದಾಗಿದೆ. ಈ ಕ್ಷೇತ್ರದಲ್ಲಿ ಶೋಧ ಪ್ರತಿಶೋಧಗಳು ಅತ್ಯಂತ ತೀವ್ರಗೊಳ್ಳುತ್ತಾ ಸಾಗಿ ಸಂಘರ್ಷಾತ್ಮಕ ಹಂತ ತಲುಪಿರುವುದು ಅತ್ಯಂತ ಅಪಾಯಕಾರಿಯಾಗಿದೆ.

ರಾಷ್ಟ್ರೀಯ ಸುರಕ್ಷತೆಯ ಹೆಸರಿನಲ್ಲಿ ತ್ಯಾಗ ಬಲಿದಾನಗಳನ್ನು ಮಾಡಬೇಕೆಂದು ಆಧುನಿಕ ರಾಷ್ಟ್ರಗಳು ವಿಜ್ಞಾನ ತಂತ್ರಜ್ಞಾನಗಳನ್ನು ರಾಷ್ಟ್ರೀಯ ಸುರಕ್ಷತೆಯ ಹೆಸರಿನಲ್ಲಿ ಯುದ್ಧೋನ್ಮಾದಿ ಮಾರಕ ಶಸ್ತ್ರಾಸ್ತ್ರಗಳು, ಜೈವಿಕ ರಾಸಾಯನಿಕ ಶಸ್ತ್ರಾಸ್ತ್ರಗಳು ಮತ್ತು ಪರಮಾಣು ಅಸ್ತ್ರಗಳ ತಯಾರಿಕೆಗೆ ಅತ್ಯಂತ ವ್ಯಾಪಕವಾಗಿ ದುರ್ಬಳಕೆ ಮಾಡಿಕೊಂಡವು. ಅದರಲ್ಲೂ ವಿಶೇಷವಾಗಿ ಸಾಮ್ರಾಜ್ಯಶಾಹಿ ಅಮೆರಿಕಾ ಮತ್ತು ಯುರೋಪ್‌ನ ರಾಷ್ಟ್ರಗಳು ವಿನಾಶಕಾರಿ ಶಸ್ತ್ರಾಸ್ತ್ರಗಳನ್ನು ರೂಪಿಸಿ, ಸಂಗ್ರಹ ಮಾಡಿ, ವಿಶ್ವಶಾಂತಿಯನ್ನು ಕದಡಿ, ಇಡೀ ಮನುಕುಲಕ್ಕೆ ಅಪಾಯಕಾರಿ ಸಂಕೇತವಾಗಿ ವಿಜೃಂಭಿಸಿವೆ.

ಆದರೆ ಇಂದಿನ ಯುಗದಲ್ಲಿ ರಾಷ್ಟ್ರೀಯ ಸುರಕ್ಷತೆಯ ಕರೆ ಅಷ್ಟೇನೂ ಆಕರ್ಷಕವಾಗಿರದ ಪ್ರಯುಕ್ತ ಆಧುನಿಕ ಸರ್ಕಾರಗಳು ಹೊಸಹೊಸ ಕರೆಗಳನ್ನು ರೂಪಿಸುತ್ತಿವೆ. ಇಂದಿನ ನಾಗರಿಕ ಸರ್ಕಾರಗಳು ಅಭಿವೃದ್ಧಿಯ ಹೆಸರಿನಲ್ಲಿ ಜನರು ತ್ಯಾಗ ಮಾಡಬೇಕೆಂದು ಕರೆ ಕೊಡಲಾರಂಭಿಸಿವೆ. ಅಭಿವೃದ್ಧಿ ಎಂಬುದು ಗಿರಿಜನರು, ರೈತರು ಮತ್ತು ಸಾಮಾನ್ಯ ಜನರನ್ನು ಅವರ ನೆಲೆಗಳಿಂದ ಎತ್ತಂಗಡಿ ಮಾಡುವ ಹೊಸ ಹುನ್ನಾರವಾಗಿದೆ. ಆದರೆ ವಾಸ್ತವವಾಗಿ ಈ ಅಭಿವೃದ್ಧಿ ಎಂಬುದು ಬಂಡವಾಳಗಾರರ ಅದರಲ್ಲೂ ಬೃಹತ್ ಬಂಡವಾಳಗಾರರ, ಏಕಸ್ವಾಮ್ಯ ಬಂಡವಾಳಗಾರರ ಅಭಿವೃದ್ಧಿಯಾಗಿದೆ. ಅಭಿವೃದ್ಧಿ ಗ್ರಾಮ ಆರ್ಥಿಕತೆಯನ್ನು ಧೂಳಿಪಟ ಮಾಡಿ ವ್ಯಾಪಕ ನಗರೀಕರಣಕ್ಕೆ ದಾರಿಯಾಗಿದೆ. ಇಂತಹ ಅಭಿವೃದ್ಧಿಯ ಹರಿಕಾರರಾಗಿರುವ ಬಹುರಾಷ್ಟ್ರೀಯ ಕಂಪನಿಗಳು ಅಭಿವೃದ್ಧಿ ಮತ್ತು ವಿಜ್ಞಾನ ತಂತ್ರಜ್ಞಾನಗಳನ್ನು ತಮ್ಮ ವ್ಯಾಪಾರಿ ಉದ್ದಿಮೆ ಸಾಮ್ರಾಜ್ಯಗಳನ್ನು ವಿಸ್ತರಿಸಲು ವ್ಯಾಪಕವಾಗಿ ದುರ್ಬಳಕೆ ಮಾಡಿಕೊಳ್ಳುತ್ತಾ ಸಾಗಿವೆ. ಕಾರ್ಪೊರೇಟ್ ವಿಜ್ಞಾನ ನಿಜ ವಿಜ್ಞಾನವನ್ನು ವಿಕೃತಗೊಳಿಸುವ ಒಂದು ಆಧುನಿಕ ಪರಿಪಾಠವಾಗಿದೆ. ಅವು ತಮ್ಮ ಲಾಭದ ಪ್ರಮಾಣಗಳನ್ನು ಅಗಾಧವಾಗಿ ಹಿಗ್ಗಿಸಲು ವೈಜ್ಞಾನಿಕ ಸತ್ಯಗಳನ್ನು ತಿರುಚುವ, ವಿಕೃತಗೊಳಿಸುವ ಕಾರ್ಯವನ್ನು ಅತ್ಯಂತ ನಿರ್ಲಜ್ಜೆಯಿಂದ ಮಾಡುತ್ತಿವೆ. ಇದು ವಿಜ್ಞಾನ ಮತ್ತು ತಂತ್ರಜ್ಞಾನದ ವಿಕಾಸಕ್ಕೆ ಮತ್ತು ಅಭಿವೃದ್ಧಿಗೆ ದೊಡ್ಡ ಅಡಚಣೆಯಾಗಿದೆ. ವಿಜ್ಞಾನ ಮತ್ತು ತಂತ್ರಜ್ಞಾನಗಳ ಅಭಿವೃದ್ಧಿಗೆ ಅಪಾರ ಹೂಡಿಕೆಗಳನ್ನು ಮಾಡುತ್ತೇವೆಂದು ಹೇಳಿಕೊಳ್ಳುತ್ತಾ ಅದರ ಫಲಗಳನ್ನೆಲ್ಲಾ ತನ್ನ ಲಾಭಕ್ಕೆ ಬಳಸಿಕೊಳ್ಳುವ ಕಾರ್ಯತಂತ್ರವನ್ನು ರೂಪಿಸಿವೆ. ಬಹುರಾಷ್ಟ್ರೀಯ ಕಂಪನಿಗಳ ಈ ಹುನ್ನಾರಗಳಿಗೆ ಬಲಿಯಾಗಿರುವ ವಿಜ್ಞಾನಿ ಸಮೂಹಗಳು ವಿಜ್ಞಾನದ ವಿಕೃತಿಯನ್ನು ಸ್ವತಃ ತಾವೇ ಮಾಡುತ್ತಿದ್ದಾರೆ. ಕಾರ್ಪೊರೇಟ್ ಉದ್ದಿಮೆಗಳು ನೀಡುವ ಅಪಾರ ಹಣ, ಪ್ರೋತ್ಸಾಹ, ಪ್ರಶಸ್ತಿ, ಮತ್ತಿತರ, ಆಮಿಷಗಳಿಗೆ ಬಲಿಯಾದ ವಿಜ್ಞಾನಿಗಳು ಕಠೋರವಾದ ವೈಜ್ಞಾನಿಕ ವಸ್ತುನಿಷ್ಠತೆಗೆ ತಿಲಾಂಜಲಿ ನೀಡುತ್ತಿದ್ದಾರೆ. ಅವರು ಕಾರ್ಪೊರೇಟ್ ಕಂಪನಿಗಳ ಲಾಭವೆಂಬ ಲೂಟಿಯನ್ನು ನಡೆಸಲು ಅನುಕೂಲಕರವಾದ ವಿರೂಪಗೊಂಡ ವೈಜ್ಞಾನಿಕ ಸತ್ಯಗಳ ಉತ್ಪಾದನೆಯಲ್ಲಿ ಪ್ರಧಾನ ಪಾತ್ರ ವಹಿಸುತ್ತಿದ್ದಾರೆ. ಇಂತಹ ಸ್ವಾರ್ಥಪರ ದುರಾಸೆಗಳಿಗೆ ದಾಸರಾಗಿರುವ ವಿಜ್ಞಾನಿ ಸಮೂಹಗಳ ನಡೆವಳಿಕೆಗಳಿಂದ ಇಂದು ಸಮಾಜ ಅವರನ್ನು ಸಂಶಯದ ದೃಷ್ಟಿಯಿಂದ, ಅಪನಂಬಿಕೆಯಿಂದ ನೋಡುವಂತಾಗಿದೆ. ವಿಜ್ಞಾನ ಜೀವನ ವಿಧಾನವಾಗದೆ ಹೊಟ್ಟೆಪಾಡಿನ ಆಸೆಬುರುಕುತನವನ್ನು ತೃಪ್ತಿಪಡಿಸಬಲ್ಲ ಸಾಧನವಾಗಿಬಿಟ್ಟಿದೆ. ವಿಜ್ಞಾನಿ ಸಮೂಹವೇ ಈ ರೀತಿ ದಿಕ್ಕೆಟ್ಟು ನಡೆಯುತ್ತಿರುವುದರಿಂದ ವಿಶಾಲ ಜನಸಮೂಹಗಳನ್ನು ಅವರು ಅತ್ಯಂತ ಸ್ಫೂರ್ತಿದಾಯಕವಾಗಿ ವೈಜ್ಞಾನಿಕ ಮಾರ್ಗದಲ್ಲಿ ಕೊಂಡೊಯ್ಯಲು ಸಾಧ್ಯವಾಗುತ್ತಿಲ್ಲ. ಇದಲ್ಲದೆ ಮಾರುಕಟ್ಟೆಯ ಜಗತ್ತು ಸೃಷ್ಟಿಸುತ್ತಿರುವ ಅಸುರಕ್ಷತೆ ಮತ್ತು ಅನಿಶ್ಚಯತೆಗಳು ಜನರನ್ನು ಬಾಬಾಗಳ, ಗುರುಗಳ, ಮಠಮಾನ್ಯಗಳ, ವಾಮಾಚಾರ, ಕಂದಾಚಾರಗಳ ಮಡಿಲಿಗೆ ದೂಡುತ್ತಿವೆ. ಇಂತಹ ಸಾಮಾಜಿಕ ಪರಿಸ್ಥಿತಿಯನ್ನು ನಿರ್ಮಿಸಿ ಅದರಲ್ಲಿ ಅಪಾರ ಜನಸಮೂಹಗಳು ಬಿದ್ದು ತೊಳಲಾಡುವಂತೆ ಮಾಡುವಲ್ಲಿ ಬೃಹತ್ ಬಂಡವಾಳಗಾರ ಕಾರ್ಪೊರೇಟ್ ಕಂಪನಿಗಳ ಪಾತ್ರ ಅತ್ಯಂತ ಪ್ರಧಾನವಾಗಿದೆ.

ಇಷ್ಟೆಲ್ಲದರ ನಡುವೆಯೂ ಅತ್ಯಂತ ನಿಷ್ಠುರವಾಗಿ ವಿಜ್ಞಾನದ ಹಾದಿಯಲ್ಲಿ ಸಾಗುತ್ತಾ ಬಂದಿರುವ, ಅದಕ್ಕಾಗಿ ಪ್ರಾಣಾರ್ಪಣೆಯಂತಹ ತ್ಯಾಗ ಬಲಿದಾನಗಳಿಗೆ ಲೆಕ್ಕಿಸದಿರುವ ಒಂದು ವಿಜ್ಞಾನಿ ಸಮೂಹ ಸದಾ ಕಾರ್ಯ ನಿರ್ವಹಿಸುತ್ತಾ ಬಂದಿದೆ. ಅದು ಪ್ರಶ್ನೆಗಳನ್ನೆತ್ತಿ ವಿವಾದ ಚರ್ಚೆಗಳಲ್ಲಿ ಪ್ರಧಾನವಾಗಿ ಭಾಗವಹಿಸಿ ವಿಜ್ಞಾನ ಜ್ಯೋತಿಯನ್ನು ನಿರಂತರವಾಗಿ ಉರಿಯುವಂತೆ ಮಾಡಿ ಅದರಿಂದ ಸಮಾಜಕ್ಕೆ ಅತ್ಯಗತ್ಯವಾದ ಬೆಳಕನ್ನು ನೀಡಲು ಶ್ರಮಿಸಬೇಕಿದೆ.

ಪಿ. ಯತಿರಾಜು
ಪ್ರಾಚಾರ್ಯರು
ಕಾಳಿದಾಸ ಪದವಿಪೂರ್ವ ಕಾಲೇಜು
ಶಿರಾಗೇಟ್, ತುಮಕೂರು.



(ಚಿತ್ರ : ಅಂತರರಾಷ್ಟ್ರೀಯ ಕಿಲೊಗ್ರಾಮ್ ಮಾತೃಕೆ)

# ಇಂದಿನ ಕಿಲೊಗ್ರಾಮ್ ಸ್ಥಿರವಲ್ಲ

ಕಿಲೊಗ್ರಾಮ್ ಅಲ್ಲದಿರುವುದನ್ನು ಕಿಲೊಗ್ರಾಮ್ ಎಂದು ಹೇಗೆ ಕರೆಯೋಣ ? ತೂಕ ಮತ್ತು ಅಳತೆಗಳ ಕ್ಷೇತ್ರದ ಹಲವು ಪರಿಣತರು ಕೇಳುತ್ತಿರುವ ಈ ಪ್ರಶ್ನೆ, ಮೇಲುನೋಟಕ್ಕೆ ಒಂದು ಒಗಟಾಗಿ ತೋರಬಹುದು. ಕಿಲೊಗ್ರಾಮ್ ಉಪಯೋಗವನ್ನೂ ಇತಿಹಾಸವನ್ನೂ ಒಂದಿಷ್ಟು ಗಮನಿಸಿದರಷ್ಟೇ ಈ ಪ್ರಶ್ನೆಯ ಹಿಂದಿರುವ ಸಮಸ್ಯೆ ಕಾಣಿಸೀತು.

**ಕಿಲೊಗ್ರಾಮ್ ಹುಟ್ಟು**: ನಿರಂಕುಶ ಅರಸೊತ್ತಿಗೆಯ ವಿರುದ್ಧ ನಡೆದ ಫ್ರಾನ್ಸಿನ ಮಹಾಕ್ರಾಂತಿ(೧೭೮೯) ತೂಕ-ಅಳತೆಗಳಲ್ಲೂ ಕ್ರಾಂತಿಗೆ ಕಾರಣವಾಯಿತು. ಚಾರ್ಲ್ಸ್ ಮಾರಿಸ್ ದ ಟಾಲೀರಾಂಡ್ ಎಂಬ ಬಿಷಪ್, ಕ್ರಾಂತಿಯ ಅನಂತರ ಫ್ರಾನ್ಸ್‌ನ ಪ್ರಜಾಪ್ರತಿನಿಧಿ ಸಭೆಯ ಸದಸ್ಯನಾಗಿದ್ದ. ತೂಕ ಅಳತೆಗಳನ್ನು ಸುಧಾರಿಸುವ ಕೆಲಸವನ್ನು ಫ್ರಾನ್ಸಿನ ವಿಜ್ಞಾನ ಅಕಾಡೆಮಿಗೆ ವಹಿಸಬೇಕೆಂಬ ಸೂಚನೆಯನ್ನು ಕ್ರಾಂತಿಯ ಮೊದಲ ವಾರ್ಷಿಕೋತ್ಸವದಂದು ಅವನು ಮುಂದಿಟ್ಟ. ಸ್ಥಳದಿಂದ ಸ್ಥಳಕ್ಕೆ ಬದಲಾಗುತ್ತಿದ್ದ ತೂಕ ಅಳತೆಗಳ ಮಾನಗಳಲ್ಲಿ ಏಕರೂಪತೆ ತರಲು ಅವನ ಸೂಚನೆ ಬಹು ಮುಖ್ಯ ಹೆಜ್ಜೆಯಾಯಿತು.

ಇಂಗ್ಲಂಡಿನ ರಾಯಲ್ ಸೊಸೈಟಿಯಂತೆಯೇ ಫ್ರೆಂಚ್ ಅಕಾಡೆಮಿಯೂ ಜಗತ್ತಿನ ಪ್ರಮುಖ ವಿಜ್ಞಾನ ಸಂಸ್ಥೆಯಾಗಿತ್ತು. ಅದು ತೂಕ ಅಳತೆಗಳ ಸುಧಾರಣೆಗೆ ಒಂದು ಸಮಿತಿಯನ್ನು ನೇಮಿಸಿತು. ಗಣಿತಜ್ಞನಾದ ಜೀನ್ ಚಾರ್ಲ್ಸ್ ಬೋರ್ಡ್(೧೭೩೩-೧೭೯೯) ಸಮಿತಿಯ ಅಧ್ಯಕ್ಷನಾಗಿದ್ದ. ಲಾಪ್ಲಾಸ್(೧೭೪೯-೧೮೨೭), ಗಾಸ್ಪಾರ್ಡ್ ಮಾಂಜ್(೧೭೪೬-೧೮೧೮), ಲಾಗ್ರಾಂಜ್(೧೭೩೬-೧೮೧೩) ರಂಥ ಬಹುಶ್ರುತರು ಅದರ ಸದಸ್ಯರಾಗಿದ್ದರು. ಗಿಲಟೀನಿಗೆ ತಲೆಕೊಡುವ ತನಕ ಮಹಾ ರಸಾಯನಜ್ಞ ಆಂಟನಿ ಲವಾಸಿಯೆ (೧೭೪೩-೧೭೯೪)ಕೂಡ ಈ ಸದಸ್ಯರೊಂದಿಗೆ ನಿಕಟ ಸಂಪರ್ಕದಲ್ಲಿದ್ದ.

ಅಳತೆಯ ದೊಡ್ಡ ಮತ್ತು ಪುಟ್ಟ ಮಾನಗಳನ್ನು ೧೦ರ ಗುಣಕದಿಂದ ಹೆಣೆಯಬೇಕೆಂದು ಪ್ರಾರಂಭದಲ್ಲೇ ಸಮಿತಿ ನಿಶ್ಚಯಿಸಿತು. ಭೂಮಿಯ ದಕ್ಷಿಣ ಮತ್ತು ಉತ್ತರ ಧ್ರುವಗಳನ್ನು ಸೇರಿಸುವ ರೇಖಾಂಶ ವೃತ್ತದ ನಾಲ್ಕು ಕೋಟಿ ಅಂಶಗಳಲ್ಲಿ ಒಂದನ್ನು, ಉದ್ದದ ಮಾನವಾಗಿ ಅಂಗೀಕರಿಸಿತು. ಇದಕ್ಕೆ ಮುಂದೆ ಮೀಟರ್ ಎಂಬ ಹೆಸರು ಬಂತು. ಮೀಟರ್‌ಗೆ ಮೂಲವಾದ ರೇಖಾಂಶ ಚಾಪ ಪಾದವನ್ನು ಅಳೆಯಲು ಮುಂದೆ ಮಹಾ ಸಮೀಕ್ಷೆಯೇ ಬೇಕಾಯಿತು. ಮೀಟರಿನ ನೂರನೇ ಒಂದರಷ್ಟು ನೀಳವಾದ ಬದಿ(ಬಾಹು) ಇರುವ ಒಂದು ಘನದಲ್ಲಿನ ನೀರಿನ ಪರಿಮಾಣವನ್ನು ಸಮಿತಿಯು ದ್ರವ್ಯ ರಾಶಿಯ (ಅಥವಾ ರಾಶಿಯ) ಮಾನವಾಗಿ ಅಂಗೀಕರಿಸಿತು. ಮೀಟರಿನ ನೂರನೇ ಒಂದಂಶ ಅಂದರೆ ಸೆಂಟಿಮೀಟರ್. ಆದ್ದರಿಂದ ಒಂದು ಘನ ಸೆಂಟಿಮೀಟರ್ ಶುದ್ಧ ನೀರಿನ ರಾಶಿಯನ್ನು ಒಂದು ಗ್ರಾಮ್ ಎಂದು ಕರೆದರು.(ಗ್ರಾಮ್ ತೂಕ ಎಂದರೆ ಗ್ರಾಮ್ ರಾಶಿಯನ್ನು ಭೂಮಿ ಎಳೆಯುವ ಬಲ. ಸ್ಥಳ ಬದಲಾದಂತೆ ಗ್ರಾಮ್ ತೂಕ ಬದಲಾಗಬಹುದು. ಆದರೆ ಗ್ರಾಮ್ ರಾಶಿ ಬದಲಾಗದು.) ಇದಕ್ಕಾಗಿ ದ್ರವಿಸುವ ಐಸಿನ ಉಷ್ಣತೆಯಲ್ಲಿರುವ-ಸೊನ್ನೆ ಡಿಗ್ರಿ ಸೆಲ್ಸಿಯಸ್-ನೀರನ್ನು ಬಳಸಬೇಕೆಂದು ಮೊದಲು ನಿರ್ಧರಿಸಿದ್ದರು. ಈ ಉಷ್ಣತೆಯಲ್ಲಿ ನೀರು ಮತ್ತು ಐಸು ಎರಡೂ ಒಟ್ಟಿಗಿರುತ್ತವೆ. ಆದ್ದರಿಂದ ಕೇವಲ ನೀರಿನ ರಾಶಿಯನ್ನು ತೂಗುವುದು ಸುಲಭವಲ್ಲ ಎಂದು ಕಂಡುಬಂದಾಗ ಅತಿ ಅಧಿಕ ಸಾಂದ್ರತೆಯ ೪ ಡಿಗ್ರಿ ಸೆಲ್ಸಿಯಸ್ ಉಷ್ಣತೆಯ ನೀರನ್ನು ಆರಿಸಿದರು. ೧೭೯೧ರಲ್ಲಿ ಸಮಿತಿಯ ಸೂಚನೆಗಳನ್ನು ಪ್ರಜಾಪ್ರತಿನಿಧಿ ಸಭೆ ಅಂಗೀಕರಿಸಿತು. ಈ ಬಗ್ಗೆ ಮುಂದೆ ಸರಕಾರೀ ಆಜ್ಞೆ ಕೂಡ ಜಾರಿಯಾಯಿತು (೧೭೯೫).

ಆದರೆ ಒಂದು ಘನ ಸೆಂಟಿಮೀಟರ್‌ನಷ್ಟು ಕಡಮೆ ಗಾತ್ರದ ನೀರನ್ನು ಮಾನವಾಗಿ ಬಳಸುವ ಕೆಲಸ ರಗಳೆಯದಾಗಿತ್ತು. ಆದ್ದರಿಂದ ಅದನ್ನು ಒಂದು ಘನ ಡೆಸಿಮೀಟರ್ (೦.೧ ಮೀಟರ್ ಬದಿಯ ಘನದ ಗಾತ್ರ = ೧೦೦೦ ಘನ ಸೆಂಟಿಮೀಟರ್) ಎಂದು ಬದಲಾಯಿಸಿದರು. ೪ ಡಿಗ್ರಿ ಸೆಲ್ಸಿಯಸ್‌ನಲ್ಲಿರುವ ೧೦೦೦ ಘನ ಸೆಂಟಿಮೀಟರ್ ನೀರಿನ

ಹಿಂದೆ ಮೀಟರನ್ನು ಭೂಮಿಯ ಪರಿಧಿಗೂ ಸೆಕೆಂಡನ್ನು ಸೂರ್ಯಚಲನೆಯ ಫಲವಾದ ದಿವಸಕ್ಕೂ ಸಂಬಂಧಿಸಲಾಗಿತ್ತು. ಇಂದು ಅವು ಯಾವುದೇ ಭೌತವಸ್ತುವನ್ನು ಅವಲಂಬಿಸಿಲ್ಲ. ಬೆಳಕಿನ ವೇಗದಿಂದ ಮೀಟರನ್ನೂ ಸೀಸಿಯಮ್ ಪರಮಾಣುಗಳು ಹೊಮ್ಮಿಸುವ ನಿರ್ದಿಷ್ಟ ವಿಕಿರಣದ ಆವೃತ್ತಿಯಿಂದ ಸೆಕೆಂಡನ್ನೂ ನಿರೂಪಿಸಿದ್ದಾರೆ. ಅಂದರೆ ಮೀಟರ್ ಮತ್ತು ಸೆಕೆಂಡ್‌ಗಳು ಪ್ರಕೃತಿಯಲ್ಲಿ ಸ್ಥಿರವಾಗಿರುವ ಪರಿಮಾಣ-ಪರಿಕಲ್ಪನೆಗಳನ್ನು ಅವಲಂಬಿಸಿವೆ.

ಪ್ರೊ॥ ಅಡ್ಯನಡ್ಕ ಕೃಷ್ಣಭಟ್

ತೂಕವನ್ನು ಅಳೆದು, ಅಷ್ಟೇ ತೂಕದ ಲೋಹದ ಮಾತೃಕೆಯನ್ನು ರೂಪಿಸುವಾಗ (೧೭೯೯) ಎಂಟು ವರ್ಷಗಳು ಸಂದಿದ್ದುವು. ಲೋಹದ ಈ ಗಟ್ಟಿಯೇ ಮೊತ್ತ ಮೊದಲ 'ಕಿಲೊಗ್ರಾಮ್'. ಕಿಲೊಗ್ರಾಮ್ ರಾಶಿ ಮಾನದ ಇತರ ಪ್ರತಿಗಳೊಂದಿಗೆ ಹೋಲಿಸುವುದಕ್ಕಾಗಿ ಇದನ್ನು ಭದ್ರವಾಗಿಡಲಾಯಿತು. ಈ ಶಿಷ್ಟ ರಾಶಿಯ (ಅಥವಾ ತೂಕದ) ಮಾತೃಕೆಯನ್ನು ಮೊದಲಿಗೆ 'ಕಿಲೊಗ್ರಾವ್' ಎನ್ನುತ್ತಿದ್ದರು. ಗ್ರಾವ್ - ಗುರುತ್ವದ (ಗ್ರಾವಿಟಿ) ಸಂಬಂಧವನ್ನು ಸಾರುತಿತ್ತು, ಆದರೆ ಗ್ರಾಮ್ ಅನ್ನು ಒಂದು ಮಾನವಾಗಿ ತೆಗೆದುಕೊಳ್ಳುವಾಗ 'ಕಿಲೊಗ್ರಾವ್' ರೂಢಿಗೆ ಬಂತು.

ವಾಸ್ತವವಾಗಿ ಆ ಮಾತೃಕೆಯ ತೂಕ ನಿಖರವಾಗಿ ೧ ಕಿಲೊಗ್ರಾಮ್ ಆಗಿರಲಿಲ್ಲ - ೧. ೦೦೦ ೦೨೮ ಕಿಲೊ ಗ್ರಾಮ್ ಆಗಿತ್ತು. ಈ ದೋಷವನ್ನು ನಿವಾರಿಸಲು ಮುಂದೆ ತಿದ್ದುಪಡಿ ತಂದರು.

೧೭೯೯ರ ಮಾತೃಕೆಯನ್ನು ೯೦ ವರ್ಷಗಳ ಬಳಿಕ ಬದಲಿಸಿದರು. ವಾತಾವರಣದ ಪರಿಣಾಮಗಳಿಗೆ ಸುಲಭದಲ್ಲಿ ಶಿಥಿಲವಾಗದ ಪ್ಲಾಟಿನಮ್-ಇರಿಡಿಯಮ್ ಮಿಶ್ರಲೋಹದಿಂದ ರೂಪಿಸಿದ ಹೊಸ ಮಾತೃಕೆ ಸಿಲಿಂಡರು (ಸ್ತಂಭ) ಆಕಾರದಲ್ಲಿದೆ. ಇದರಲ್ಲಿ ಎತ್ತರ ಮತ್ತು ವ್ಯಾಸ ಎರಡೂ ಪರಸ್ಪರ ಸಮ - ಪ್ರತಿಯೊಂದೂ ಸುಮಾರು ೩.೮೪ ಸೆಂಟಿಮೀಟರ್. ಅಂಗಡಿಯ ಕಿಲೊ ಕಲ್ಲು ನೆನಪಾಗಿ ಇಷ್ಟು ಪುಟ್ಟ ಗಟ್ಟಿ ಒಂದು ಕಿಲೊ ತೂಗಬಲ್ಲುದೇ ಎಂದು ನಿಮಗನಿಸಬಹುದು. ಆದರೆ ಅದರ ಸಾಂದ್ರತೆ ನೀರಿಗಿಂತ ೨೧.೫೫೧ ಪಟ್ಟು ಹೆಚ್ಚು. ಇದರಿಂದಾಗಿಯೇ ಮಾತೃಕೆಯ ಗಾತ್ರ ಕುಗ್ಗಿದೆ. ಈ ಎರಡನೇ ಕಿಲೊಗ್ರಾಮ್ ಮಾತೃಕೆಯೇ ಇಂದು ರಾಶಿ ಹಾಗೂ ತೂಕಗಳ ಮಾಪನವನ್ನು ಪ್ರಪಂಚದಾದ್ಯಂತ ಆಳುತ್ತಿದೆ. ಇದುವೇ ಜಗತ್ತಿನಲ್ಲಿ ಉಪಯೋಗಿಸುವ ಎಲ್ಲ ತೂಕಗಳಿಗೂ ಮೂಲರೂಪದ್ದಾಗಿರುವ 'ಅಂತರರಾಷ್ಟ್ರೀಯ ಕಿಲೊಗ್ರಾವ್ ಮಾತೃಕೆ' (ಇಂಟರ್‌ನ್ಯಾಷನಲ್ ಪ್ರೊಟೊಟೈಪ್ ಕಿಲೊಗ್ರಾಮ್ ).

ಲೋಹಗಟ್ಟಿಯ ರೂಪದಲ್ಲಿರುವ ಈ ಮಾತೃಕೆಯನ್ನು ಪ್ಯಾರಿಸ್ ಬಳಿ ಇರುವ ಸೇವರ್ ಎಂಬಲ್ಲಿ ಮೂರು ಗಾಜು ಪದರಗಳ ಆವರಣದೊಳಗೆ ನೆಲಮಾಳಿಗೆಯಲ್ಲಿ ಜತನದಿಂದ ಇಟ್ಟರು (೧೮೮೯). ತೂಕ ಅಳತೆಗಳ ಅಂತರರಾಷ್ಟ್ರೀಯ ಬ್ಯೂರೊ ಇದರ ಉಸ್ತುವಾರಿ ನೋಡಿಕೊಳ್ಳತೊಡಗಿತು. ಒಂದು ವಸ್ತುವಿನಲ್ಲಿರುವ ದ್ರವ್ಯವನ್ನು ನಿಷ್ಕೃಷ್ಟವಾಗಿ ಹೋಲಿಸಬೇಕಾದರೆ ಅಂತಿಮವಾಗಿ ಈ ಮಾತೃಕೆಯೇ ಗತಿ. ಇಂಥ ಹೋಲಿಕೆಗಳಲ್ಲಿ ನುಸುಳಬಹುದಾದ ದೋಷ - ಹತ್ತು ಕೋಟಿಯಲ್ಲೊಂದಂಶ. ಮುದ್ರಣ ಮಸಿ ಬೊಟ್ಟೊಂದರ ತೂಕವನ್ನು ಡೆಮಿ ೧/೮ ಗಾತ್ರದ ಸುಮಾರು ೮೦೦ ಪುಟಗಳ ಪುಸ್ತಕ ತೂಕಕ್ಕೆ ಹೋಲಿಸಿದರೆ ಹೇಗೋ ಹಾಗೆ! ಇದು ಸಾಧ್ಯವಾಗಿರುವುದು ಸೂಕ್ಷ್ಮಗ್ರಾಹೀ ಆಧುನಿಕ ತೂಗುಯಂತ್ರಗಳಿಂದ.

ಹಲವು ರಾಷ್ಟ್ರಗಳು ಈ ಮಾತೃಕೆಯ ಪ್ರತಿರೂಪವನ್ನು ತಯಾರಿಸಿ ತಮ್ಮಲ್ಲಿ ಜೋಪಾನವಾಗಿ ಇಟ್ಟುಕೊಂಡಿವೆ. ಇಂಥ ಪ್ರತಿರೂಪವನ್ನು 'ರಾಷ್ಟ್ರೀಯ ಶಿಷ್ಟ ಕಿಲೊಗ್ರಾಮ್' ಎಂದು ಕರೆಯುತ್ತಾರೆ. ಒಂದೊಂದು ರಾಷ್ಟ್ರದ ಶಿಷ್ಟ ಕಿಲೊಗ್ರಾಮನ್ನು ಒಂದೊಂದು ಸಂಖ್ಯೆಯಿಂದ ನಮೂದಿಸುತ್ತಾರೆ. ಉದಾಹರಣೆಗೆ ಇಂಗ್ಲೆಂಡಿನದ್ದು೧೮, ಅಮೆರಿಕದ್ದು೨೦, ಭಾರತದ್ದು ೫೭, ಕೆನಡದ್ದು ೭೪.

**ದೋಷದ ಪರಿಣಾಮ :** ತೂಗಿ ಅಳೆಯುವ ಯಾವುದೇ ವಸ್ತುವಿನ ಪರಿಮಾಣವನ್ನು ನಿಗದಿಗೊಳಿಸಲು ನಾವು ಬಳಸುವ ಮಾನ – ಕಿಲೊಗ್ರಾಮ್. ಬಳಕೆಯಲ್ಲಿ ಕಿಲೊಗ್ರಾಮ್ ಬರಿಯ 'ಕಿಲೊ' ಆಗುವುದೂ ಉಂಟು. 'ಕಿಲೊ' ಎಂಬ ಪೂರ್ವಪ್ರತ್ಯಯ 'ಸಾವಿರ'ವನ್ನು ಸೂಚಿಸುತ್ತದೆ. ಆದರೆ 'ನಾಲ್ಕು ಕಿಲೊ ಅಕ್ಕಿ, ಕಾಲು ಕಿಲೊ ಮೆಣಸು' ಎಂದು ಕೇಳಿದಾಗ ಕಿರಾಣಿ ಅಂಗಡಿಯಲ್ಲಿ 'ಯಾವುದರ ಸಾವಿರ ?' ಎಂದು ತಪ್ಪು ತಿಳಿಯುವುದಿಲ್ಲ ಆಡುಮಾತಿನಲ್ಲಿ ಕಿಲೊಗ್ರಾಮ್ 'ಕಿಲೊ' ಆಗಿಬಿಟ್ಟಿದೆ, ಇಂಗ್ಲಿಷ್ ಅಕ್ಷರಗಳ ಮೇಲಿನಿಂದ 'ಕೆಜಿ' ಯೂ ಆಗಿದೆ.

ಕಡಮೆ ತೂಕವಾದರೆ ಅರ್ಧ ಕಿಲೊ, ಕಾಲು ಕಿಲೊ ಅಥವಾ ಗ್ರಾವ್‌ಗಳಲ್ಲಿ ಅಳೆಯತ್ತಾರೆ. ಆದರೆ ಪ್ರಯೋಗಶಾಲೆಗಳಲ್ಲಿ ನಿಖರತೆಗಾಗಿ ಗ್ರಾಮಿನ ಭಿನ್ನಾಂಕಕ್ಕೆ ಸರಿಯಾಗಿ ತೂಗುವಾಗ ಮಿಲಿಗ್ರಾಮ್ (ಗ್ರಾಮಿನ ಸಾವಿರ ಪಾಲುಗಳಲ್ಲಿ ಒಂದು ಪಾಲು) ಅಥವಾ ಮೈಕ್ರೊಗ್ರಾಮ್ (ಗ್ರಾಮಿನ ಮಿಲಿಯನ್ ಪಾಲುಗಳಲ್ಲಿ ಒಂದು ಪಾಲು) ಎಂಬ ಮಾನಗಳನ್ನು ಬಳಸುತ್ತಾರೆ.

ತೂಕದ ಪಡಿಗಳಿಲ್ಲವಾದರೂ ತೂಗಬಹುದು. ಅವಕ್ಕೆ ಅನುಗುಣವಾಗಿ ಕ್ರಮಾಂಕಿಸಿದ ತೂಗು ಯಂತ್ರಗಳಿದ್ದರಾಯಿತು.

ಜಗತ್ತಿನಲ್ಲಿ ತೂಕವನ್ನೊಳಗೊಂಡ ಅಸಂಖ್ಯಾತ ಕೆಲಸಗಳೂ ವಹಿವಾಟುಗಳೂ ನಡೆಯುತ್ತವೆ. ಇವುಗಳಲ್ಲಿ ಬೇಕಾಗುವ ಕಿಲೊಗ್ರಾಮ್ ಮತ್ತು ವಿವಿಧ ಗ್ರಾಮ್ ತೂಕದ ಪಡಿಗಳನ್ನು ಲೆಕ್ಕ ಇಟ್ಟವರಾರು ? ಅಂಗಡಿಗಳಿಗೆ ಹೋಗುವ ಅನೇಕ ಜನ ತ್ರಾಸು ಸರಿಯಿದೆಯೇ ತೂಕದ ಕಲ್ಲು ಸರಿ ಇದೆಯೇ ಎಂದು ಯೋಚಿಸಿ ವಿಮರ್ಶಿಸುವವರಲ್ಲ, ಹೆಚ್ಚೆಂದರೆ ತ್ರಾಸಿನ ಮಧ್ಯದಲ್ಲಿ ಸೂಚಿ ಓಲಾಡುತ್ತಿದೆ ತಾನೇ ಎಂದು ತೃಪ್ತಿಪಟ್ಟು ಕೊಳ್ಳುವವರು. ಆದರೆ ಪ್ರಯೋಗಾಲಯಗಳಲ್ಲಿ ಹಾಗಲ್ಲ, ನಾವು ನೇರವಾಗಿ ನೋಡಲಾಗದ ಅಣುವಿನ ತೂಕವನ್ನೋ ಪರಮಾಣುವಿನ ತೂಕವನ್ನೋ ತಿಳಿಯಲು ಗ್ರಾಮಿನ ಪುಟ್ಟ ಭಿನ್ನಾಂಕದಷ್ಟು ನಿಖರವಾದ ಅಳತೆ ಬೇಕಾಗುತ್ತದೆ. ಅಳೆಯಲು ಉಪಯೋಗಿಸುವ ತೂಕಗಳು ಅಂತರರಾಷ್ಟ್ರೀಯವಾಗಿ ಒಪ್ಪಿಕೊಂಡ ಮಾನದಂಡಕ್ಕೆ ಸರಿಯಾಗಿವೆಯೇ ಎಂದು ತಾಳೆನೋಡಬೇಕಾಗುತ್ತದೆ. ಅಷ್ಟೇ ಅಲ್ಲ - ಕಿಲೊಗ್ರಾಮಿನ ಕೋಟಿ ಅಂಶದಷ್ಟು ದೋಷವಿದ್ದರೂ ಕೋಟಿಗಟ್ಟಲೆ ಟನ್ ಧಾನ್ಯ ಅಥವಾ ಲೋಹಸಾಮಗ್ರಿಗಳ ವಹಿವಾಟಿನಲ್ಲಿ ಗಣನೀಯ ದೋಷ ಕಂಡುಬರುತ್ತದೆ. (ಗಮನಿಸಿ : ಸಾವಿರ ಕಿಲೊಗ್ರಾಮುಗಳಿಗೆ ಒಂದು ಟನ್ ಸಮ).

**ಬದಲಾಗುವ ಕಿಲೊ :** ಯುಕ್ತ ಸುಪರ್ದಿಯಲ್ಲಿಟ್ಟ ಕಿಲೊಗ್ರಾಮ್ ಮಾತೃಕೆಯನ್ನು ಹೊರ ತೆಗೆಯುವುದೇ ಅಪರೂಪ. ಇದುವರೆಗೆ - ಕಳೆದ ೧೨೨ ವರ್ಷಗಳಲ್ಲಿ - ಮೂರು ಬಾರಿ ತೆಗೆದಿದ್ದಾರಷ್ಟೆ. ಈ ಅವಧಿಯಲ್ಲಿ ನಡೆಸಿದ ಅಳತೆಯಿಂದ ಕಿಲೊಗ್ರಾಮ್ ಮಾತೃಕೆಯ ರಾಶಿ ಬದಲಾಗುವುದು ತಿಳಿಯಿತು. ಸುಪರ್ದಿಯಲ್ಲಿಟ್ಟಾಗಿನಿಂದ ಅದು ಸುಮಾರು ೫೦ ಮೈಕ್ರೊಗ್ರಾಮ್ ರಾಶಿಯನ್ನು ಕಳಕೊಂಡಿದೆ. ಲೋಹದ ಗಟ್ಟಿಯಲ್ಲಿ ಹುದುಗಿರಬಹುದಾದ ಹೈಡ್ರೊಜನ್ ಅನಿಲ ಸೋರಿಯೋ ಎಷ್ಟೇ ನಿವಾರಿಸಿದರೂ ಉಳಿದು ಗಟ್ಟಿಯ ಮೇಲಿದ್ದಿರಬಹುದಾದ ನೀರಾವಿಯ ಪಲಾಯನದಿಂದಲೋ ಇನ್ನಾವುದೇ ಕಾರಣದಿಂದಲೋ ರಾಶಿ ನಷ್ಟವಾದದ್ದು ವಾಸ್ತವ. ನಷ್ಟವಾದದ್ದು ಒಂದು ಪುಟ್ಟ ಮರಳಕಣದ ರಾಶಿಯಷ್ಟು ನಗಣ್ಯ ಎಂದು ಕೆಲವರಂದುಕೊಳ್ಳಬಹುದು. ನಾವು ದಿನ ನಿತ್ಯ ನಡೆಸುವ ಕೆಲವು ಕಿಲೊಗ್ರಾಮ್ ತೂಕದ ವ್ಯವಹಾರಗಳಲ್ಲಿ ಈ ತೀರ್ಮಾನ ಸರಿ ಎನಿಸಬಹುದು. ಆದರೆ ರಾಶಿ ಪ್ರಮಾಣ ಬಹಳ ಹೆಚ್ಚಿರುವಾಗ ಅಥವಾ ಬಹಳ ಕಡಮೆ ಇರುವಾಗ ಈ ಅನಿಸಿಕೆ ತಪ್ಪಾಗುತ್ತದೆ. ರಾಶಿ ಹೋಲಿಕೆಗೆ ಯೋಗ್ಯವಾದ ಪರಮ ಮಾತೃಕೆಯೇ ಚಂಚಲವಾದಾಗ ಅಳತೆಯ ಲೋಕವೇ ಅಲ್ಲೋಲ ಕಲ್ಲೋಲವಾಗುತ್ತದೆ. ಅಂತರರಾಷ್ಟ್ರೀಯ ವ್ಯಾಪಾರೀ ಮಾನದಂಡಗಳನ್ನು ಪ್ರವೇಶಿಸುವ ದೋಷಗಳು ಆರ್ಥಿಕ ಪರಿಣಾಮಗಳಿಗೂ ಕಾರಣವಾಗುತ್ತವೆ. ಇದಕ್ಕೆ ಪರಿಹಾರದ ದಾರಿ ಯಾವುದು ?

ಕಿಲೊಗ್ರಾಮಿನ ರಾಷ್ಟ್ರೀಯ ಶಿಷ್ಟ ಪ್ರತಿಗಳು ಈ ಗೊಂದಲವನ್ನು ಇನ್ನೂ ಹೆಚ್ಚಿಸಿವೆ. ಕೆನಡಾದ ರಾಷ್ಟ್ರೀಯ ಶಿಷ್ಟ ಕಿಲೊಗ್ರಾಮ್‌ನಲ್ಲಿ ತೂಕ ವ್ಯತ್ಯಾಸ ಪತ್ತೆಯಾದಾಗ ಅಂತರರಾಷ್ಟ್ರೀಯ ಮಾತೃಕೆಯೊಂದಿಗೆ ಹೋಲಿಸಿ ಕೊಳ್ಳಲು ಫ್ರಾನ್ಸಿಗೆ ಪಯಣಿಸಬೇಕಾಯಿತು (೨೦೧೧). ರಾಷ್ಟ್ರೀಯ ಶಿಷ್ಟಗಳಲ್ಲಿ ಕೆಲವು ಪ್ರತಿಗಳ ರಾಶಿ ಸೂಕ್ಷ್ಮವಾಗಿ ಹೆಚ್ಚಾಗಿದೆ, ಮತ್ತೆ ಕೆಲವು ಪ್ರತಿಗಳದ್ದು ಕಡಮೆಯಾಗಿದೆ. ಈ ವಿದ್ಯಮಾನವನ್ನೂ ಕರಾರುವಾಕ್ಕಾಗಿ ವಿವರಿಸಲಾಗಿಲ್ಲ.

ಉದ್ದ, ರಾಶಿ ಮತ್ತು ಕಾಲಗಳ ಮಾನಗಳನ್ನು ಮೂಲ ಮಾನಗಳೆನ್ನುವುದುಂಟು. ಪ್ಯಾರಿಸ್‌ನಲ್ಲಿ ನಡೆದ (೧೯೬೦ನೇ ಅಕ್ಟೋಬರ್) ತೂಕ ಅಳತೆಗಳ ಸಾಮಾನ್ಯ ಅಧಿವೇಶನದಲ್ಲಿ 'ಮಾನಗಳ ಅಂತರರಾಷ್ಟ್ರೀಯ ವ್ಯವಸ್ಥೆ'ಯನ್ನು ರೂಢಿಗೆ ತರಲು ತೀರ್ಮಾನಿಸಿದರು. ಇದನ್ನು 'ಮೀಟರ್ ಒಪ್ಪಂದ' ಎಂದು ಕರೆಯುತ್ತಾರೆ. ಮೊದಲಿಗೆ ೩೬ ರಾಷ್ಟ್ರಗಳು ಇದನ್ನು ಒಪ್ಪಿದುವು. ಇಂದು ಒಪ್ಪಂದವನ್ನು ಹೆಚ್ಚಿನ ರಾಷ್ಟ್ರಗಳು ಅನುಮೋದಿಸಿವೆ. ಅದರ ಪ್ರಕಾರ ಉದ್ದದ ಮಾನ-ಮೀಟರ್, ರಾಶಿಯ ಮಾನ-ಕಿಲೊಗ್ರಾಮ್, ಕಾಲದ ಮಾನ-ಸೆಕೆಂಡ್, ವಿದ್ಯುತ್ ಪ್ರವಾಹದ ಮಾನ-ಆಂಪೇರ್, ಉಷ್ಣತೆಯ ಡಿಗ್ರಿ-ಕೆಲ್ವಿನ್, ಬೆಳಕಿನ ತೀವ್ರತೆಯ ಮಾನ-ಕ್ಯಾಂಡೆಲ. ಇವುಗಳಲ್ಲದೆ ಪೂರಕ ಮಾನಗಳು ಬೇರೆಯೇ ಇವೆ.

ಹಿಂದೆ ಮೀಟರನ್ನು ಭೂಮಿಯ ಪರಿಧಿಗೂ ಸೆಕೆಂಡನ್ನು ಸೂರ್ಯಚಲನೆಯ ಫಲವಾದ ದಿವಸಕ್ಕೂ ಸಂಬಂಧಿಸಲಾಗಿತ್ತು. ಇಂದು ಅವು ಯಾವುದೇ ಭೌತವಸ್ತುವನ್ನು ಅವಲಂಬಿಸಿಲ್ಲ. ಬೆಳಕಿನ ವೇಗದಿಂದ ಮೀಟರನ್ನೂ ಸೀಸಿಯಮ್ ಪರಮಾಣುಗಳು ಹೊಮ್ಮಿಸುವ ನಿರ್ದಿಷ್ಟ ವಿಕಿರಣದ ಆವೃತ್ತಿಯಿಂದ ಸೆಕೆಂಡನ್ನೂ ನಿರೂಪಿಸಿದ್ದಾರೆ. ಅಂದರೆ ಮೀಟರ್ ಮತ್ತು

(೫೬ನೇ ಪುಟಕ್ಕೆ)




# "ಮನೋರೋಗ ಗೆಲ್ಲಬಹುದೆ?"

## ಮಹಿಳಾ ಮನೋರೋಗಿಯ ಹೃದಯಸ್ಪರ್ಶಿ ಆತ್ಮಕಥೆ

**ಮ**ನುಷ್ಯನನ್ನು ಕಾಡುವ ಅತಿ ಪುರಾತನ ಕಾಯಿಲೆಗಳಲ್ಲಿ 'ಮಾನಸಿಕ ರೋಗ'ವೂ ಒಂದು. ಇಂಥ ಮಾನಸಿಕ ರೋಗಗಳ ಬಗೆಗೆ ಇರುವ ತಪ್ಪು ಮಾಹಿತಿ - ಅಜ್ಞಾನ ಅಪಾರ. ಸಮಾಜದಲ್ಲಿ 'ಮನೋರೋಗ'ಗಳ ಮೇಲಿರುವ ಕಳಂಕಿತ ಭಾವನೆ ಮಾನಸಿಕ ರೋಗಗಳ ಚಿಕಿತ್ಸೆಯಲ್ಲಿ ಅತಿ ದೊಡ್ಡ ತಡೆಗೋಡೆ. ಇನ್ನು ಮಹಿಳೆಯರು ಮನೋರೋಗಿಗಳಾದರಂತೂ ಅವರ ನೋವನ್ನು ವರ್ಣಿಸಲು ಪದಗಳೇ ಸಾಲದು. ಅವರಿಗಾದ ಕೆಟ್ಟ ಅನುಭವಗಳು, ಅವುಗಳಿಂದ ಹೊರಬರಲು ಅವರು ಮಾಡಿದ ಪ್ರಯತ್ನ, ಅವರಿಗೆ ನೆರವಾದ ಜನ ಈ ಎಲ್ಲವನ್ನೂ ತಿಳಿಯುವ ದಾರಿಗಳು ಕೇವಲ ವೈದ್ಯಕೀಯ ಸಂಶೋಧನೆಗಳಾದರೆ ಮಾತ್ರ ಸಾಲದು. ಅದು ಜನರಿಗೆ ಮುಟ್ಟುವ ಪ್ರಯತ್ನ ಸಾಹಿತ್ಯದ ಮುಖಾಂತರವೇ ಆಗಬೇಕು. ಅಂಥ ಒಂದು ಸಾರ್ಥಕ ಪ್ರಯತ್ನ 'ಸ್ನೇಹಾ'ರ 'ಮನೋರೋಗ ಗೆಲ್ಲಬಹುದೆ ?' - ಮನೋರೋಗಿಯ ಆತ್ಮಕಥೆ. ನವಕರ್ನಾಟಕ ಪ್ರಕಾಶನದಿಂದ ೧೯೯೬ರಲ್ಲೇ ಹೊರಬಂದಿರುವ ಈ ಪುಸ್ತಕ ೨೦೦ ಪುಟಗಳ ಒಂದು ಪುಟ್ಟ ಕಾದಂಬರಿ.

ಈ ಪುಟ್ಟ ಕಾದಂಬರಿ ಎರಡು ವಿಷಯಗಳಿಂದ ಗಮನಾರ್ಹ. ಒಂದು– ಮನೋರೋಗಿ ತನ್ನ ಕಾಯಿಲೆಯ ಬಗ್ಗೆ, ತಾನು ಎದುರಿಸಿದ ಸಂಕಷ್ಟಗಳ ಬಗ್ಗೆ, ತಾನು ಅವುಗಳಿಂದ ಹೊರಬಂದ ಬಗ್ಗೆ ನೈಜ ಚಿತ್ರಣವನ್ನು ನೀಡಿರುವುದು; ಎರಡು– ಒಬ್ಬ ಮಹಿಳೆಯಾಗಿ ಇವುಗಳನ್ನು ಪ್ರಾಮಾಣಿಕವಾಗಿ , ಧೈರ್ಯವಾಗಿ ತೆರೆದಿಟ್ಟಿರುವುದು. ಆಂಗ್ಲಭಾಷೆಯಲ್ಲಿ ಬಂದಿರುವ ಮನೋರೋಗಿಗಳ ಆತ್ಮಕಥೆಗಳು ಬಹಳಷ್ಟಿವೆ. ಕ್ಲಿಫರ್ಡ್ ಬೀರ್ಸ್‌ನ 'ದಿ ಮೈಂಡ್ ದಟ್ ಫೌಂಡ್ ಇಟ್‌ಸೆಲ್ಫ್' ಮನೋವೈದ್ಯಕೀಯ ರಂಗದಲ್ಲಿ ಕ್ರಾಂತಿಯನ್ನೇ ಮಾಡಿತ್ತು. ಆದರೆ ಕನ್ನಡದಲ್ಲಿ ಅಥವಾ ಭಾರತೀಯ ಸಾಹಿತ್ಯದಲ್ಲಿ ಈ ಬಗ್ಗೆ ಬಂದ ನೈಜ ಬದುಕಿನ ಚಿತ್ರಣಗಳು ಬೆರಳೆಣಿಕೆಯಷ್ಟು ಮಾತ್ರ. ಅವುಗಳಲ್ಲಿ 'ಮನೋರೋಗ ಗೆಲ್ಲಬಹುದೆ ' ಎಂಬ ಈ ಕೃತಿ ಮನಮುಟ್ಟುವಂತಿದೆ.

ತನ್ನ 'ಮನೋರೋಗ' ಗೆಲ್ಲುವಲ್ಲಿ ಪ್ರಮುಖ ಪಾತ್ರ ವಹಿಸಿದ ಮನೋವೈದ್ಯರೊಬ್ಬರಿಗೆ ಈ ಪುಸ್ತಕವನ್ನು ಸಮರ್ಪಣೆ ಮಾಡಿದ್ದಾರೆ ಕಥಾ ನಾಯಕಿ– ಲೇಖಕಿ ಸ್ನೇಹಾ.

ಕಥೆಯು ಪ್ರಾರಂಭವಾಗುವುದು ನಾಯಕಿಯ ವಿದ್ಯಾರ್ಥಿ ಜೀವನದ ದಿನಗಳಿಂದ. ಹದಿನಾರರ ಹರೆಯದಲ್ಲೂ ಎಲ್ಲ ಕ್ಷೇತ್ರಗಳಲ್ಲೂ ಮುಂದಿದ್ದ, ಆರ್ಥಿಕವಾಗಿ ಸಬಲಳಾಗಿದ್ದ, ಮುಂದೆ ಓರ್ವ ವೈದ್ಯಳಾಗಬೇಕೆಂದಿದ್ದ, 'ಜಯ' (ಲೇಖಕಿ ಈ ಹೆಸರನ್ನೇ ಉದ್ದಕ್ಕೂ ಬಳಸುತ್ತಾರೆ) ಮಾನಸಿಕ ಖಿನ್ನತೆಗೆ ತುತ್ತಾಗುತ್ತಾಳೆ. ಲೇಖಕಿಯೇ ಹೇಳುವ ಹಾಗೆ, ''ದೇಹವು ರೋಗದಿಂದ ನರಳಿದರೆ ತತ್‌ಕ್ಷಣ ಚಿಕಿತ್ಸೆ ಮಾಡಿಸಿಕೊಳ್ಳುತ್ತೇವೆ. ಆದರೆ ಮನೋರೋಗವನ್ನು ಗುರುತಿಸಲು ಸಮಯ ಬೇಕು''. ಈ ಕೃತಿಯಲ್ಲಿ ತನ್ನ ಕಾಯಿಲೆಯಿಂದಾದ ಹಿಂಸಾತ್ಮಕ ನಡವಳಿಕೆಗಳಿಂದ, ತನ್ನ ತಂದೆ-ತಾಯಿ ಕಷ್ಟಪಡುವುದನ್ನು ಮನಮುಟ್ಟುವಂತೆ ಲೇಖಕಿ ವರ್ಣಿಸಿದ್ದಾರೆ. ಯಾವುದೇ ವಿದ್ಯಾರ್ಥಿಗೆ ಮನೋರೋಗ ಬಂದಾಗ ಎರಗಿಬರುವ ಕಷ್ಟಗಳು ಲೇಖಕಿಯ ಅನುಭವಕ್ಕೂ ಬಂದದ್ದು ಸ್ಪಷ್ಟ. ಈ ಪರಿಸ್ಥಿತಿಯಲ್ಲಿ ಬೋರ್ಡಿಂಗ್ ಶಾಲೆಯಲ್ಲಿದ್ದ 'ಜಯ'ಳ ಗೆಳತಿಯರು ಆಕೆಯನ್ನು ನೋಡಿಕೊಂಡದ್ದು ಆದರಣೀಯವಾಗಿದೆ. 'ಜಯ'ಳೇ ಹೇಳುವ ಹಾಗೆ ''ಅವರು ನನ್ನನ್ನು ತಿರಸ್ಕರಿಸಲಿಲ್ಲ, ಹಳಿಯಲಿಲ್ಲ. ಬಹುಶಃ ಅವರಿಗೆ ಹೊರಗಿನ ಕ್ರೂರ ಸಮಾಜದ ಸಂಪರ್ಕ ಇಲ್ಲದೇ ಇದ್ದದ್ದೇ ಇದಕ್ಕೆ ಕಾರಣವೇನೋ.''

ಜಯ ಹೇಳುವಂತೆ ಮನೋರೋಗಿಯ ಕಡು ವೈರಿಗಳೆಂದರೆ, 'ಒಂಟಿತನ' ಮತ್ತು ದೈಹಿಕವಾದ 'ಸೋಮಾರಿತನ' (ವೈಜ್ಞಾನಿಕವಾಗಿಯೂ ಇದು ಸತ್ಯ ). ತಾನು ಇವುಗಳಿಂದ ಸಂಬಂಧಿಗಳ - ಪೋಷಕರ ಅವಹೇಳನಕ್ಕೆ ತುತ್ತಾದುದನ್ನು ಜಯ ಇಲ್ಲಿ ಹೇಳುತ್ತಾರೆ. ನಂತರದ ಮುಖ್ಯ ಘಟ್ಟಗಳು ಅವರ ಆತ್ಮಹತ್ಯೆಯ ಪ್ರಯತ್ನಗಳು. ''ನಿದ್ದೆ ಗುಳಿಗೆಗಳನ್ನು ಸೇವಿಸಿ ಪ್ರಾಣಬಿಡುವುದು ಹಲವು ಸಿನೆಮಾಗಳಲ್ಲಿ ತೋರಿಸುವಂತೆ ಅಷ್ಟು ಸುಲಭದ ಕೆಲಸವಲ್ಲ. ಹಲವಾರು ಬಾರಿ ಪ್ರಾಣ ಬಿಡಲು ಯತ್ನಿಸಿದರೂ ಬದುಕುಳಿದ ನನ್ನ ಅದೃಷ್ಟಕ್ಕಾಗಿ ನಾನು ದೇವರಿಗೆ ಚಿರಋಣಿ'' ಎನ್ನುತ್ತಾರೆ ಲೇಖಕಿ. ಈ ಮಾತುಗಳು ಆತ್ಮಹತ್ಯೆಯ ಪ್ರಯತ್ನ ನಡೆಸುವವರೆಲ್ಲರಲ್ಲೂ ಜಾಗೃತಿ ಉಂಟು ಮಾಡಬೇಕು, ಅವರು ಬದುಕಲು ಕಲಿಯುವಂತಾಗಬೇಕು.

ಮನೋರೋಗಿಗಳ ಮದುವೆಯಲ್ಲಿ ಉಂಟಾಗುವ ಅಡ್ಡಿಗಳು ಜಯ ಅವರಿಗೆ ಉಂಟಾದ ಹಾಗಿಲ್ಲ. ಸರಳ - ನೇರ ಮಾತಿನ ಸೋದರಮಾವ ಅವರ ಕೈಹಿಡಿದರು. ಆದರೆ ಆ ಸಮಯದಲ್ಲಿ ತನಗೆ ಯಾವುದೇ ಭಾವನೆಗಳು ಇರದಿದ್ದುದನ್ನೂ ಜಯ ಚಿತ್ರಿಸುತ್ತಾರೆ.

ನಂತರದ ದಿನಗಳಲ್ಲಿ ಅವರ ಉನ್ಮಾದ ಸ್ಥಿತಿಯ, ಖಿನ್ನತೆಯ ಪರಸ್ಪರ ವಿರೋಧಿ ಮನಃಸ್ಥಿತಿಗಳ ಚಿತ್ರಣವನ್ನು ಮನೋವೈದ್ಯರೂ, ಮನೋರೋಗಿಗಳೂ ಓದಲೇಬೇಕು. ಮನೋರೋಗಿಗಳಿಗೆ ಯಾವ ಕಾಯಿಲೆಯೂ ಇಲ್ಲ, ಅದು ಕೇವಲ ಮನಸ್ಸಿನ ದುರ್ಬಲತೆಯಷ್ಟೆ ಎಂದು ಭಾವಿಸುವ ಅಸಂಖ್ಯಾತರಿಗೆ ಜಯ ಹೀಗೆ ಹೇಳುತ್ತಾರೆ: ''ಜಯ ನೋಡಲು ಚೆನ್ನಾಗಿಯೇ ಇದ್ದಾಳೆ. ಜ್ವರ, ಯಾವುದೇ ಖಾಯಿಲೆ ಇಲ್ಲ. ಖಿನ್ನತೆಯಿಂದ ಬಳಲುತ್ತಿದ್ದೇನೆ ಎಂದರೆ ಏನರ್ಥ ? ಅವಳಿಗೆ ದುಃಖ ತರುವಂಥ ಘಟನೆಯೇನೂ ನಡೆದೇ ಇಲ್ಲವಲ್ಲ. ಕುಟುಂಬದಲ್ಲಿ ಯಾರೂ ಮರಣ ಹೊಂದಿಲ್ಲ, ಅಥವಾ ಅವಳ ಗಂಡ ಹಿಂಸಿಸುತ್ತಿಲ್ಲ. ಎಲ್ಲಾ ಸೌಲಭ್ಯಗಳೂ ಇವೆ. ತನಗೆ ಸಂಕಟವಾಗುತ್ತಿದೆ ಅಂದರೆ ಏನರ್ಥ ? ಎನ್ನುವ ಯೋಚನಾ ಧಾಟಿ ಅವರದು. ಅವರೂ ನನ್ನಂತೆ ಮನೋರೋಗವೆಂಬ ಅಗ್ಗಿಷ್ಟಿಕೆಯಲ್ಲಿ ಬೆಂದಿದ್ದರೆ ನನ್ನ ಗೋಳು ಅರ್ಥವಾಗುತ್ತಿತ್ತು .''

ಅವರೇ ಹೇಳುವಂತೆ, ''ಮಾನಸಿಕ ರೋಗಿಗಳು ಮಾನಸಿಕವಾಗಿ ಎಷ್ಟು ಒದ್ದಾಡುತ್ತಾರೆಂದರೆ ಆ ಮನೋವೇದನೆಯನ್ನು ಉಪಶಮನಗೊಳಿಸಲು ಪ್ರೀತಿಯ ಒಂದು ಗುಟುಕಿಗಾಗಿ ಪರಿತಪಿಸುತ್ತಾರೆ. ಹೀಗೆ ಮಮತೆಗಾಗಿ ಪರಿತಪಿಸುವ ನಮಗೆ ಎಲ್ಲರಿಂದ ಸಿಗುವುದು ತಿರಸ್ಕಾರ, ಅವಹೇಳನ, ತಾತ್ಸಾರ ಮತ್ತು ಬೈಗುಳ. ನಮ್ಮ ದೈನ್ಯತನವನ್ನು

ಡಾ|| ಕೆ. ಎಸ್. ಪವಿತ್ರ

ಕಂಡು, ಉತ್ತೇಜಿತರಾದ ಸಂಬಂಧಿಗಳು ನಮ್ಮನ್ನು ಇನ್ನೂ ಕೆಳಮಟ್ಟಕ್ಕೆ ಇಳಿಸುತ್ತಿದ್ದರು. ದೇಹದ ಮೇಲೆ ಗಾಯವಾಗಿದ್ದರೆ ''ಅಯ್ಯೋ ಪಾಪ'' ಎನ್ನುವರು. ಅದಕ್ಕೆ ಚಿಕಿತ್ಸೆ ಮಾಡುವರು, ಆದರೆ ಇದೇ ಜನಕ್ಕೆ ನಮ್ಮ ಮನಸ್ಸಿನ ಗಾಯವನ್ನು ಹೇಗೆ ತೋರಿಸೋಣ ? ನಮ್ಮ ಮನವನ್ನು ಹೇಗೆ ಬಿಚ್ಚಿಡೋಣ ?''

ಮನೋರೋಗದಿಂದ ತಾಯಿ ಬಳಲಿದಾಗ ಮಕ್ಕಳ ಮೇಲೆ, ಕೌಟುಂಬಿಕ ಜೀವನದ ಮೇಲೆ ಅದು ಬೀರುವ ಚಿತ್ರಣವೂ ಇಲ್ಲಿದೆ.

ಕಾದಂಬರಿಯ ಎರಡನೇ ಭಾಗ ಮನೋವೈದ್ಯಕೀಯ ಚಿಕಿತ್ಸೆಗೆ ಸಂಬಂಧಿಸಿದ್ದು. ಮನೋವೈದ್ಯಕೀಯ ಆಸ್ಪತ್ರೆ-ಮನೋವೈದ್ಯರು - ಶುಶ್ರೂಷಕಿಯರ ಬಗೆಗೆ ಇಂದಿನ ಸಿನಿಮಾಗಳಿಗೆ ವಿರುದ್ಧವಾದ ಚೇತೋಹಾರಿಯಾದ ಚಿತ್ರಣ ಈ ಕಾದಂಬರಿಯಲ್ಲಿದೆ. ತಮ್ಮ ರೋಗಿಗಳ ಬಗ್ಗೆ ಕಾಳಜಿವಹಿಸುವ, ಪ್ರಾಮಾಣಿಕವಾಗಿ ದುಡಿಯುವ, ಹಾಸ್ಯಾಸ್ಪದವಲ್ಲದ ಈ ವರ್ಣನೆ ಮನೋವೈದ್ಯರಿಗೂ ಆಶಾವಾದ ತರುತ್ತದೆ. ಜಯ ಬರೆಯುತ್ತಾರೆ, ''ಜನರು ಮಾನಸಿಕ ಆಸ್ಪತ್ರೆಯೆಂದರೆ ಅದೊಂದು ನರಕ ಎಂದು ಭಾವಿಸುತ್ತಾರೆ. ಸಿನಿಮಾಗಳಂತೂ ಮನೋರೋಗಿಗಳನ್ನು ಮೋಜಿನ ವಸ್ತುವಿನಂತೆ ಚಿತ್ರಿಸುತ್ತವೆ. ಮನೋರೋಗಿಗಳು ಮನಬಂದಂತೆ ಮಂಗಚೇಷ್ಟೆಯನ್ನು ಮಾಡುತ್ತ ಸಿಕ್ಕ ಸಿಕ್ಕ ವಸ್ತುಗಳನ್ನು ನಾಶಪಡಿಸುತ್ತಾರೆ ಎಂದು ಸಾರಿ ಸಾರಿ ಹೇಳುತ್ತವೆ. ಹೀಗೆ ಮನೋರೋಗಿಗಳನ್ನು, ಮಾನಸಿಕ ಆಸ್ಪತ್ರೆಗಳನ್ನು ಮನಬಂದಂತೆ ಕೃತಕವಾಗಿ ಚಿತ್ರಿಸುವ ಆ ದೃಶ್ಯಗಳನ್ನು ನೋಡಿದಾಗ ನನಗೆ ನೋವಾಗುತ್ತದೆ. ರಕ್ತ ಕುದಿಯುತ್ತದೆ. ಒಂದು ಮಾತಂತೂ ನಿಜ. ಆಸ್ಪತ್ರೆಯ ವಾತಾವರಣ ಹಾಗೂ ಮನೋರೋಗಿಗಳ ವರ್ತನೆ ಬೆಳ್ಳಿ ತೆರೆಯ ಮೇಲೆ ಮೂಡಿ ಬರುವುದರ ತದ್ವಿರುದ್ಧವಾಗಿರುತ್ತವೆ. ಮನೋರೋಗಿಗಳೇನೂ ಕೋತಿಗಳಂತೆ ಚಿತ್ರವಿಚಿತ್ರವಾಗಿ ವೇಷ ಧರಿಸಿ, ಕುಣಿದಾಡುವುದಿಲ್ಲ, ಕೆಲವೊಮ್ಮೆ ಆಕ್ರಮಣಶೀಲರಾದಾಗ, ಅದೂ ಎಲ್ಲೋ ಒಮ್ಮೊಮ್ಮೆ ಹಾಗೆ ವರ್ತಿಸುತ್ತಾರೆ. ಆಗ ಸೂಕ್ತ ಔಷಧ ನೀಡಿದಲ್ಲಿ ಈ ಬಗೆಯ ವರ್ತನೆ ಶಮನಗೊಳ್ಳುತ್ತದೆ.''

ಮನೋರೋಗಿಗಳನ್ನು ಮನೋವೈದ್ಯಕೀಯ ಸೇವಾ ಘಟಕವು ಶಿಸ್ತಿನಿಂದ, ಪ್ರೀತಿಯಿಂದ ನೋಡಿಕೊಂಡದ್ದನ್ನು ಜಯ ಸ್ಮರಿಸುತ್ತಾರೆ. ಅದರ ನಿಜಾಂಶವು ಮನೋರೋಗಿಗೆ ಮಾತ್ರ ಗೊತ್ತಾಗುವ ಬಗೆಯನ್ನೂ, ಮಾನಸಿಕ ಆಸ್ಪತ್ರೆಯನ್ನು ನೋಡಬಯಸುವ 'ಆರೋಗ್ಯವಂತ' ವ್ಯಕ್ತಿಗೆ ಈ ಸತ್ಯಾಂಶ ಅಗೋಚರ ಎಂಬುದನ್ನೂ ತಿಳಿಸುತ್ತ ಸತ್ಯವನ್ನು ಹೊರತರುವುದು ತನ್ನ ಉದ್ದೇಶ ಎನ್ನುತ್ತಾರೆ. ಅಷ್ಟೇ ಅಲ್ಲ ''ಈಗಲೂ ಜೀವನದ ಸಂಘರ್ಷಗಳಿಂದ ಜರ್ಜರಿತವಾದಾಗ ಮಾನಸಿಕ ಆಸ್ಪತ್ರೆಗೆ ಹೋಗಿ ಇದ್ದುಬಿಡಲು ಆಸೆಯಾಗುತ್ತದೆ. ಅಲ್ಲಿದ್ದರೆ ನನ್ನ ಮನಸ್ಸಿಗೆ



ಶಾಂತಿ ದೊರೆಯುತ್ತದೆ'' ಎನ್ನುತ್ತಾರೆ.

'ಮನೋರೋಗ ಗೆಲ್ಲಬಹುದು' ಎನ್ನುವ ಜಯಾಗೆ ನೆರವಾದದ್ದು ತನ್ನ ನಿಯಮಿತ ಔಷಧ ಸೇವನೆ, ಯೋಚನಾ ವೈಖರಿಯ ಬದಲಾವಣೆ, ಸತತ ಪ್ರಯತ್ನದಿಂದ ಒಂಟಿತನ, ಸೋಮಾರಿತನಗಳನ್ನು ಬಿಟ್ಟಿದ್ದು ಮತ್ತು ಕುಟುಂಬದವರ ಬೆಂಬಲ. ''ನಾನೊಬ್ಬ ಮನೋರೋಗಿ, ನಿಜ. ಆದರೆ ಮನೋರೋಗ ನನ್ನ ಸ್ವಂತ ವಿಷಯ. ಇತರ ಕಾಯಿಲೆಗಳಂತೆ ಮನೋರೋಗವೂ ಒಂದು ಕಾಯಿಲೆ ಎಂದು ಸ್ವೀಕರಿಸಿದ್ದೇನೆ. ಜ್ವರ, ನೆಗಡಿ, ತಲೆನೋವು, ಕೆಮ್ಮು ಇತ್ಯಾದಿಗಳಿಗೆ ಬಲಿಯಾದಾಗ, ನಾವು ವೈದ್ಯರ ಬಳಿ ಚಿಕಿತ್ಸೆ ಪಡೆಯುತ್ತೇವೆ. ಹಾಗೆಯೇ ಮನೋರೋಗಕ್ಕೆ ತುತ್ತಾದ ನಾನು, ನುರಿತ ವೈದ್ಯರಿಂದ ಔಷಧೋಪಚಾರ ಮಾಡಿಸಿಕೊಳ್ಳುತ್ತೇನೆ. ಇದರಲ್ಲಿ ಯಾವ ಲೋಪವೂ ಇಲ್ಲ. ಸಮಾಜ ಮನೋರೋಗದ ಬಗ್ಗೆ ತಿರಸ್ಕಾರದ ಭಾವನೆಯನ್ನು ತಳೆದಿರಬಹುದು. ಹಾಗೆಂದು ಈ ರೋಗಕ್ಕೆ ಬಲಿಯಾದ ನಾನು ಅಪರಾಧಿ ಮನೋಭಾವದಿಂದ ನರಳಬೇಕಾಗಿಲ್ಲ. ಈ ರೋಗವನ್ನು ನಾನು ಬಯಸಿ, ಬಯಸಿ ಪಡೆದಿಲ್ಲ. ಆದ ಕಾರಣ ಈ ರೋಗದ ಬಗ್ಗೆ ನಾನು ನಾಚಿಕೆಪಡಬೇಕಾದ ಮತ್ತು ತಲೆತಗ್ಗಿಸಬೇಕಾದ ಅಗತ್ಯವಿಲ್ಲ. ಸಕ್ಕರೆ ಕಾಯಿಲೆಯಿಂದ ನರಳುವ ರೋಗಿ ತಕ್ಕ ಔಷಧಿಯನ್ನು ತೆಗೆದುಕೊಂಡು ತನ್ನ ಕೆಲಸ ಮುಂದುವರಿಸಬಹುದಾದರೆ, ನಾನೇಕೆ ಅಪಹಾಸ್ಯ, ತಾರತಮ್ಯಗಳನ್ನು ಎದುರಿಸಬೇಕು'' ಎಂಬ ಜಯ ಅವರ ಪ್ರಶ್ನೆ ನಮ್ಮೆಲ್ಲರನ್ನೂ ಚಿಂತನೆಗೆ ಗುರಿಮಾಡುತ್ತದೆ.

ತನ್ನ ಭಾವನೆಗಳನ್ನು ಅಭಿವ್ಯಕ್ತಿಸುವ, ಬೇರೆಯವರ ನೋವು- ನಲಿವುಗಳಿಗೆ ಸ್ಪಂದಿಸುವ ಸಾಮರ್ಥ್ಯ ಮರಳಿ ಬಂದದ್ದನ್ನು ತನ್ನ 'ಮನೋರೋಗವನ್ನು ಗೆದ್ದ' ಸ್ಥಿತಿಯಾಗಿ ಜಯಾ ಗುರುತಿಸುತ್ತಾರೆ, ಮಾತ್ರೆ ಗಳನ್ನು ನಿಲ್ಲಿಸು ವುದನ್ನಲ್ಲ! ಇಂದಿಗೂ ಚಿಕಿತ್ಸೆಯಲ್ಲಿದ್ದು, ತನ್ನ ಕಾಯಿಲೆಯ ಮೇಲೆ ತನ್ನ ಸತತ ಪ್ರಯತ್ನದಿಂದ ಮನೋರೋಗ ಗೆದ್ದ ಸ್ನೇಹಾ (ಜಯ) 'ಧೀಮಂತ ಮಹಿಳೆ' ಎನಿಸುತ್ತಾರೆ.

ಸಾಹಿತ್ಯಕ ದೃಷ್ಟಿಯಿಂದಲೂ, ಸಾಮಾಜಿಕ ದೃಷ್ಟಿಯಿಂದಲೂ, ಮನೋವೈದ್ಯಕೀಯ ದೃಷ್ಟಿಯಿಂದಲೂ ಇದೊಂದು ಮಹತ್ವದ ಕೃತಿ. ಸಮಾಜಮುಖಿಯಾಗಿ, ಸಮಾಜದ ಹಿತವನ್ನು ಉಂಟುಮಾಡುವುದೇ ನಿಜವಾದ ಸಾಹಿತ್ಯ ಎಂಬ ತರ್ಕಕ್ಕೆ ಅನುಗುಣವಾಗಿ ಈ ಧೀಮಂತ ಮಹಿಳಾ ಮನೋರೋಗಿಯ 'ಸಾಹಿತ್ಯ' ಎದ್ದು ನಿಲ್ಲುತ್ತದೆ. ಎಲ್ಲರೂ ಓದಲೇಬೇಕಾದ ಕೃತಿ ಇದು.

**ಡಾ|| ಕೆ. ಎಸ್. ಪವಿತ್ರ**
ಶ್ರೀಧರ್ ನರ್ಸಿಂಗ್ ಹೋಮ್
ರಾಜೇಂದ್ರನಗರ, ಶಿವಮೊಗ್ಗ - ೫೭೭ ೨೦೪

*(೫೪ನೇ ಪುಟದಿಂದ)*

ಸೆಕೆಂಡ್‌ಗಳು ಪ್ರಕೃತಿಯಲ್ಲಿ ಸ್ಥಿರವಾಗಿರುವ ಪರಿಮಾಣ-ಪರಿಕಲ್ಪನೆಗಳನ್ನು ಅವಲಂಬಿಸಿವೆ. ಆದ್ದರಿಂದ ಅವು ಬದಲಾಗುವ ಸನ್ನಿವೇಶವೇ ಬರುವುದಿಲ್ಲ.

ಆದರೆ ಮನುಷ್ಯ ನಿರ್ಮಿಸಿದ ಲೋಹಗಟ್ಟಿಯನ್ನು ಅವಲಂಬಿಸಿ ಕಿಲೊಗ್ರಾಮ್ ರಾಶಿ ಇದೆ. ನ್ಯೂಟನ್ (ಬಲ), ಪಾಸ್ಕಲ್ (ಒತ್ತಡ), ಆಂಪೇರ್ (ವಿದ್ಯುತ್ ಪ್ರವಾಹ) – ಇಂಥ ಹಲವು ಮಾನಗಳು ಕಿಲೊಗ್ರಾಮನ್ನು ಅವಲಂಬಿಸಿವೆ. ಇದರಿಂದ ಕಿಲೊಗ್ರಾಮ್ ಮಾತೃಕೆಯಲ್ಲಿ ನುಸುಳುವ ಯಾವುದೇ ದೋಷ ವ್ಯಾಪಕವಾಗಿ ಹರಡುತ್ತದೆ.

**ಸ್ಥಿರವಾದ ಕಿಲೊಗ್ರಾಮ್ ಕಡೆಗೆ:** ತೂಕಅಳತೆಗಳಿಗೆ ಸಂಬಂಧಿಸಿ ಅಂತರರಾಷ್ಟ್ರೀಯ ಬ್ಯೂರೊ, ಅಂತರರಾಷ್ಟ್ರೀಯ ಸಮಿತಿ, ಸಾಮಾನ್ಯ ಅಧಿವೇಶನ – ಇವು ಮೂರೂ ಕೆಲಸ ಮಾಡುತ್ತವೆ. ಕಿಲೊಗ್ರಾಮಿನ ಸ್ಥಿರತೆಗಾಗಿ ಪ್ರಕೃತಿಯ ಯಾವುದಾದರೂ ಸ್ಥಿರಾಂಕವನ್ನು ಅವಲಂಬಿಸಿದ ಕಿಲೊಗ್ರಾಮನ್ನು ರೂಪಿಸುವ ಅಗತ್ಯವನ್ನು ೧೯೯೯ರಲ್ಲಿ ನಡೆದ ತೂಕಅಳತೆಗಳ ಸಾಮಾನ್ಯ ಅಧಿವೇಶನದಲ್ಲಿ ವ್ಯಕ್ತಪಡಿಸಲಾಯಿತು. ಅನಂತರ ಈ ಪ್ರಮೇಯ ಆಗಾಗ ಚರ್ಚೆಗೆ ಬಂತು. ಕಳೆದ ಜನವರಿಯಲ್ಲಿ (೨೦೧೧) ಇಂಗ್ಲಂಡಿನ ರಾಯಲ್ ಸೊಸೈಟಿ ಸಭೆಯಲ್ಲಿ ಮನುಷ್ಯ ರಚಿಸಿದ ಮಾತೃಕೆಯ ಬದಲು ಎಲ್ಲರಿಗೂ ಸಿಗಬಹುದಾದ, ಪ್ರಕೃತಿಯ ಸ್ಥಿರಾಂಕವೊಂದನ್ನು ಅವಲಂಬಿಸಿದ ಕಿಲೊಗ್ರಾಮಿನ ದೀರ್ಘಕಾಲೀನ ಅನುಕೂಲವನ್ನು ಸದಸ್ಯರು ಎತ್ತಿ ಹಿಡಿದರು.

ವಿಕಿರಣದ ಆವೃತ್ತಿಯನ್ನು ಪ್ಲಾಂಕ್ ಸ್ಥಿರಾಂಕದಿಂದ ಗುಣಿಸಿದಾಗ ಫೋಟಾನ್ (ಅಂದರೆ ವಿಕಿರಣ ಶಕ್ತಿಯನ್ನೊಳಗೊಂಡ ಕಣ) ನಲ್ಲಿರುವ ಶಕ್ತಿ ಸಿಗುತ್ತದೆ. ಸದ್ಯದ ನಮ್ಮ ತಿಳಿವಿನಲ್ಲಿ ಪ್ಲಾಂಕ್ ಸ್ಥಿರಾಂಕ ಎಂದಿಗೂ ಎಲ್ಲೂ ಬದಲಾಗುವುದಿಲ್ಲ. 'ವಾಟ್ ತ್ರಾಸು' ಎಂಬ ಸೂಕ್ಷ್ಮ ಸಾಧನದ ಸಹಾಯದಿಂದ ಪ್ಲಾಂಕ್ ಸ್ಥಿರಾಂಕವನ್ನು ಅವಲಂಬಿಸಿದ ಕಿಲೊಗ್ರಾಮನ್ನು ನಿರೂಪಿಸಲು ತೂಕ ಅಳತೆಯ ಪರಿಣತರು ಪ್ರಯತ್ನಿಸುತ್ತಿದ್ದಾರೆ. ಎಷ್ಟೇ ಕಾಲ ಕಳೆದರೂ ಅಬಾಧಿತವಾದ ಕಿಲೊಗ್ರಾಮನ್ನು ಪಡೆಯಲು ನೋಡುತ್ತಿರುವ ಹಲವು ದಾರಿಗಳಲ್ಲಿ ಇದೂ ಒಂದು. ೨೦೧೫ನೇ ವರ್ಷದೊಳಗೆ ಕಿಲೊಗ್ರಾಮ್ ಅಸ್ಥಿರತೆಗೊಂದು ಪರಿಹಾರ ನಿರ್ಣಾಯಕ ಹಂತವನ್ನು ತಲಪಬಹುದು.

**ಪ್ರೊ|| ಅಡ್ಯನಡ್ಕ ಕೃಷ್ಣಭಟ್**
'ಸಾರಸ', ನಂ. ೨೫೦೧, ೨ನೇ ಕ್ರಾಸ್, ವಿಜಯನಗರ ೨ನೇ ಹಂತ, ಮೈಸೂರು - ೫೭೦ ೦೧೭

ಶ್ರೀನಿವಾಸ ಜೋಕಟ್ಟೆ...

# ರಾಜಸ್ಥಾನದ 'ಸಾಂಸ್ಕೃತಿಕ ರಾಜಧಾನಿ' ಅಜ್ಮೇರ್

ಅರಾವಳಿ ಪರ್ವತ ಸರಣಿಯ ನಡುವೆ ಇರುವ ಅಜ್ಮೇರ್ ರಾಜಸ್ಥಾನದ 'ಸಾಂಸ್ಕೃತಿಕ ರಾಜಧಾನಿ' ಎಂಬ ಹೆಗ್ಗಳಿಕೆಯನ್ನು ಪಡೆದಿದೆ. ಇದರ ನಿರ್ಮಾಣ ಮಾಡಿದವ ರಾಜಾ ಅಜಯ್‌ಪಾಲ್ ಚೌಹಾಣ್ ಎಂಬಾತ. (೭ನೇ ಶತಾಬ್ದಿ). ಆರಂಭದಲ್ಲಿ ಚೌಹಾಣ್ ರಜಪೂತರಿದ್ದರೆ, ಅನಂತರ ಮೊಗಲರು, ಮರಾಠರು, ರಾಠೋಡರು, ಬ್ರಿಟಿಷರು ಬಂದರು. ಇವರೆಲ್ಲ ಇಲ್ಲಿ ಐತಿಹಾಸಿಕ ಕಟ್ಟಡಗಳನ್ನು ನಿರ್ಮಾಣ ಮಾಡಿದರು. ಎಲ್ಲಾ ಧರ್ಮದವರ ಉತ್ಸವಗಳನ್ನೂ ಇಲ್ಲಿ ಉಲ್ಲಾಸದಿಂದ ಆಚರಿಸುತ್ತಾರೆ.

ತ್ರಿಭುಜಾಕಾರ ಆಕೃತಿಯ ಅಜ್ಮೇರ್ ಮಾರ್‌ವಾಡ ಪರ್ಯಟನೆಯಲ್ಲಿ ಪ್ರಮುಖ ಭಾಗವೂ ಆಗಿದೆ. ಸಮುದ್ರ ಮಟ್ಟದಿಂದ ಇದು ಸುಮಾರು ೧,೩೦೦ ಅಡಿ ಎತ್ತರದಲ್ಲಿದೆ. ಶಹರದ ನಾಲ್ಕೂ ಕಡೆಗಳಲ್ಲಿ ಅರಾವಳಿ ಬೆಟ್ಟಗಳು. ಇದರಲ್ಲಿ ತಾರಾಗಢ್, ಮದಾರ್, ಗಣೇಶ್‌ಗಢ್, ಬಜ್‌ರಂಗ್‌ಗಢ್, ಚಿಲ್ಲಾ ಮತ್ತು ಬಾಬುಗಢ್ ಹೆಸರಿನ ಶಿಖರಗಳು ಪ್ರಮುಖವಾದುವು.

ರಾಜಸ್ಥಾನದ ಕೇಂದ್ರದಲ್ಲಿರುವ ಅಜ್ಮೇರ್ ಜೈಪುರದಿಂದ ಪಶ್ಚಿಮದ ಕಡೆ ಸುಮಾರು ೧೩೦ ಕಿ.ಮೀ. ದೂರದಲ್ಲಿದೆ. ಅಜ್ಮೇರ್ ಆರಂಭದಿಂದಲೂ ಬಹಳಷ್ಟು ಶಕ್ತಿಶಾಲಿ ಶಾಸಕರನ್ನು ಹೊಂದಿದ್ದು ಹಿಂದೂ ಮುಸ್ಲಿಂ ಏಕತೆ, ಕೋಮು ಸೌಹಾರ್ದತೆಗೆ ಸುಂದರ ಉದಾಹರಣೆಯಾಗಿದೆ.

ಅಜ್ಮೇರ್‌ನ ಇತಿಹಾಸ ಕೆದಕಿದರೆ ಕ್ರಿ.ಶ. ೧೧೯೩ರ ತನಕ ಇಲ್ಲಿ ಚೌಹಾಣ್ ರಜಪೂತ ಅರಸರ ಪ್ರಭುತ್ವವಿತ್ತು. ಮುಂದೆ ಮೊಹ್ಮದ್ ಗೋರಿ ಇದನ್ನು ಪೃಥ್ವಿರಾಜ್ ಚೌಹಾಣ್‌ನಿಂದ ಗೆದ್ದುಕೊಂಡ. ಅನಂತರ ಹಲವಾರು ಅರಸರು ಆಳಿದ್ದು, ವಿಭಿನ್ನ ಸಂಸ್ಕೃತಿಗಳು ಇಲ್ಲಿ ಅರಳುವಂತಾಯಿತು.

ಜೈಪುರ ಸೂಪರ್ ಹೈವೇನಲ್ಲಿ ಇರುವ ಕಾರಣ ಅಜ್ಮೇರ್‌ಗೆ ತಲುಪಲು ರೈಲು, ಬಸ್ಸು ಸೌಲಭ್ಯಗಳಿವೆ. ರಾಜಸ್ಥಾನದ ಹೃದಯ ಸ್ಥಳವಾದ ಅಜ್ಮೇರ್ ಖ್ವಾಜಾ ಮೊಯಿನುದ್ದೀನ್ ಸಾಹಬ್ ಚಿಶ್ತಿ ದರ್ಗಾದಿಂದಾಗಿ ವಿಶ್ವಖ್ಯಾತಿ ಪಡೆದಿದೆ.

**ಖ್ವಾಜಾ ಸಾಹೆಬ್ ದರ್ಗಾ :** ಸೂಫಿ ಸಂತ ಖ್ವಾಜಾ ಮೊಯಿನುದ್ದೀನ್ ಚಿಶ್ತಿಯ ದರ್ಗಾ ಮೆಕ್ಕಾನಂತರ ಮುಸ್ಲಿಮರಿಗೆ ಎರಡನೇ ಪ್ರಮುಖ ತೀರ್ಥಕ್ಷೇತ್ರ ಎನ್ನುತ್ತಾರೆ. ಈ ದರ್ಗಾದ ನಿರ್ಮಾಣದ ಕಾರ್ಯ ಶಂಸುದ್ದೀನ್ ಅಲ್ತ್‌ಮಶ್‌ನ ಆಳ್ವಿಕೆಯಲ್ಲಿ (೧೨೧೧-೧೨೩೬) ಆರಂಭಗೊಂಡಿತ್ತು. ಹಾಗೂ ೧೬ನೇ ಶತಾಬ್ದಿಯ ಆರಂಭದಲ್ಲಿ ಮೊಗಲ್ ಸಾಮ್ರಾಟ ಹುಮಾಯೂನ್‌ನ ಕಾಲದಲ್ಲಿ ಪೂರ್ಣಗೊಂಡಿತು. ದರ್ಗಾ ಶರೀಫ್‌ನ ಮುಖ್ಯ ಬಾಗಿಲು 'ನಿಜಾಮ್ ಗೇಟ್'ಅನ್ನು ಹೈದರಾಬಾದ್ ದಖ್ಖನ್‌ನ ನವಾಬ್ ಮೀರ್ ಉಸ್ಮಾನ್ ಅಲೀಖಾನ್ ೧೯೧೧ರಲ್ಲಿ ನಿರ್ಮಿಸಿದ.

ನಿಜಾಮ ಗೇಟ್‌ನ ನಂತರ 'ಶಹಜಹಾಂನಿ ದರ್‌ವಾಜಾ' ಬರುತ್ತದೆ. ಇದನ್ನು ಶಹಜಹಾನ್ ನಿರ್ಮಿಸಿದ್ದಾನೆ. ಅನಂತರ ವಿಶಾಲ 'ಬುಲಂದ್ ದರ್‌ವಾಜಾ' ಸಿಗುತ್ತದೆ. ಮಹಮೂದ್ ಖಿಲ್ಜಿ ಇದರ ನಿರ್ಮಾಣಕಾರ. ಇದು ೮೫ ಅಡಿ ಎತ್ತರವಿದೆ. ಬುಲಂದ್ ದರ್‌ವಾಜಾದ ಎರಡೂ ಕಡೆ ೨ ವಿಶಾಲ ಪಾತ್ರೆಗಳಿವೆ. ಇದು ಅಕ್ಬರ್‌ನ ಉಡುಗೊರೆ. ಉರುಸ್ ಸಮಯ ಇದರಲ್ಲಿ ಅಕ್ಕಿಯ ಸ್ವಾದಿಷ್ಟ ವ್ಯಂಜನವನ್ನು ತಯಾರಿಸಲಾಗುತ್ತದೆ.

ದರ್ಗಾದ ಮುಖ್ಯದ್ವಾರ ಬಿಳಿ ಮಾರ್ಬಲ್‌ನದ್ದು. ಇದರ ಮೇಲೆ ಆಕರ್ಷಕ ಗುಂಬಜ್ ಇದೆ. ಅದರಲ್ಲಿ ವಿವಿಧ ನಕ್ಷೆಗಳಿವೆ. ಇದನ್ನು ಸುಲ್ತಾನ್ ಮಹಮೂದ್ ಬಿನ್ ನಸಿರುದ್ದೀನ್‌ನ ಕಾಲದಲ್ಲಿ ಚಿತ್ರಿಸಲಾಗಿತ್ತು.

ದರ್ಗಾದ ಒಂದು ಪ್ರಮುಖ ಸ್ಥಳವೆಂದರೆ ಮಹಫಿಲ್ ಖಾನಾ. ಇಲ್ಲಿ ಉರುಸ್ ದಿನ ಕವ್ವಾಲಿಗಳನ್ನು ಹೇಳಲಾಗುವುದು. ೧೦೮ ವರ್ಷದ ಹಿಂದೆ ಹೈದರಾಬಾದ್‌ನ ನವಾಬ್ ಬಶೀರ್‌ದೌಲಾ ನಿರ್ಮಾಣ ಮಾಡಿದ್ದಾನೆ. ಅದೇ ರೀತಿ ಮೊಗಲ್ ಬಾದ್‌ಶಾಹ

ಅಜ್ಮೇರ್ ದರ್ಗಾ ಎದುರು
ಪತ್ನಿಯೊಂದಿಗೆ ಲೇಖಕರು

**ಮುಸ್ಲಿಮರ ಪವಿತ್ರ ತೀರ್ಥಸ್ಥಳ ಮೆಕ್ಕಾದ ನಂತರದ ಸ್ಥಾನ ರಾಜಸ್ಥಾನದ ಅಜ್ಮೇರ್‌ನಲ್ಲಿರುವ ಸೂಫಿ ಸಂತ ಖ್ವಾಜಾ ಮೊಯಿನುದ್ದೀನ್ ಚಿಶ್ತಿಯ ದರ್ಗಾಕ್ಕೆ ಸಲ್ಲುತ್ತದೆ. ಅಜ್ಮೇರ್ ಅರಾವಳಿ ಪರ್ವತದಿಂದ ಸುತ್ತುವರಿದಿದೆ. ನಾಗಾ ಪರ್ವತ ಇದನ್ನು ಪುಷ್ಕರ್‌ದಿಂದ ಬೇರ್ಪಡಿಸುತ್ತದೆ. ಇದು ತ್ರಿಭುಜಾಕಾರ ಆಕೃತಿಯಲ್ಲಿದ್ದು ಮಾರವಾಡ ಪರ್ಯಟನೆಯಲ್ಲಿ ಪ್ರಮುಖ ಭಾಗವನ್ನು ಹೊಂದಿದೆ. ಅಜ್ಮೇರ್‌ಅನ್ನು ರಾಜಸ್ಥಾನದ 'ಸಾಂಸ್ಕೃತಿಕ ರಾಜಧಾನಿ' ಎಂದೂ ಕರೆಯುತ್ತಾರೆ. ರಾಜಾ ಅಜಯ್‌ಪಾಲ್ ಚೌಹಾಣ್ ೭ನೇ ಶತಾಬ್ದಿಯಲ್ಲಿ ಈ ಶಹರನ್ನು ನಿರ್ಮಾಣ ಮಾಡಿದ. ಆನಾಸಾಗರ್ ಸರೋವರ, ಸೋನೀಜಿ ಕಿ ನಸಿಯಾಂ, ತಾರಾಗಢ್, ಅಢಾಯಿ ದಿನ್ ಕಾ ಝೋಪ್ಡಾ... ಇತ್ಯಾದಿ ಪ್ರವಾಸಿ ತಾಣಗಳನ್ನು ಇಲ್ಲಿ ವೀಕ್ಷಿಸಬಹುದು. ರಾಜಸ್ಥಾನದಲ್ಲಿ ಕೋಮುಗಲಭೆಗಳು ಬಹಳ ಅಪರೂಪ. ೯೨ರ ಬಾಬ್ರಿ ಮಸೀದಿ ಗಲಾಟೆಯಲ್ಲೂ ಇಲ್ಲಿ ಹಿಂದೂ-ಮುಸ್ಲಿಂ ಎರಡೂ ಕೋಮಿನ ಜನರು ಶಾಂತಿಯಿಂದ ವರ್ತಿಸಿದ್ದರು.**



ಪುಷ್ಕರಕ್ಕೆ ಹೋಗುವ ದಾರಿಯಲ್ಲಿ ಲೇಖಕರು

ರಾಜಸ್ಥಾನಿ ಸಂಗೀತಗಾರರು

ಶಹಜಹಾನ್ ಮಜ್ರಾ ಶರೀಫ್‌ನ ಪಶ್ಚಿಮದಲ್ಲಿ ಜಾಮಾ ಮಸ್ಜೀದ್ ನಿರ್ಮಿಸಿದ.

ಖ್ವಾಜಾ ಸಾಹಬ್ ಮೊಯಿನುದ್ದೀನ್ ಚಿಶ್ತಿಯ ದರ್ಗಾದೊಳಗೆ ಟೋಪಿ ಅಥವಾ ಕರವಸ್ತ್ರ ಕಟ್ಟಿಯೇ ಒಳಗೆ ಹೋಗಬೇಕು. ಕ್ಯಾಮೆರಾ, ಮೊಬೈಲ್ ಕೊಂಡೊಯ್ಯುವಂತಿಲ್ಲ. ಅಕ್ಟೋಬರ್ ೧೧, ೨೦೦೭ರಲ್ಲಿ ಬಾಂಬ್‌ಸ್ಫೋಟ ನಡೆದ ಕಾರಣ ಪರಿಸರದಲ್ಲಿ ಛಾಯಾಚಿತ್ರ ತೆಗೆಯಲು ನಿಷೇಧವಿದೆ.

ಕ್ರಿ.ಶ. ೧೧೬೨ರಲ್ಲಿ ಇಲ್ಲಿಗೆ ಖ್ವಾಜಾ ಸಾಹಬ್ ಇರಾನ್ ದೇಶದಿಂದ ಬಂದವರು – ಅಜ್ಮೇರ್‌ದಲ್ಲೇ ಉಳಿದುಕೊಂಡಿದ್ದು, ಮುಂದೆ ಇವರನ್ನು ಇಲ್ಲೇ ದಫನ್ ಮಾಡಿದರು. ಮಾಂಡೂನ ಸುಲ್ತಾನ್ ಗಯಾಸುದ್ದೀನ್ ಖಿಲ್ಜಿ ೧೪೬೪ರಲ್ಲಿ ಇಲ್ಲಿ ದರ್ಗಾ ಮತ್ತು ಗುಂಬಜ್ ನಿರ್ಮಿಸಿದ. ಇದು ಅಕ್ಬರ್‌ನ ಕಾಲದಲ್ಲಿ ಪ್ರಸಿದ್ಧಿಯಾಗಿತ್ತು. ರೈಲ್ವೆ ಸ್ಟೇಷನ್‌ನಿಂದ ಇದು ೩ ಕಿ.ಮೀ. ದೂರದಲ್ಲಿದೆ. (ಹಿಂದೂಗಳ ಇತರ ತೀರ್ಥಕ್ಷೇತ್ರಗಳಲ್ಲಿದ್ದಂತೆ ಇಲ್ಲಿಯೂ ದರ್ಗಾದ ಒಳಗಡೆ 'ದಕ್ಷಿಣೆ' ಕೇಳುವವರ ಕಾಟ ವಿಪರೀತ!) ಅಜ್ಮೇರ್‌ದಲ್ಲಿ ಪ್ರವಾಸಿಗರಿಗೆ ವೀಕ್ಷಿಸಲು ಇನ್ನೂ ಹಲವಾರು ತಾಣಗಳಿವೆ. ದರ್ಗಾದಿಂದ ೩ ಕಿ.ಮೀ. ದೂರದಲ್ಲಿ 'ತಾರಾಗಢ್ ಕೋಟೆ' ಇದೆ. ಪೃಥ್ವಿರಾಜ್ ಚೌಹಾಣ್ ಸ್ಮಾರಕದ ಮುಂದೆ ಬೆಟ್ಟದಲ್ಲಿ (೨೮೫೫ ಅಡಿ ಎತ್ತರ) ತಾರಾಗಢ್ ಕೋಟೆ ಇದ್ದರೂ ಈಗ ಕೇವಲ ಹೆಸರಿಗೆ ಮಾತ್ರ ಉಳಿದಿದೆ. ೭ ನೀರಿನ ಕೊಳ (ಕುಂಡ) ಇದ್ದರೂ ಈಗ ನೀರಿಲ್ಲ. ಇಲ್ಲಿಂದ ಶಹರ ಸುಂದರವಾಗಿ ಕಾಣುತ್ತದೆ.

**ಆನಾ ಸಾಗರ್ ಸರೋವರ:** ಶಹರದ ನಡುವಿನ ಈ ಸರೋವರ ರಮಣೀಯ ತಾಣವಾಗಿದೆ. ಇದನ್ನು ಸಾಮ್ರಾಟ ಪೃಥ್ವಿರಾಜ್ ಚೌಹಾಣ್‌ನ ತಂದೆ ರಾಜಾ ಅರಣೋರಾಜ (ಅನ್ನಾಜಿ) ಕ್ರಿ.ಶ. ೧೧೩೫-೫೦ರಲ್ಲಿ ನಿರ್ಮಿಸಿದ. ನಂತರ ಮೊಗಲ ಅರಸ ಜಹಾಂಗೀರ್ ಈ ತೀರದಲ್ಲಿ ಒಂದು ಶಾಹಿಬಾಗ್‌ಅನ್ನು ನಿರ್ಮಿಸಿದ. ಇದನ್ನು ಇಂದು ದೌಲತಾಬಾಗ್ ಮತ್ತು ಸುಭಾಷ್ ಉದ್ಯಾನ್ ಎಂದು ಕರೆಯುತ್ತಾರೆ. ಕಲಾಪ್ರೇಮಿ ಶಹಜಹಾನ್ ಸರೋವರದ ಬಳಿ ೫ ಪೆವಿಲಿಯನ್‌ಗಳನ್ನು ನಿರ್ಮಿಸಿದ್ದು ಇಲ್ಲಿನ ಬೋಟಿಂಗ್ ಸೌಲಭ್ಯ ಪ್ರವಾಸಿಗರನ್ನು ಸೆಳೆಯುವಂತಿದೆ.

**ಸೋನಿ ಜೀ ಕಿ ನಸಿಯಾಂ:** ಕ್ರಿ.ಶ. ೧೮೬೫ರಲ್ಲಿ ಇದನ್ನು ಸೇಠ್ ಮೂಲ್‌ಚಂದ್ ಸೋನಿ ನಿರ್ಮಿಸಿದ. ಕೆಂಪು ಕಲ್ಲಿನಲ್ಲಿ ನಿರ್ಮಿಸಲಾಗಿರುವ ಈ ಮಂದಿರ ಶಹರದ ನಡುವೆ ಇದೆ. ಇಲ್ಲಿ ಜೈನ ತೀರ್ಥಂಕರ ಆದಿನಾಥರ ಮಂದಿರವಿದೆ. ವೃಷಭದೇವನ ಮಂದಿರವೂ ಇದ್ದು, ಹಿಂಬದಿಯಲ್ಲಿ ದೊಡ್ಡ ಹಾಲ್ ಇದೆ. ಇದರೊಳಗೆ ಚಿನ್ನದ ಲೇಪನದಲ್ಲಿ ಜೈನ ವಿಚಾರ ಧಾರೆಗಳ ಸೃಷ್ಟಿಯ ರಚನೆಗಳಿವೆ. ಇನ್ನೊಂದು ಭಾಗದಲ್ಲಿ ಅಯೋಧ್ಯಾ ನಗರದ ಚಿತ್ರಣವಿದೆ.

**ರಾಜಕೀಯ ಸಂಗ್ರಹಾಲಯ 'ಮ್ಯಾಗ್ಜೀನ್' :** ಇದು ಅಜ್ಮೇರಾ ಸ್ಟೇಷನ್‌ನಿಂದ ಒಂದೂವರೆ ಕಿ.ಮೀ. ದೂರದಲ್ಲಿ ಬಜಾರ್‌ನಲ್ಲಿದೆ. ಇಲ್ಲಿ ಪ್ರಾಚೀನ ಮೂರ್ತಿಗಳು, ಶಿಲಾಲೇಖನಗಳು, ಶಸ್ತ್ರಗಳು, ಪೇಂಟಿಂಗ್ಸ್, ನಾಣ್ಯಗಳು, ರಾಜರ ಕವಚಗಳು ಮುಂತಾದುವು ಇವೆ. ೧೯೦೮ರಿಂದೀಚೆಗೆ ಇದನ್ನು ರಾಜಕೀಯ ಸಂಗ್ರಹಾಲಯ ಎಂದು ಗುರುತಿಸಲಾಗಿದೆ.

**ಅಢಾಯಿ ದಿನ್ ಕಾ ಝೋಪ್ಡಾ:** ತಾರಾಗಢ್ ಬೆಟ್ಟದ ತೀರದಲ್ಲಿ ಖ್ವಾಜಾ ದರ್ಗಾಕ್ಕೆ ಸ್ವಲ್ಪ ದೂರದಲ್ಲಿ ಹಿಂದೂ ಮುಸ್ಲಿಮ್ ಸ್ಥಾಪತ್ಯ ಕಲೆಯನ್ನು ಪ್ರತಿನಿಧಿಸುವ 'ಅಢಾಯಿ ದಿನ್ ಕಾ ಝೋಪ್ಡಾ' ಎಂಬ ಕಟ್ಟಡ ಇದೆ. ಪ್ರಥಮ ಚೌಹಾಣ್ ಸಾಮ್ರಾಟ ಬಿಸ್ಲದೇವ ಕ್ರಿ.ಶ. ೧೧೫೩ರಲ್ಲಿ ಸಂಸ್ಕೃತ ಪಾಠಶಾಲೆಯನ್ನು ಕಟ್ಟಿಸಿದ್ದ. ಮಹ್ಮದ್ ಗೋರಿ ೧೧೯೨ರಲ್ಲಿ ಅಜ್ಮೇರಾವನ್ನು ಆಕ್ರಮಿಸಿಕೊಂಡಾಗ ಇದನ್ನು ಮಸೀದಿಯಾಗಿ ಪರಿವರ್ತಿಸಿದನೆಂದು ಹೇಳಲಾಗುತ್ತದೆ. ಅರಬೀ ನಾಗರಿ ಸೂಫೀ ಲಿಪಿಯ ಬರಹಗಳೂ ಇಲ್ಲಿವೆ. ಫಕೀರ್ ಪಂಜಾಬ್ ಶಾಹ ಎಂಬ ಮುಸಲ್ಮಾನ ಇಲ್ಲಿ ಎರಡೂವರೆ ದಿನಗಳ ಉರುಸ್ ಆಚರಿಸುತ್ತಿದ್ದ ಕಾರಣ ಇದನ್ನು 'ಅಢಾಯಿ ದಿನ್ ಕಾ ಝೋಪ್ಡಾ' ಎಂದು ಕರೆಯುತ್ತಾರೆ. ಇತರ ಮೂಲಗಳು ಹೇಳುವಂತೆ ಕ್ರಿ.ಶ. ೧೧೯೮ರಲ್ಲಿ ಮಹ್ಮದ್ ಗೋರಿ ಈ ಸಂಸ್ಕೃತ ಪಾಠಶಾಲೆಯನ್ನು ಎರಡೂವರೆ ದಿನಗಳಲ್ಲಿ ಕೆಡವಿದ್ದರಿಂದ 'ಅಢಾಯಿ ದಿನ್ ಕಾ ಝೋಪ್ಡಾ' ಎಂಬ ಹೆಸರು ಬಂದಿರುವ ಸಾಧ್ಯತೆಗಳಿವೆಯಂತೆ. ಅದೇ ರೀತಿ 'ಮೇಯೋ ಕಾಲಿಜ್', ಪಿಕ್ನಿಕ್ ಸ್ಥಳ, ಬಾಂದಿ ನದಿಯ ನೀರನ್ನು ತಡೆದು ನಿರ್ಮಿಸಿದ ಜಲಾಶಯ 'ಫೌಯಾ ಸಾಗರ್' ಇವುಗಳನ್ನೂ ವೀಕ್ಷಿಸಬೇಕು.

ಅಜ್ಮೇರ್ ಮತ್ತು ಪುಷ್ಕರವನ್ನು ನಾಗಾ ಬೆಟ್ಟಗಳು ಬೇರ್ಪಡಿಸಿವೆ.

ಅಜ್ಮೇರ್‌ಗೆ ಸಮೀಪದ ವಿಮಾನ ನಿಲ್ದಾಣವೆಂದರೆ ೧೩೮ ಕಿ.ಮೀ. ದೂರದಲ್ಲಿರುವ ಜೈಪುರದ ಸಾಂಗಾನೆರ್. ದೆಹಲಿ, ಮುಂಬಯಿ, ಬೆಂಗಳೂರು ಮುಂತಾದ ನಗರಗಳಿಂದ ರೈಲು ಸಂಪರ್ಕವೂ ಇದೆ. ಇಲ್ಲಿಗೆ ಬರಲು ಅಕ್ಟೋಬರ್-ಮಾರ್ಚ್ ಉತ್ತಮ ಕಾಲ. ಬೇಸಿಗೆಯಲ್ಲಿ ಹವಾಮಾನ ೩೫ರಿಂದ ४೫ ಡಿಗ್ರಿ ಸೆಲ್ಸಿಯಸ್ ಇದ್ದರೆ ಚಳಿಗಾಲದಲ್ಲಿ ೬ರಿಂದ ೨೨ ತನಕ ಇರುತ್ತದೆ. ಖರೀದಿ ಪ್ರಿಯರಿಗೆ ನಯಾಬಜಾರ್, ದರ್ಗಾ ಬಜಾರ್, ಮದಾರ್ ಗೇಟ್, ಸ್ಟೇಷನ್ ರೋಡ್ ಬಜಾರ್, ಕೇಸರ್ ಗಂಜ್ ಬಜಾರ್, ಕಚ್‌ಹರೀ ರೋಡ ಬಜಾರ್... ಇವೆಲ್ಲ ಪ್ರಖ್ಯಾತ.

**ಶ್ರೀನಿವಾಸ ಜೋಕಟ್ಟೆ**
ಪತ್ರಕರ್ತರು, ಎವರ್‌ಶೈನ್ ತುಲೀಪ್, ಬಿಲ್ಡಿಂಗ್ ನಂ. ೧೭೧, ಪ್ಲಾಟ್ ನಂ. ೩೦೨, ಅವೆನ್ಯೂ ಫೇಸ್-೨
ಸೆಕ್ಟರ್-೬, ಎವರ್‌ಶೈನ್ ಸಿಟಿ, ವಾಸೈ (ಪೂರ್ವ), ಥಾಣೆ ಜಿಲ್ಲೆ (ಮಹಾರಾಷ್ಟ್ರ), ಪಿನ್ - ४೦೧ ೨೦೮



ರಾಜಸ್ಥಾನಿ ಶೈಲಿಯ ಮಣ್ಣಿನ ಮಡಿಕೆಗಳು

ಅಜ್ಮೇರ್ ದರ್ಗಾ ಪ್ರವೇಶದ್ವಾರ

ಅಜ್ಮೇರ್‌ನಲ್ಲಿನ ಸೋನಿ ಮಂದಿರ




ಕುಬಾಳ ಜಗದೀಶ್

**ಪ್ಪೋ**ರಂ ಸಿಗ್ನಲ್‌ನಲ್ಲಿ ಹಸಿರು ದೀಪ ಹೊತ್ತುತ್ತಿದ್ದಂತೆ ಆಟೋ ಸ್ಟಾರ್ಟ್ ಮಾಡಲೆಂದು ನಾ ಬಗ್ಗಿದೆ. ''ಮಗಿಗೆ ಹಾಲು ಕುಡಿಸ್ಬೇಕು ಒಂದು ರೂಪಾಯಿ ಇದ್ರೆ ಕೋಡಕ್ಕೊ ?'' ಅಂದ.

ಭಿಕ್ಷುಕಿಯ ದನಿಯನ್ನು ಒಂದು ವಾರವಾದ್ರೂ ನನ್ನಿಂದ ಮರೆಯಲಾಗಲಿಲ್ಲ. ಇಷ್ಟೆಲ್ಲ ನನ್ನನ್ನು ಹಿಂಸಿಸಿರುವ ಆ ದನಿ ಯಾರದ್ದು ?

ಮರೆಯೋಣವೆಂದ್ರೂ ಮರೆಯಲಾಗುತ್ತಿಲ್ಲ. ಯಾಕೆ ?

ಆಕೆ ದನಿ ನನ್ನ ತಾಯಿಯ ಧ್ವನಿಯೇ ? ಅದು ಸಾಧ್ಯವಿಲ್ಲ. ನನ್ನ ಹೆತ್ತ ತಾಯಿ ನನ್ನ ಹೆತ್ತ ಮರುಕ್ಷಣವೇ ಕಣ್ಣುಮುಚ್ಚಿದ್ದಳು. ನನ್ನಪ್ಪ ಮನೆಯಲ್ಲಿದ್ದ ರಾಸುಗಳ ಮೊಲೆ ಹಿಂಡಿ ಹಾಲು ಕುಡಿಸಿ ನನ್ನ ಬೆಳೆಸಿದ್ದ. ನನಗೆ ತಿಳಿದ ಮಟ್ಟಿಗೆ ನಮ್ಮನೆಯಲ್ಲಿ ರಾಗಿ, ಜೋಳದ ಮೂಟೆ ಗಳಿಂದ ಹೊರಬರುತ್ತಿದ್ದ ಗುಗ್ಗುರು ಹುಳ (ಕೀಟ)ಗಳು ಮನೆಯ ಮೂಲೆ ಮೂಲೆಗಳಲ್ಲಿ ಹರಿದಾಡುತ್ತಿದ್ದುದನ್ನು ನಾ ಬಲ್ಲೆ. ಇಲ್ಲಿ ತಿಳಿಯುವುದೇನೆಂದರೆ ನಮ್ಮಪ್ಪನಿಗೆ ಬೇಕಾದಷ್ಟು ಆಸ್ತಿ ಇತ್ತು ಎಂದು ಭಾವಿಸಬಹುದು.

ನನಗೆ ಏನಂತ ಹೆಸರು ಇಟ್ಟಿದ್ದರೋ ತಿಳಿಯದು. ಆದ್ರೆ ನನ್ನ ಗುರ್ತಿಸುತ್ತಿದ್ದದ್ದು, ''ತಾಯಿ ತಿಂದ ಮಗ'' ಎಂದು. ಆಗ ನನ್ನದು ಶಬ್ದಗಳ ಅರ್ಥೈಸಿ ಪ್ರತಿಕ್ರಿಯಿಸುವ ವಯಸ್ಸಲ್ಲ. ಅಂತಹ ದಿನಗಳಲ್ಲಿ ನನ್ನನ್ನು ಎತ್ತಾಡಿಸಿ ಮುದ್ದಿಸುತ್ತಿದ್ದ ನನ್ನಪ್ಪನ ಶವವನ್ನು ಮನೆ ಮುಂದಿನ ಅಂಗಳದಲ್ಲಿ ಮಲಗಿಸಿ ಮನೆಮಂದಿಯೆಲ್ಲ ಅಳುತ್ತಿದ್ದರು. ಹಾಗೆ ಅಳುತ್ತಿದ್ದ ಒಬ್ಬಳಲ್ಲಿ ''ಹಸಿವಾಗುತ್ತೆ, ಊಟ ಕೊಡು'' ಅಂದೆ. ನನ್ನ ದೂರ ತಳ್ಳಿದಳು, ಸುತ್ತ ನೆರೆದಿದ್ದವರಲ್ಲಿ ಒಬ್ಬಳು ನನ್ನ ಹೊತ್ತೊಯ್ದು ಊಟ ಇಕ್ಕಿ ಆಕೆಯ ಮಕ್ಕಳೊಂದಿಗೆ ನನ್ನನ್ನು ಆಟ ಆಡಲು ಬಿಟ್ಟಳು.

ನನ್ನ ಮನೆಗೆ ನಾನು ಯಾವಾಗ ಬಂದೆನೋ ತಿಳಿಯದು, ಮುದ್ದಿಸಿ ಎತ್ತಾಡಿಸುತ್ತಿದ್ದ ಆ ವ್ಯಕ್ತಿಯ ದನಿಯಾಗಲಿ, ಕಾಲ ಸಪ್ಪಳವಾಗಲಿ ಕೇಳದಾದೆ. ಇಡೀ ಮನೆಯೇ ಬಿಕೋ ಅನ್ನುತ್ತಿತ್ತು. ನಗುವಿನ ಮಾತಿರಲಿಲ್ಲ. ಅಂತಹ ದಿನ ಆ ಮನೆಯೊಡೆಯ ಮತ್ತೊಬ್ಬ ಯಾರೋ ಹೆಣ್ಣುಮಗಳು ನನ್ನನ್ನು ಒಂದು ಬಸ್ಸಿನಲ್ಲಿ ಕರೆದುಕೊಂಡು ಹೊರಟರು. ಬಸ್ಸಿನ ತೊಯ್ದಾಟಕ್ಕೆ ನನಗೆ ನಿದ್ದೆ ಬಂದಿತು, ಎಚ್ಚರವಾದಾಗ ನನ್ನ ಬಳಿ ಯಾರೂ ಇರಲಿಲ್ಲ. ಅಪರಿಚಿತ ಸ್ಥಳವಾಗಿದ್ದರಿಂದ ಗಾಬರಿಯಾಗಿ ಕಕ್ಕ ಬರುವಂತಾಗಿ ಅಳಲು ಸುರುವಿಟ್ಟುಕೊಂಡೆ. ಪ್ರಯಾಣಿಕರೆಲ್ಲ ಸೇರಿ ನನ್ನ ಸಮಾಧಾನಿಸಲೆತ್ನಿಸಿದರು. ಕಕ್ಕ ಬರುತ್ತೆ ಅಂದೆ. ಬಸ್ಸನ್ನು ತರಬಿದರು, ಕಕ್ಕ ಮಾಡಿಸಿದ್ರು, ಯಾರೋ ಹೆಣ್ಣುಮಗಳು ನನ್ನ ಕುಂಡಿಯನ್ನು ಪೇಪರ್‌ನಲ್ಲಿ ಒರೆಸಿದ್ಲು.

ನನ್ನ ಬಗ್ಗೆ ಎಲ್ಲರಿಗೂ ಅನುಕಂಪವಿತ್ತು. ಆದ್ರೆ ನನ್ನನ್ನು ನೋಡಿಕೊಳ್ಳುವುದಕ್ಕೆ ಯಾರೂ ಮುಂದೆ ಬರಲಿಲ್ಲ. ಮುಂದಿನ ಯಾವುದೋ ನಿಲ್ದಾಣದಲ್ಲಿ ನನ್ನ ಇಳಿಸಿಬಿಟ್ಟೋದ್ರು. ಅಳುತ್ತ ನಿಂತಿದ್ದ ನನ್ನನ್ನು ದೊಂಬಿದಾಸರವನೊಬ್ಬ ಎತ್ತಿಕೊಂಡು ಹೋಟೇಲಿನಲ್ಲಿ ತಿಂಡಿ ಕೊಡಿಸಿ ತನ್ನ ಬಳಿ ಇಟ್ಟುಕೊಂಡ.

ಅವನದು ದೊಡ್ಡ ಸಂಸಾರ. ಅವರೊಂದಿಗೆ ಇನ್ನೂ ಎರಡ್ಮೂರು ಸಂಸಾರಗಳಿದ್ದುವು. ಸಂಸಾರಗಳೊಂದಿಗೆ ಊರೂರು ಸುತ್ತಿ ಸುತ್ತಿ ನಾನು ಸುಮಾರು ಎತ್ತರ ಬೆಳೆದಿದ್ದೆ. ಎಲ್ಲರೂ ನನ್ನನ್ನು ಮರಿ ಅಂತ ಕರೆದು ನನಗೆ ಅದೇ ಹೆಸರು ಖಾಯಂ ಆಯಿತು.

ಹೀಗೆ ಊರೂರು ಸುತ್ತುತ್ತ ಬೆಂಗಳೂರಿಗೆ ಬಂದಿದ್ವಿ. ನನಗೆ ಆಗ ಇದು ಬೆಂಗಳೂರು ಅಂತ ಗೊತ್ತಿರಲಿಲ್ಲ. ದೊಂಬಿದಾಸಯ್ಯ ನನಗೆ, ''ಚಾಮರಾಜಪೇಟೆ ಯಲ್ಲಿರುವ ಮಸಾಲೆ ದೋಸೆ ನಯವಾಗಿ ಮಾಡುವ ಆ ಹೋಟಲಲ್ಲಿ ಕೆಲ್ಸ ಮಾಡ್ತೀಯಾ ?'' ಅಂದ, 'ಹುಂ' ಅಂದೆ.

ಕ್ಲೀನರ್ ಆಗಿ ಕೆಲಸ ಸುರು ಮಾಡಿದಾಗ ಅವನು ಹಾಗೂ ಹೀಗೂ ಬಂದು ಹೋಗುತ್ತಿದ್ದ. ಆ ದಾಸಯ್ಯ ನನ್ನನ್ನು ಐದು ನೂರು ರೂಪಾಯಿಗೆ ಮಾರಿಹೋಗಿದ್ದ, ಅದು ನನಗೆ ಗೊತ್ತೇ ಇರಲಿಲ್ಲ.

ಒಮ್ಮೊಮ್ಮೆ ಅನ್ನಿಸುತ್ತೆ, ಆ ದಾಸಯ್ಯನ ಇಬ್ಬರು ಹೆಣ್ಣು ಮಕ್ಕಳಲ್ಲಿ ಅಂದು, ಮಗಿಗೆ ಹಾಲು ಕುಡಿಸ್ಬೇಕು ಒಂದ್ರೂಪಾಯಿ ಕೊಡಕ್ಕೊ ಅಂದವಳು, ಒಬ್ಬಳು ಇರಬಹುದೇ ?! ಅಂತ.

೧

ನಾನಿದ್ದ ಕಾಮಾಕ್ಷಿ ಭವನಕ್ಕೆ ಕೆಲವರು ಕಾಲರದ ಭವನ ಅಂತಾನೂ ಕರೀತಿದ್ರು. ಹೋಟೇಲ್ ಮಾಲೀಕ ನರಸಿಂಹಣ್ಣ ನನ್ನನ್ನು ಒಬ್ಬ ದತ್ತುಪುತ್ರನಂತೆ ನೋಡಿಕೊಂಡಿದ್ರು, ಬೀಡಿ ಕಾಸು ಅಂತ ವಾರಕ್ಕೆ ಐದು ರೂಪಾಯಿ ಕೊಡ್ತಿದ್ರು , ಅಲ್ಲದೆ ಸಿನಿಮಾಗೆ ಕಾಸು ಕೇಳಿದ್ರೆ ಯಾವತ್ತೂ ಇಲ್ಲ ಅಂತಿರಲಿಲ್ಲ. ಸಿನಿಮಾ ನೋಡೋದು, ಬೀಡಿ ಸೇದೋದು ಬಿಟ್ರೆ ನನಗೆ ಬೇರೆ ಲೋಕ ತಿಳಿದಿರಲಿಲ್ಲ. ಸಿನಿಮಾ ಹುಚ್ಚಿನಿಂದಾಗಿ ಪೋಸ್ಟರ್ ಓದೋದು ಕಲ್ತಿದ್ದೆ. ಆ ಹೋಟೇಲ್‌ಗೆ ಪ್ರಜಾವಾಣಿ, ಸುಧಾ, ಪ್ರಜಾಮತ, ತಪ್ಪದೆ ಬರುತ್ತಿದ್ದವು. ಪ್ರಜಾಮತದಲ್ಲಿ ಬರುತ್ತಿದ್ದ ಖಾಯಂ ಅಂಕಣಗಳಾದ ದಾಂಪತ್ಯ ಸಮಸ್ಯೆ, ಗುಪ್ತ ಸಮಾಲೋಚನೆಗಳನ್ನು ತುಂಬ ಗುಪ್ತವಾಗಿ ಓದುತ್ತಿದ್ದೆ. ಪ್ರಜಾವಾಣಿ ಪತ್ರಿಕೆಯ ನಿತ್ಯ ಕಾಲಂಗಳಾದ 'ಇಪ್ಪತ್ತೈದು ವರ್ಷಗಳ ಹಿಂದೆ', 'ಸುಭಾಷಿತ', ಮತ್ತು 'ಮೊದ್ದುಮಣಿ' ನನ್ನ ನೆಚ್ಚಿನ ಕಾಲಂಗಳು. ಬರುಬರುತ್ತ, ಪ್ರಜಾಮತ ಪತ್ರಿಕೆಯಲ್ಲಿ ಬರುತ್ತಿದ್ದ ದಾಂಪತ್ಯ ಸಮಸ್ಯೆ, ಗುಪ್ತ ಸಮಾಲೋಚನೆ ಲೇಖನಗಳನ್ನು ಓದುವಾಗ, ಇಲ್ಲವೇ 'ಬ್ರಾ'ದ ಜಾಹಿರಾತು ನೋಡುತ್ತಿದ್ದಂತೆ ನನ್ನ ಮೈಯ ನರನಾಡಿಗಳಲ್ಲಿ ಬಿಸಿಗಾಳಿ ತುಂಬಿಕೊಳ್ಳಿತ್ತು.

ಇವತ್ತು ಅವನ್ನೆಲ್ಲ ನೆನೆಸಿಕೊಂಡರೆ ನಗು ಬರುತ್ತೆ!

೨

ಎಲ್ಲಾ ವ್ಯಾಪಾರ ಕೇಂದ್ರಗಳಲ್ಲಿ ಮಾಮೂಲು ಗಿರಾಕಿಗಳು ಇರುವಂತೆ, ನಮ್ಮ ಹೋಟೇಲ್‌ಗೂ ಬರುವ ಹಲವಾರು ಗಿರಾಕಿಗಳಲ್ಲಿ ರಾಮಗೌಡರಿಗೂ ಕಾಮಾಕ್ಷಿಭವನ ಮಾಲಿಕರಾದ ನರಸಿಂಹಣ್ಣನವರಿಗೂ 'ಹೋಗೋ, ಬಾರೋ' ಅನ್ನುವಷ್ಟು ಗೆಳೆತನವಿತ್ತು.

ಈ ರಾಮೇಗೌಡ್ರು ನನ್ನನ್ನು ಮೊದಮೊದಲು ಅರ್ಧ ಸಾವ್ರ, ಅಂತ ಕರೀತಿದ್ರು. ಆಮೇಲಾಮೇಲೆ ನರಸಿಂಹನ ದತ್ತುಪುತ್ರ ಅಂತಾನೋ, ಇಲ್ಲ ಮರಿಯಣ್ಣ ಅಂತಾನೋ ಕರೀತಿದ್ದ ವ್ಯಕ್ತಿ ಒಂದು ದಿನ

ಅಚಾನಕ್ಕಾಗಿ, ''ಲೇ ಮರಿ ನನ್ಮಗಳನ್ನ ಮದ್ವೆಯಾಗ್ತೀಯಾ ? ಅಳಿಮಯ್ಯನಾಗಿ ನಮ್ಮನೆಯಲ್ಲೇ ಇರುವಂತೆ'', ಎಂದು ನಗಾಡಿದ್ದರಿಂದ ನನ್ನಲ್ಲೇನೋ ಕಸಿವಿಸಿ.

ರಾಮೇಗೌಡ್ರ ಮಗಳು ಗಂಗೆಯನ್ನು ಆ ಹೋಟೇಲ್‌ಗೆ ಸೇರಿದ ದಿನದಿಂದಲೂ ನೋಡ್ತಿದ್ದೆ. ಮನೆಯಲ್ಲಿ ತಿಂಡಿ ತಡವಾದ್ರೆ ನಂ ಹೋಟೇಲ್‌ಗೆ ಬಂದು ತಿಂಡಿ ತಿಂದು ಶಾಲೆಗೆ ಹೋಗುತ್ತಿದ್ದಳು. ಎಲ್ಲರೂ ನನ್ನನ್ನು 'ಮರಿಯಣ್ಣ' ಅಂತ ಕರೀತಿದ್ರೆ, ಗಂಗೆ ನನ್ನನ್ನು 'ಏಯ್ ಹುಡುಗ' ಅಂತಿದ್ಲು, ತುಂಬ ಲಕ್ಷಣವಾದ ಹುಡುಗಿ. ಅಂತಹ ಹುಡುಗಿಯ ಕೈ ಹಿಡಿಯುವ ಆಸೆಯನ್ನು ಅವರಪ್ಪನೇ ನನ್ನಲ್ಲಿ ಮೂಡಿಸಿದ್ದ.

ಒಂದು ಸಂಜೆ ನನ್ನೆದುರೇ ನನ್ನ ವಿಚಾರವಾಗಿ ರಾಮೇಗೌಡ್ರಿಗೂ ನರಸಿಂಹಣ್ಣನವರಿಗೂ ಜೋರಾಗಿಯೇ ವಾಗ್ವಾದ ನಡೆಯಿತು. ಮಾತಿಗೆ ಮಾತು ಬೆಳೆದು, ''ಮರಿ ಹುಂ ಅನ್ನಿ, ನಾನೆ ಮುಂದೆ ನಿಂತು ಧಾರೆ ಎರೆದು ಕೊಳ್ತೀನೆ'', ಎಂದು ಸವಾಲು ಹಾಕಿದ್ರು ನರಸಿಂಹಣ್ಣ. ಗೌಡ್ರು, ''ಲೋ ಮರಿ, ಗಂಗೇನ ಮದ್ವೆಯಾದ್ರೆ ನಿಂಗೆ ಒಂದು ಸ್ವಂತ ಮನೇನೋ, ಆಟೋರಿಕ್ಷಾನೋ ಕೊಟ್ಟು ಬಿಡ್ತೀನಿ, ಮದುವೆಯಾಗ್ತೀಯಾ ?'' ಎಂದು ಕೇಳಿದರು. ನಾನು ಹಿಂದೆ ಮುಂದೆ ಯೋಚಿಸದೆ ''ಹುಂ'' ಅಂದೆ.

ಅಂದು ತುಂಬ ಖುಷಿಯಿಂದ ಹೋದ ರಾಮೇಗೌಡ್ರು ಒಂದು ದಿನ, ''ಮರಿಯಪ್ಪ, ನಿನ್ನೊಂದಿಗೆ ಗಂಗೆ ಏನೋ ಮಾತಾಡಬೇಕಂತೆ ಬರ್ತಿಯಾ ?'' ಅಂದ್ರು. ''ನರ....ಸಿಂ....ಹಣ್ಣ'' ಅಂದೆ. ''ಅವನಿಗೆ ನಾ ಹೇಳ್ತೀನೆ, ನೀ...ಬಾ'', ಅಂದ್ರು.

ತುಂಬ ಉತ್ಸಾಹದಿಂದ ಒಳ್ಳೆ ಬಟ್ಟೆ ಹಾಕಿಕೊಂಡು ಹೊರಟೆ. ಆಟೋದಲ್ಲಿ ಕುಳಿತಿದ್ದ ಗಂಗೆಯನ್ನು ನೋಡುತ್ತಿದ್ದಂತೆ, ನನ್ನೊಳಗಿನ ಉತ್ಸಾಹವೆಲ್ಲ ಇಳಿದುಹೋಗಿತ್ತು, ಅವಳ ಸೀರೆಯ ಸೆರಗು ತಾಗಿದ್ರೆ ರೋಮಾಂಚನವಾಗ್ತಿತ್ತು, ಹಾಗೆಯೇ ಕಾಮಜ್ವಾಲೆಯು ಹೊತ್ತಿ ಉರಿಯುತ್ತಿತ್ತು.

ಚಾಮರಾಜಪೇಟೆಯಿಂದ ತುಳಸಿ ಪಾರ್ಕ್‌ಗೆ ಬರುವಷ್ಟರಲ್ಲಿ ಗಂಗೆ ನನ್ನನ್ನು ನಾಲ್ಕಾರು ಸಾರಿ ಕದ್ದು ನೋಡಿದ್ದಳು. ಗಂಗೆಯ ಬಗ್ಗೆ ನನ್ನಲ್ಲಿದ್ದ ಅಶ್ಲೀಲ ಕಲ್ಪನೆಯಿಂದ ಅವಳ ಮುಂದೆ ಕುಬ್ಜನಾಗಿದ್ದೆ. ಪಾಪಪ್ರಜ್ಞೆಯಿಂದ ತಲೆ ತಗ್ಗಿಸಿದ್ರೂ ಅವಳ ದುಂಡು ಮೊಲೆಗಳ ನೋಡುವಾಸೆ ಎಷ್ಟೇ ಅದುಮಿಟ್ಟರೂ ಪುಟಿದೇಳುತ್ತಿತ್ತು.

ತುಳಸಿ ಪಾರ್ಕಿನ ಬಳಿ ಆಟೋ ನಿಲ್ಲಿಸಿದ ಗೌಡ್ರು, ''ಹೋಗಿ ಅದೇನು ಮಾತಾಡಿಕೊಳ್ತೀರೋ ಮಾತಾಡಿ ಬನ್ನಿ'' ಅಂದರು. ಗಂಗೆಯ ಹಿಂದೆ ತಲೆ ತಗ್ಗಿಸಿಕೊಂಡು ಹೋದೆ. ಕಲ್ಲುಬೆಂಚಿನ ಮೇಲೆ ಕೂಡುತ್ತ ಮಾತಾಡಿದ್ವಿ ನಾವಿಬ್ಬರು.

''ನನ್ನ ಬಗ್ಗೆ ನಿನಗೇನಾದ್ರು ಕೇಳಬೇಕು ಅನ್ನಿಸಿದ್ರೆ ಕೇಳು'' ಅಂದ್ಲು ''ಏನ್ ಕೇಳ್ಬೇಕು ಅಂತ ಗೊತ್ತಾಗುತ್ತಿಲ್ಲ'', ಅಂದೆ. ಜೋರಾಗಿ ನಕ್ಕಳು. ನಗುನಗುತ್ತ ''ಯಾಕೆ ಒಂಥರ ಚಳಿ ಹಿಡಿದಿರೋ ತರ ಕೂತಿದ್ದಿಯಾ ? ನೆಟ್ಟಗೆ ಕೂತು ಮಾತಾಡು'', ಅಂದ್ಲು ''ಯಾವ ಹೆಂಗಸರೊಟ್ಟಿಗೂ ನಾನು ಯಾವತ್ತೂ ಹೀಗೆ ಕುಳಿತಿಲ್ಲ, ಅದ್ಕೇ ಇರ್ಬೇಕು'' ಅಂದೆ ತಲೆತಗ್ಗಿಸಿ. ''ನನ್ನ ಮುಖ ನೋಡು'' ಅಂದ್ಲು ನೋಡಿದೆ. ನನ್ನ ಬೆರಳುಗಳನ್ನು ತನ್ನ ಕೈಬೆರಳುಗಳಲ್ಲಿ ಬಂಧಿಸಿ ಭುಜಕ್ಕೆ ಭುಜ ತಾಗಿಸಿ ಕುಳಿತಳು. ದುಃಖ ಉಮ್ಮಳಿಸಿ ಬಂತು. ಅತ್ತುಬಿಟ್ಟೆ. ''ಯಾಕೆ ಅಳ್ತೀಯಾ ?'' ಅಂದ್ಲು ಮಿತಿ ಮೀರಿದಂತೆ ದುಃಖ ಆಯಿತು. ಜೋರಾಗಿ ಅಳಲು ಸುರುವಿಟ್ಟುಕೊಂಡೆ. ನಾನು ಯಾಕೆ ಅಳ್ತಿದ್ದೇನೆ ಎಂದು ನನಗೇ ಗೊತ್ತಿರಲಿಲ್ಲ.

ನನ್ನ ತಲೆಯನ್ನು ತನ್ನ ಭುಜಕ್ಕಾನಿಸಿಕೊಂಡು, ''ಕೂಲ್ ಡೌನ್, ಕೂಲ್ ಡೌನ್, ಸಮಾಧಾನ ಮಾಡ್ಕೋ'' ಅಂದ್ಲು.

ನನ್ನ ಉದ್ವೇಗವನ್ನು ಹತೋಟಿಗೆ ತರಲು ನನ್ನಿಂದ ಆಗಲಿಲ್ಲ. ಪಾರ್ಕ್‌ನಲ್ಲಿ ತಿರುಗಾಡಲು ಬಂದವರು ಗಂಗೆಯನ್ನು ವಿಚಾರಿಸಿದರು. ''ಯಾಕೆ ಅಳ್ತೀನಿ ಅಂತ ಅವನಿಗೇ ಗೊತ್ತಿಲ್ಲ, ನಂಗೇನು ಗೊತ್ತು ?'' ಅಂದ್ಲು. ನೆರೆದಿದ್ದವರೆಲ್ಲ ನನ್ನನ್ನು ವಿಚಿತ್ರವಾಗಿ ನೋಡಿ ಹೋದರು. ಅತ್ತು ಅತ್ತು ಮನಸು ಹಗುರವಾಗಿತ್ತು. ನಮ್ಮಿಬ್ಬರ ಮಧ್ಯೆ ಯಾವುದೇ ಮಾತಿರಲಿಲ್ಲ, ತುಂಬ ಹೊತ್ತು ಹಾಗೆ ಕುಳಿತಿದ್ವಿ. ಸುಮಾರು ಹೊತ್ತಿನ ನಂತರ, ''ಮನಸು ನಿರಾಳವಾಯಿತಾ ?'' ಅಂದ್ಲು ಮುಖನೋಡಿ ಕತ್ತು ಅಲ್ಲಾಡಿಸಿದೆ. ಮುಗುಳ್ನಕ್ಕಳು. ನನ್ನಲ್ಲೂ ನಗೆ ಮೂಡಿತು.

''ನಿನ್ಹೆಸ್ರು ?''

''ಮರಿ !''

''ನೀನೀಗ ಮರಿಯಲ್ಲ, ನನ್ನ ಮದುವೆಯಾಗೋ ಹುಡುಗ'' ಅಂದ್ಲು.

''........''

''ನನ್ನ ಮದುವೆ ಆಗ್ತೀಯಾ ?''

''ಹು.....''

''ನನ್ನ ಯಾವ ಗುಣ ನಿಂಗೆ ಇಷ್ಟವಾಯಿತು ?''

''........''

ನಿಂಗೆ ನಿನ್ನ ಜಾತಿ ಯಾವುದು ಅಂತಾನೇ ಗೊತ್ತಿಲ್ಲವಂತೆ ಹೌದಾ ?''

''ಹೌದು ನನ್ನ ಅಪ್ಪ ಅಮ್ಮ ಯಾರು, ನನ್ನ ಜಾತಿ ಯಾವುದು ಏನೂ ಗೊತ್ತಿಲ್ಲ'' ಅಂದೆ.

''ಕುವೆಂಪು ಕಲ್ಪನೆಯ ವಿಶ್ವ ಮಾನವ ನೀನು, ಇನ್ನು ನಿನ್ನ ಜಾತಿ ಯಾವುದು ಅಂತ ಯಾರಾದರೂ ಕೇಳಿದ್ರೆ, ವಿಶ್ವಮಾನವ ಅನ್ನು. ಏನ್ ಹೇಳ್ತೀಯಾ ಹೇಳು ?''

''ವಿಶ್ವಮಾನವ''

''ವೆರಿ ಗುಡ್, ನಿನ್ಹೆಸ್ರು ?''

''ಮರಿ, ಮರಿಯಣ್ಣ''

ಹುಸಿ ನಕ್ಕು ''ಮರಿ, ಇವತ್ತಿನಿಂದ ನಿನ್ಹೆಸ್ರು, ವಿಶ್ವ, ವಿಶ್ವನಾಥ್, ಅಂತಿಟ್ಕೋ , ಒಪ್ಪಿಗೇನಾ ?''

''ಆಯಿತು'' ಅಂದು ಅವಳ ಮುಖ ನೋಡಿದೆ. ಈಗ ಅವಳ ಮೀನು ಕಂಗಳ ದೃಷ್ಟಿಸುವ ಧೈರ್ಯ ಹೇಗೋ ಬಂದುಬಿಟ್ಟಿತ್ತು.

ಮತ್ತಷ್ಟು ಒತ್ತಿ ಕುಳಿತು, ''ಇನ್ಮೇಲೆ ನೀನೆ ವಿಶ್ವ'' ಅಂದಳು. ಅವಳ ಮೊಲೆ ನನ್ನ ರಟ್ಟೆಗೆ ತಾಗಿ ನನ್ನೊಳಗೆ ಅರಾಜಕತೆ ಉಂಟಾಗಿ ಸುಮ್ಮನೆ ಕುಳಿತಿದ್ದೆ. ಅವಳ ಕಣ್ಣುಗಳು ನನ್ನನ್ನೇ ತಿನ್ನುವಂತೆ ನೋಡುತ್ತಿದ್ದವು. ''ನಿನ್ನ ಮೂಗು ಹಲಸಿನ ಹಣ್ಣಿನ ತೊಳೆ ಇದ್ದಂಗೆ ಇದೆ, ರಾತ್ರಿ ಸಿಕ್ತಿಯಾ ? ತಿಂದ್ಹಾಕಿಬಿಡ್ತೀನಿ'' ಅಂದ್ಲು, ನಾ ನಕ್ಕೆ. ''ನೀ ನಕ್ಕರೆ ಎಷ್ಟು ಚೆನ್ನಾಗಿ ಕಾಣ್ತಿಯಾ ಗೊತ್ತಾ? ಹೀಗೆ ನಗ್ತ ನಗ್ತಾನೆ ಹೇಳು, ಆಗ ಯಾಕೆ ಅತ್ತೆ? ಮತ್ತು ನನ್ನ ಮದುವೆಯಾಗಲು ನಿಂಗ್ಯಾಕಿಷ್ಟಾ?''

''ಮದುವೆ ಆಗುವ ಆಸೆ ನನಗೂ ಇದೆ, ನೀನಲ್ಲದಿದ್ದರೂ ಯಾರನ್ನೋ ಆಗಬಹುದು. ಆದ್ರೆ ಯಾಕೆ ಅತ್ತೆ ಅಂತ ನನಗಿನ್ನೂ ತಿಳಿದಿಲ್ಲ''

''ಪರ್ವಾಗಿಲ್ವೆ ! ನನ್ನ ವಿಶ್ವಂಗೂ ಮಾತನಾಡ್ಲಿಕ್ಕೆ ಬರುತ್ತೆ, ಹುಂ ಇರಲಿ, ಇನ್ನು ನಾಳೆಗಳ ಬಗ್ಗೆ ಏನೇನು ಆಸೆಗಳು ಇವೆ, ಹೇಳು.''

''ನಿನ್ನ ಈ ಪ್ರಾಮಾಣಿಕತೆ, ಮುಗ್ಧತೆ, ನಂಗಿಷ್ಟ. ನಾಳೆನೇ ಸಬ್ ರಿಜಿಸ್ಟ್ರಾರ್ ಆಫೀಸ್‌ನಲ್ಲಿ ಮದುವೆ ರಿಜಿಸ್ಟರ್ ಮಾಡಿಸೋಣ. ಇನ್ನ ಹದಿನೈದು ದಿನ ಟೈಂ ಇರುತ್ತೆ. ಅಷ್ಟರಲ್ಲಿ ನಿನಗೆ ಈ ಮದುವೆ ಇಷ್ಟ ಇಲ್ಲದಿದ್ರೆ ಯಾಕೆ ಇಷ್ಟ ಇಲ್ಲಾಂತ ತಿಳಿಸಿದ್ರೆ, ಮದ್ವೇನ ಕ್ಯಾನ್ಸಲ್ ಮಾಡಬಹುದು. ತಿಳೀತಾ ?!'' ಎಂದಳು.

''ಆಯಿತು'' ಎಂದೆ.

ಹೋಟೇಲ್‌ಗೆ ಹೋದೊಡನೆ ಎದುರಾದ ನರಸಿಂಹಣ್ಣ, ''ಹಣ್ಣೋ ಕಾಯೋ ?'' ಅಂದ್ರು.

''ಹಣ್ಣು'' ಅಂದೆ. ಗಳಗಳನೆ ಅತ್ತುಬಿಟ್ಟರು. ''ಸಂತೋಷ ಅತಿಯಾದ್ರೂ ದುಃಖ ಹೆಚ್ಚಾದಾಗ್ಲೂ ಕಣ್ಣೀರು ಬರುತ್ತೆ, ಇಲ್ಲಿ ಬಾ'', ಅನ್ನುತ್ತ ಹೋಟೇಲ್‌ನ ಒಳಗೆ ಕರೆದೊಯ್ದು ''ಗಂಗೆ ಬಂಗಾರದಂಥ ಹುಡುಗಿ, ಚೆನ್ನಾಗಿ ಓದಿಕೊಂಡಿದ್ದಾಳೆ. ಅವಳ್ನ ಮದ್ವೆಯಾಗ್ಲಿಕ್ಕಂತ ಎಂತೆಂತಹ ಕೆಲ್ಸದಲ್ಲಿದ್ದ ಹುಡುಗರೆಲ್ಲ ಬಂದು ಹೋದ್ರು. ಆದ್ರೆ ಇವ್ಳೇ ಅವ್ರನ್ನ ಒಪ್ಪಿರಲಿಲ್ಲ, ಕಾರಣ ವರದಕ್ಷಿಣೆ ತಗಂಡು ಮದುವೆಯಾಗೋನು ರಣಹೇಡಿ ಅಂತಿದ್ಲು. ಓದಿದವರು, ಕೆಲ್ಸದಲ್ಲಿದ್ದವರು, ವರದಕ್ಷಿಣೆ ಇಲ್ಲದೆ ಮದುವೆಯಾಗಲು ಯಾರೂ ಮುಂದೆ ಬರಲಿಲ್ಲ'' ಎಂದು ತಿಳಿಸಿದರು.

''ರಾಮನೂ ಅಂಥ ಹುಡುಗರಲ್ಲಿ ಒಬ್ಬ. ಅವಳನ್ನು ಮದುವೆ ಆಗೋದಕ್ಕೆ ಏನೇನೆಲ್ಲ ಮಾಡಿದ. ಆ ಸುಳ್ಳನ್ನು ಹೇಗೋ ಪತ್ತೆ ಹಚ್ಚಿಬಿಡೋಳೊ ! ಹಳ್ಳಿಮುಕ್ಕರಿಗೆ ಕೊಡೋಣವೆಂದ್ರೆ, ಅವರು ಓದಿರೋ ಹುಡ್ಗಿ ಬ್ಯಾಡಿ, ಅಂತಿದ್ರು. ಆ ಋಣಾನುಬಂಧಾನ ಯಾರೂ ತಪ್ಪಿಸಕ್ಕಾಗಲ್ಲ, ಅಂತೂ, ಗಂಗೆಗೂ ಕಂಕಣ ಭಾಗ್ಯ ಕೂಡಿಬಂತಲ್ಲ'', ಎನ್ನುತ್ತ ಕಾಣದ ದೇವರಿಗೆ ನಿಂತಲ್ಲೇ ಕೈ ಮುಗಿದರು.

ಳ

ಗುರ್ತು ಪರಿಚಯಸ್ಥರೆಲ್ಲರಿಗೂ ಸಿಹಿ ಊಟ ಹಾಕಿಯೂ ಒಂದು ಸಾವಿರ ರೂಪಾಯಿಯಲ್ಲಿ ನಮ್ಮ ಮದುವೆ ನಡೆದುಹೋಗಿತ್ತು.

ಮಾವ ರಾಮೇಗೌಡ್ರು, ಮನೆಯ, ಆಟೋದ ವಿಚಾರವೆತ್ತಿದ್ರು. ಆ ವಿಚಾರ ಗಂಗೆಯಲ್ಲಿ ತಿಳಿಸಿದೆ, ಅದು ನನಗೆ ಬಿಟ್ಟ ವಿಚಾರವೆಂದ್ಲು.

ಆಗ ನಾನು ತುಂಬ ಇಕ್ಕಟ್ಟಿನಲ್ಲಿ ಸಿಕ್ಕಿಹಾಕಿಕೊಂಡೆ.

''ಸದ್ಯಕ್ಕೆ ನಿಮ್ಮಪ್ಪ ಕೊಡೋ ಮನೆ, ಆಟೋ ತಗಂಡು ನಮ್ಮ ಬದುಕನ್ನ ಭದ್ರ ಮಾಡ್ಕೊಳ್ಳೋಣ.ಆಮೇಲೆ ನಮ್ಮದೇ ಸ್ವಂತ ಮನೆ, ಆಟೋ ಮಾಡಿಕೊಂಡು ಆ ಎರಡು ಕೀಗಳನ್ನು ನಮ್ಮಾವನ ಎದೆ ಮೇಲೆ ಎಸೆದು ಬರ್ತೀನೆ'', ಅಂದೆ. ''ನೋಡು ವಿಶ್ವ, ನಾನು ನಿನ್ನ ಹೆಣ್ತಿ, ನೀನು ಸ್ಮಶಾನದಲ್ಲಿ ಗುಡಿಸ್ಲು ಕಟ್ಟಿ ಇದೇ ನಂಮನೆ ಬಾ

ಅಂದ್ರೆ ಬರ್ತೀನಿ'' ಅಂದಳು. ಕಡೆಗೆ ಸಂಧಾನ ನಡೆಸಿ ಆಕೆಯ ಕೆಲವು ಷರತ್ತುಗಳಿಗೆ ಒಪ್ಪಿದೆ.

ಓದುಗ ಮಹಾಶಯರೇ, ಮುಂದಿನ ಸಂಗ್ತಿಯನ್ನು ಸಂಕ್ಷಿಪ್ತವಾಗಿ ಹೇಳಿ ಮುಗಿಸುವೆ. ನಾವಿಬ್ಬರೂ ಮನೆಯಿಂದ ಹೊರಬಂದ ನಂತರ ಗಂಗೆಯ ಇಬ್ಬರು ಸಹೋದರರ ಮದುವೆ ನಡೆದುಹೋಯಿತು. ಆ ಮದುವೆಗಳಿಗೆ ನಾವು ಹೋಗಿರಲಿಲ್ಲ. ದೊಡ್ಡ ಮಗ ಸರ್ಕಾರಿ ನೌಕರನಾಗಿದ್ದರಿಂದ ಒಂದು ಲಕ್ಷ ರೂಪಾಯಿ ವರದಕ್ಷಿಣೆ, ಕೆ. ಜಿ. ಲೆಕ್ಕದಲ್ಲಿ ಚಿನ್ನ, ಬೆಳ್ಳಿಯೊಂದಿಗೆ ಮದ್ವೆಯಾದ್ರೆ, ಎರಡನೇ ಮಗನಿಗೆ ವಿಧಾನಸೌಧದಲ್ಲಿ ಕೆಲಸ ಮತ್ತು ಇಪ್ಪತ್ತೈದು ಸಾವಿರ ವರದಕ್ಷಿಣೆಯೊಂದಿಗೆ ಮದುವೆಯಾಗಿತ್ತು. ಈ ಮದುವೆಯ ವಿಚಾರವಾಗಿ ಗಂಗೆ ನಿಷ್ಠುರ ಮಾತಿನಿಂದ ಮುಖ ಮುರಿದುಕೊಂಡಿದ್ದಳು. ಇಷ್ಟರಲ್ಲಿ ಗಂಗೆಯ ಒಡಲಲ್ಲಿ ಪುಟ್ಟ ದೇವತೆ ಹುಟ್ಟಿದ್ದಳು. ಆಕೆಗೆ ಗಾರ್ಗ್ಯ ಅಂತ ಹೆಸರಿಟ್ಟಿದ್ದಳು. ''ಗಾರ್ಗ್ಯ ಎಂಬ ಹೆಸರು ವಿಚಿತ್ರವಾಗಿದೆಯಲ್ಲವಾ ?'' ಅಂದಿದ್ದಾಕೆ. ''ಸುಮಾರು ಮೂರು ಸಾವಿರ ವರ್ಷಗಳ ಹಿಂದೆ, ಗಾರ್ಗ್ಯ ಅನ್ನೋಳು ದಾರ್ಶನಿಕ ಯಾಜ್ಞವಲ್ಕ್ಯನಿಗೆ ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಹಾಕಿ ನೀರು ಕುಡಿಸಿದ್ದಳು'' ಅಂದಳು. ಇಂಥ ಹೆಸರಿನ ಮಗಳನ್ನು ಆಟವಾಡಿಸುತ್ತಿದ್ದಾಗ ''ವಿಶ್ವ, ನೀನು ಸಂಪಾದಿಸಿಕೊಟ್ಟ ಹಣದಲ್ಲಿ ಮನೆ ಸಂಸಾರ ತೂಗಿಸಿ ಮಿಕ್ಕಿದ ದುಡ್ಡನ್ನು ಕೂಡಿಟ್ಟಿದ್ದು, ಇಂಥ ಮನೆಗೆ ಆಗುವಷ್ಟು ಇದೆ. ನಾಳೆನೇ ಆ ರಾಮೇಗೌಡನ ಮನೆಗೆ ಹೋಗಿ, 'ಈ ಮನೆಯ ಇವತ್ತಿನ ಬೆಲೆ ಆಧಾರದ ಮೇಲೆ ಕ್ರಯಪತ್ರ ಆಗ್ಬೇಕು. ಇಲ್ಲ ಸದ್ಯದಲ್ಲೆ ಮನೆ ಖಾಲಿ ಮಾಡ್ತೀವಿ' ಅಂತ ಹೇಳು'' ಎಂದಳು. ನಾನು ದಿಗ್ಭ್ರಮೆಯಿಂದ ಅವಳ ಕಣ್ಣಲ್ಲಿ ಕಣ್ಣು ನೆಟ್ಟೆ. ಕಂಗಳಲ್ಲಿ ಬೆಂಕಿ ಕಾರುತ್ತ, ''ನೀನು ನನಗೆ ಕೊಟ್ಟ ಮಾತು ನೆನಪಿದೆ ತಾನೆ ? ನಾನು, ನನ್ನ ಹೆಸರಿಗೆ ತಕ್ಕನಾಗಿರೋಳು. ನನ್ನ ಸ್ವರೂಪ ಏನೆಂದು ತಿಳೀಬೇಕಾದ್ರೆ 'ಮಾಯದಂತ ಮಳೆ ಬಂತಣ್ಣ' ಅನ್ನೋ ಜನಪದ ಗೀತೆಯನ್ನು ಕೇಳು'', ಎಂದು ಊಟಕ್ಕೆ ತಟ್ಟೆ ಇಟ್ಟಳು.

ಪ್ರತಿನಿತ್ಯ ಆಟೋದಲ್ಲಿ ಸಂಪಾದಿಸಿದ ಹಣವನ್ನು ಗಂಗೆಯ ಉಡಿಯಲ್ಲಿ ಸುರುವುತ್ತಿದ್ದೆ. ಅವಳೂ ಅಷ್ಟೆ ಸರಳವಾಗಿದ್ದಳು. ಇಬ್ಬರಿಗೂ ನಿತ್ಯ ಉಡಲು ಎರಡು ಜೊತೆ ಬಟ್ಟೆ, ನಿತ್ಯ ಅಡಿಗೆಗೆ ಎಷ್ಟು ಬೇಕೋ ಅಷ್ಟೇ ತರುತ್ತಿದ್ದಳು ಹಿಂದಿನ ಬೀದಿಯ ಕಾಕನ ಅಂಗಡಿಯಿಂದ. ಕುತ್ತಿಗೆಯಲ್ಲಿ ಕರಿಮಣಿ ಸರವಿತ್ತೇ ಹೊರತು, ಅದಕ್ಕೆ ತಾಳಿ ಕೂಡ ಇರಲಿಲ್ಲ.

ಅನಂತಮೂರ್ತಿ, ಕಾರಂತ, ಕುವೆಂಪು, ಲಂಕೇಶ ಇವರೆಲ್ಲ ಆಕೆಯ ನೆಚ್ಚಿನ ಲೇಖಕರು, ಅವರೆಲ್ಲರ ಪ್ರಭಾವದಿಂದಾನೋ ಏನೋ ಪ್ರಾಮಾಣಿಕವಾಗಿ ದುಡಿ, ಯಾರಿಗೂ ಮೋಸ ಮಾಡ್ಬೇಡ ಅನ್ನುತ್ತಿದ್ದ ಗಂಗೆ, ನನಗೂ ಅಂತಹ ಲೇಖಕರ ಕೃತಿ ಓದು ಅನ್ನುತ್ತಿದ್ದಳು. ಅವಳ ಬಲವಂತಕ್ಕೆ ಅವರ ಪುಸ್ತಕಗಳನ್ನು ಓದಲೆತ್ನಿಸಿದೆ, ವಿಫಲನಾಗಿ ಪುಸ್ತಕ ಹಿಂದಿರುಗಿಸಿ ನನ್ನ ಪ್ರತಿಕ್ರಿಯೆ ನಿರೀಕ್ಷಿಸುತ್ತಿದ್ದಾಗ ಒಮ್ಮೆ ಬಾಯಿ ತಪ್ಪಿ, ''ನಾನು ಮನಸ್ಸು ಮಾಡಿದ್ರೆ, ಇವರಿಗಿಂತ ಚೆನ್ನಾಗಿ ಬರಿತೀನೋ ಏನೋ ?'' ಅಂದೆ. ಕಣ್ಣಲ್ಲಿ ನೀರು ಬರುವಷ್ಟು ನಕ್ಕವಳು, ಇಂದು ತನ್ನ ತಂದೆ ರಾಮೇಗೌಡನ ಎದೆ ಮೇಲೆ ''ಕೀ ಎಸೆದು ಬಾ'' ಎಂದೆನ್ನುವಾಗ, ಆಕೆಯ ಎದಿರಿಸುವ ತಾಕತ್ತು ನನ್ನಲ್ಲೂ ಇರಲಿಲ್ಲ.

ಮರುದಿನ ಬೆಳಗ್ಗೆನೇ ನಂಮಾವನ ಮನೆಗೆ ಹೋಗಿ ಇರುವ ಸಂಗ್ತಿ ಹೇಳಿದೆ. ಸೊಸೆಯಂದಿರ ಮುಂದೆ ಏನೆಂದು ಪ್ರಸ್ತಾಪಿಸದೆ ನನ್ನೊಂದಿಗೆ ಓಡಿ ಬಂದರು, ಮಗಳ ಮನೆಗೆ. ಗಂಗೆಯ ಮಾತಿಗೆ ಉತ್ತರಿಸಲಾಗದೆ, ತತ್ತರಿಸಿ ''ನಿನ್ನಿಂದ ಅಪ್ಪ ಅಮ್ಮ ಅನ್ನಿಸಿಕೊಳ್ಳೋ ಯೋಗ್ಯತೆ ಇಲ್ಲದಿರಬಹುದು. ಆದ್ರೆ ನಿನ್ನಂಥ ಮಗಳ ಪಡೆದಿದ್ದೇನೆ ಅನ್ನೋ ಹೆಮ್ಮೆ ನಂದು. ಆಯಿತು ಕಣೆ ತಾಯಿ, ನೀ ಹೇಳಿದ ನೂರಾರು ಮಾತುಗಳನ್ನೂ ಉಳಿಸಿಕೊಳ್ಳಕ್ಕಾಗಲಿಲ್ಲ. ಈ ಮಾತನ್ನಾದ್ರೂ ನಡ್ಸಿ ಕೊಡ್ತೇವೆ'' ಅಂದು ಅದೇ ವಾರದಲ್ಲಿ ನಾವಿದ್ದ ಮನೆಯನ್ನು ನಮ್ಮ ಹೆಸರಿಗೆ ಬರೆದುಕೊಟ್ಟು ಆಟೋ ತೆಗೆದುಕೊಂಡು ಹೋದರು. ಗಂಗೆಯ ಬಳಿ, ''ಮುಂದೆ ?'' ಅಂದೆ. ''ನೀನು ದುಡಿದದ್ದು, ಇನ್ನ ಎರಡು ತಿಂಗಳು ಕೂತು ತಿನ್ನುವಷ್ಟಿದೆ, ಮನೆಯಲ್ಲಿ ಕೂತು ಮಗಳನ್ನು ಆಡಿಸು, ಆಮೇಲೆ ನಿನಗೆ ತಿಳಿದ್ಹಂಗೆ ಮಾಡು'' ಅಂದ್ಲು.

ಮನೆಯಲ್ಲಿ ಎರಡು ದಿನ ಸುಮ್ಮನೆ ಕೂಡುವಷ್ಟರಲ್ಲಿ ನನಗೆ ಹುಚ್ಚೇ ಹಿಡಿದಂತಾಯಿತು. ಲೈಬ್ರರಿಯಿಂದ, ಎಸ್. ಎಲ್. ಭೈರಪ್ಪನವರ ಕಾದಂಬರಿಯೊಂದನ್ನು ತಂದುಕೊಟ್ಟಳು. ಮಗಳು ಆಡುವುದನ್ನು ಗಮನಿಸಲಾರದಷ್ಟು ತನ್ಮಯವಾಗಿ ನಾನು ಓದುವುದನ್ನು ಕಂಡು ಗಂಗೆ ನಗುತ್ತಿದ್ದಳು.

ಎರಡು ಮೂರು ದಿನಗಳಿಗೊಮ್ಮೆ ಒಂದೊಂದು ಕಾದಂಬರಿ ತಂದುಕೊಟ್ಟು ಓದಿಸುತ್ತಿದ್ದಳು. ಆ ಕಾದಂಬರಿಯ ವಸ್ತು, ವಿಷಯಗಳ ಬಗ್ಗೆ ಚರ್ಚಿಸುತ್ತ ನನ್ನ ಮಾತಿನಲ್ಲಿನ ವಿಮರ್ಶೆಯ ವಾಸನೆ ಆಕೆಗೆ ಬಡಿದು, ''ನೀನು, ಭೈರಪ್ಪನವರಂತೆ ಕಥೆ ಬರೆಯುತ್ತೀಯಾ ?'' ಅಂದ್ಲು. ''ಹುಂ'' ಅಂದೆ. ತಕ್ಷಣ ಇನ್ನೂರು ಪುಟದ ನೋಟುಬುಕ್ಕು, ಪೆನ್ನು ನನ್ನ ಮುಂದಿಟ್ಟು, ''ಹುಂ ಬರಿ ನೋಡೋಣ'' ಎಂದ್ಲು. ಬರೆಯುತ್ತ ಹೋದೆ. ನಾನು ಬರೆದಿದ್ದನ್ನು ಆಕೆ ಓದಿ ''ಪರ್ವಾಗಿಲ್ಲ ಕಣೋ ವಿಶ್ವ, ನಿನ್ನೊಳಗೂ ಕವಿ ಇದ್ದಾನ್ದೆ'' ಅಂದ್ಲು. ಸುಮಾರು ಹದಿನೈದು ದಿನದಲ್ಲಿ ಎರಡು ಎಕ್ಸರ್‌ಸೈಜ್ ಬುಕ್‌ಗಳು ಭರ್ತಿ ಮಾಡಿದೆ, ಆಮೇಲೆ ಮನಸು ಖಾಲಿ ಖಾಲಿ ಅನ್ನಿಸಿತು. ಮುಂದೆ ಬರೆಯಲು ತೋಚದೆ, ''ಇನ್ನು ಬರೆಯಕ್ಕಾಗ್ತಿಲ್ಲ'' ಅಂದೆ. ನಾ ಬರೆದಿದ್ದನ್ನೇ ತಿದ್ದಿ ಬರೆದು, ಅದಕ್ಕೆ 'ಅಲೆಮಾರಿ' ಎಂಬ ಶೀರ್ಷಿಕೆ ಇತ್ತು, ''ಲೋ ವಿಶ್ವ, ನೀನು ಆ ದೊಂಬಿದಾಸಯ್ಯರೊಂದಿಗೆ ಸುತ್ತಿದ್ದು ಸಾರ್ಥಕವಾಯಿತು ಕಣೋ'' ಅನ್ನುತ್ತಾ ಕೃತಿಯನ್ನು ಜೋಪಾನವಾಗಿಟ್ಟಳು.

ನಂತರ, ನನ್ನಲ್ಲಿ ಬರೆಯಬೇಕೆಂಬ ತುಡಿತ ಹೆಚ್ಚಾಯಿತು. ಆಗಲೇ ಬರೆದಿಟ್ಟಿದ್ದ ಸಣ್ಣ ಕಥೆಗಳ ರಾಶಿಯೇ ಇತ್ತು. ಪ್ರತಿ ಸರ್ತಿ ಬರೆದಾಗಲೂ ಗಂಗೆಯೇ ಅದನ್ನು ಓದಿ, ತಿದ್ದಿ, ಅದಕ್ಕೊಂದು ಹೆಸರಿಟ್ಟು ಯಾವುದಾದರೂ ಪತ್ರಿಕೆಗೆ ಕಳಿಸುತ್ತಿದ್ದಳು, ಪ್ರಕಟವಾಗದಿದ್ದರೆ, ವ್ಯಥೆಪಡುತ್ತಿದ್ದಳು.

ಜಾಗತೀಕರಣದ ಹೊಡೆತದಿಂದ ಹಳ್ಳಿಯ ಬಡವರು ಪಟ್ಟಣಕ್ಕೆ ಬಂದು, ಇಲ್ಲಿ ಇರಲು ನೆಲೆ ಇಲ್ಲದೆ ಯಾವುದೋ ಜೋಪಡಿಗಳಲ್ಲಿದ್ದು, ಸಿಗ್ನಲ್‌ಗಳಲ್ಲಿ ಭಿಕ್ಷೆಗಿಳಿದ ಹೆಣ್ಣು ಮಗಳೊಬ್ಬಳ, ''ಮಗಿಗೆ ಹಾಲು ಕುಡಿಸ್ಬೇಕು, ಒಂದ್ರೂಪಾಯಿ ಇದ್ರೆ ಕೊಡಕ್ಕೋ !'' ಎಂಬ ಹೆಣ್ಣು ದನಿ ಇಂದಿಗೂ ನನ್ನನ್ನು ತೀವ್ರವಾಗಿ ಕಾಡ್ತಿದೆ. ''ಆ ವಿಷಯವಾಗಿ ಒಂದು ಕಥೆ ಬರೆಯಲಾ ?'' ಅಂದೆ. ಕನ್ನಡ ಎಂ. ಎ. (ಸಾಹಿತ್ಯ) ವಿದ್ಯಾರ್ಥಿಯಾದ ಗಾರ್ಗ್ಯ ''ಅಮ್ಮ, ಅಪ್ಪನಿಗೆ ಹೆರಿಗೆ ನೋವು ಸುರುವಾಗಿದೆ, ಸೂಲಗಿತ್ತಿ ಗಂಗಮ್ಮನವರೆ, ಸಕಲ ಸಿದ್ಧತೆಗಳಾಗಲಿ'' ಅಂದರೆ ಗಂಗೆ ಮಗಳೊಂದಿಗೆ ನಗುತ್ತಿದ್ದಳು.

''ಗಾರ್ಗ್ಯ, ನಿಂಗ ಯಾವಾಗಲೂ ಹುಡುಗಾಟ'' ಅಂದೆ.

''ಸಿಟ್ಟು ಮಾಡ್ಕೋಬೇಡ ತಂದೆ. ಇಗೋ ಬಂದೆ'' ಎಂದು ತನ್ನದೆ ಹಳೆಯ ನೋಟ್‌ಬುಕ್ಕು, ಪೆನ್ನು ನನ್ನ ಕೈಗಿತ್ತು, ''ಬರಿ ಬಾ ತಂದೆ'' ಎಂದು ಎದುರು ಕೂತಳು.

ನಾನು ಕಥೆ ಬರೆಯುತ್ತ ಕುಳಿತ ಹಾಗೆ ಗಾರ್ಗ್ಯ ನನ್ನ ಮುಖವನ್ನು ನೋಡುತ್ತಿರುತ್ತಾಳೆ, ನನ್ನ ಮುಖದಲ್ಲಾಗುವ ಬದಲಾವಣೆಯನ್ನು ಅವಳು ಕಾಮನಬಿಲ್ಲಿಗೆ ಹೋಲಿಸುತ್ತಾಳೆ. ಸಣ್ಣ ಕಥೆಯೊಂದನ್ನು ಬರೆದು ಮಗಳ ಕೈಗಿತ್ತೆ. ತಾಯಿ ಮಗಳು ಆ ಕಥಾವಸ್ತುವಿನ ಬಗ್ಗೆ ಚರ್ಚಿಸುತ್ತಿದ್ದಾಗ, ನಾ ಆಟೋ ತೆಗದುಕೊಂಡು ಹೋದೆ. ರಾತ್ರಿ ಮನೆಗೆ ಬಂದ್ಮೇಲೆ, ''ಕಥೆಗೆ ಯಾವ ಹೆಸರು ಇಡೋಣ ?'' ಎಂದು ಕೇಳಿದೆ. ನಿಮ್ಮ ಮಗಳು ಸೂಚಿಸಿದ್ದು 'ಬೇವರ್ಸಿಯೊಬ್ಬನ ಆತ್ಮ ಚರಿತೆ' ಅಂತ. ಇರ್ಲಿ ಅಲ್ವಾ ?'' ಎಂದಳು ಗಂಗೆ. ''ಶೀರ್ಷಿಕೆ ತುಂಬ ಕೆಟ್ಟದಾಗಿದೆ'' ಅಂದೆ.

''ಅಪ್ಪ ನೀನು ನಿನ್ನ ಆತ್ಮರತೀನ ಬಿಡದಿದ್ರೆ, ಫೀಲ್ಡ್ ಟು ದಿ ಪೆವಿಲಿಯನ್, ಸೆಹ್ವಾಗ್, ಯುವರಾಜ್ ಸಿಂಗಗಳು ಸೊನ್ನೆಗೆ ಔಟಾಗಿ ವಾಪಸ್ ಬರ್ತಾರಲ್ಲ ಹಂಗೆ, ನಿನ್ನ ಕಥೆ ಪತ್ರಿಕಾಲಯದಿಂದ ಸೀದಾ ಗಂಗಮ್ಮನ ಸೇಫ್ ಲಾಕರ್‌ಗೆ ಬಂದು ಬೀಳುತ್ತೆ'' ಅಂತ ಗಾರ್ಗ್ಯ ಅಂದಾಗ ಗಂಗೆ ನಗುತ್ತಿದ್ದಳು.


ಕುಬಾಳ ಜಗದೀಶ್
ರೂಂ ನಂ. ೧, ತೇಜಸ್ವಿ ಕಾಂಪ್ಲೆಕ್ಸ್, ಎಡಪದವು, ಶಿಬ್ಬಿಕೆರೆ ಅಂಚೆ
ಮಂಗಳೂರು ತಾಲೂಕು, ದಕ್ಷಿಣ ಕನ್ನಡ ಜಿಲ್ಲೆ


## ಮುಗುಂ ಮನಮೋಹನ

ನೋಡಿ ನೋಡಿ ಸಾಕಾಗಿದೆ ಹಗರಣದ ಸರಮಾಲೆ --
ಆದರ್ಶ, ೨ - ಜಿ, ಸಿ ಡಬ್ಲ್ಯೂ ಜಿ,
ಈ ಅವಿನೀತಿಯ ನೋಡಲು ಸದ್ಯ, ಬದುಕಿಲ್ಲ ರಾಷ್ಟ್ರಪಿತ ಗಾಂಧೀಜಿ.
ಭ್ರಷ್ಟ ರಾಜಕಾರಣಿಗಳು ನುಂಗುವ ಕೋಟಿ ಕೋಟಿಗಳಿಗೆ ಲೆಕ್ಕವೇ ಇಲ್ಲ,
ಇಷ್ಟಾದರೂ ನಮ್ಮ ಪ್ರಧಾನಿ ಮಾತ್ರ ಬಾಯಿ ತೆರೆಯುವುದೇ ಇಲ್ಲ.


ಡಿ. ಟಿ. ಲೋಹಿತ್
'ಸ್ಕಂದಗಿರಿ' ಪದ್ಮರಾವ್‌ನಗರ, ಸಿಕಂದರಾಬಾದ್ - ೫೬೦೦೬೧

# ತತ್ತ್ವ ಹಾಗೂ ರಸಾಯನಶಾಸ್ತ್ರ



ಮರಣವೆನ್ನುವುದೊಂದು ನಿಗೂಢ. ತತ್ತ್ವಶಾಸ್ತ್ರಜ್ಞರನ್ನು ಬಹುವಾಗಿ ಬಾಧಿಸಿರುವ ಅನಂತಕಾಲದ ಸವಾಲು. ಉಪ್ಪಿನ ಹರಳುಗಳನ್ನು ನೀರಿಗೆಸೆದೆವೆನ್ನೋಣ, ಕೊಂಚ ಕಾಲದಲ್ಲಿಯೇ ಉಪ್ಪು ತನ್ನ ಹರಳಿನ ಆಕಾರ ಕಳೆದುಕೊಂಡು ದ್ರಾವಣವಾಗಿಬಿಡುತ್ತದೆ. ಇದನ್ನು ಉಪ್ಪಿನ ಹರಳಿನ ಮರಣವೆನ್ನೋಣವೇ? ಅಲ್ಲ, ಏಕೆಂದರೆ ಉಪ್ಪಿನ ರುಚಿ ನೀರಿನಲ್ಲಿ ಉಳಿದುಹೋಗಿದೆ. ಆದ್ದರಿಂದ ಉಪ್ಪು ಬದುಕಿದೆ ಎಂದು ಒಂದು ರೀತಿಯ ವಾದ. 'ಉಪ್ಪು ಬದುಕಿದ್ದರಲ್ಲವೆ ಮರಣವನ್ನಪ್ಪುವುದು?' ಆದ್ದರಿಂದ ಉಪ್ಪಿನ ಬದುಕು-ಮರಣ ಎರಡೂ ಅಪ್ರಸ್ತುತ. ಇದೊಂದು ಕೇವಲ ಭೌತಿಕ ಬದಲಾವಣೆ ಮಾತ್ರ ಎನ್ನುವ ವಾದ ಹೆಚ್ಚು ಪ್ರಚಲಿತವಾದದ್ದು. ಅಂತೂ ಭೌತಿಕ ಬದಲಾವಣೆಯಲ್ಲಿ ಆಕಾರ (ರೂಪ) ಹೆಸರು (ಉಪ್ಪು ಉಪ್ಪಿನ ದ್ರಾವಣವಾಯಿತಲ್ಲವೆ?) ಎರಡೂ ಸಾಯುತ್ತವೆ - ಬದಲಾಗುತ್ತವೆ.

ಹೈಡ್ರೋಜನ್ ಅನಿಲ ಮತ್ತು ಆಕ್ಸಿಜನ್ ಅನಿಲಗಳನ್ನು ೨:೧ ಅನುಪಾತದಲ್ಲಿ ಬೆರಸಿದೆವೆನ್ನೋಣ. ಆಗ ಏನೂ ಆಗುವುದಿಲ್ಲ. ಬೆಂಕಿಯ ಸಹಾಯದಿಂದ ಆಸ್ಫೋಟಿಸಿದೆವೆನ್ನೋಣ. ಆಗ ಅನಿಲಗಳು ಕಣ್ಮರೆಯಾಗುತ್ತವೆ. ಅಲ್ಲಿ ಹೊಸದೊಂದು ದ್ರವ ಕಾಣಿಸುತ್ತದೆ. ಅದು ನೀರು. ಈಗ ಹೈಡ್ರೋಜನ್ ಮತ್ತು ಆಕ್ಸಿಜನ್ ಅನಿಲಗಳ




ಹೆಸರು ನಿರುಪಯುಕ್ತ, ಅವೆರಡೂ ಸೇರಿ ನೀರು ಎಂಬ ಹೆಸರು ಪಡೆಯಿತು. ಹೈಡ್ರೋಜನ್ ಮತ್ತು ಆಕ್ಸಿಜನ್ ತಮ್ಮ ಅನಿಲರೂಪ ಕಳೆದುಕೊಂಡವು. ಅಲ್ಲಿದ್ದ ಎರಡು ಧಾತುಗಳ ಬದಲಿಗೆ ಸಂಯುಕ್ತವೊಂದು ರೂಪಗೊಂಡಿತು. ಆ ಸಂಯುಕ್ತದ ಲಕ್ಷಣ ಹೈಡ್ರೋಜನ್ ಧಾತುವಿನ ಲಕ್ಷಣ, ಆಕ್ಸಿಜನ್ ಧಾತುವಿನ ಲಕ್ಷಣಕ್ಕಿಂತ ಭಿನ್ನವಾದದ್ದು! ಹೀಗಾಗಿ ರಾಸಾಯನಿಕ ಕ್ರಿಯೆ ಉಂಟಾದಾಗ ಹೆಸರು, ಆಕಾರ, ಗುಣ, (ಭೌತಿಕ ಹಾಗೂ ರಾಸಾಯನಿಕ ಗುಣ) ಎಲ್ಲವೂ ಬದಲಾದವು. ಹಾಗೆಯೇ ಹೊಸ ವಸ್ತುವು ಹೊಸ ಹೆಸರು, ಆಕಾರ, ಗುಣ ತಳೆದು ರೂಪುಗೊಂಡಿತು. ಇದನ್ನು ಸಾವು ಎನ್ನಬಹುದೇ? ಅಥವಾ ಕೇವಲ ರಾಸಾಯನಿಕ ಬದಲಾವಣೆ ಎನ್ನಬಹುದೆ?

**ಆದರೆ ಒಂದಂಶ ಗಮನಿಸಿ**

ಭೌತಿಕ ಬದಲಾವಣೆಯಾಗಲಿ, ರಾಸಾಯನಿಕ ಬದಲಾವಣೆಯಾಗಲಿ – ಎರಡೂ ಸಂದರ್ಭದಲ್ಲಿ ಆಗುವ ಬದಲಾವಣೆ ಒಂದು ದ್ರವ್ಯಸ್ಥಿತಿಯ ಕಣ್ಮರೆಯ ಜೊತೆಜೊತೆಗೆ ಹೊಸದೊಂದು ದ್ರವ್ಯಸ್ಥಿತಿಯ ಕಾಣಿಸಿಕೊಳ್ಳುವಿಕೆಗೂ ದಾರಿಮಾಡಿಕೊಟ್ಟಿದೆ. ಅಂದರೆ ಸಾವು-ಹುಟ್ಟಿಗೆ ಅವಿನಾ ಸಂಬಂಧವೇ? ಒಂದಂಶ ನಿಜ. ಸಾವಿನ ನಿಗೂಢವನ್ನು ಅರಿಯಬೇಕಾದರೆ ಜನನದ ನಿಗೂಢವನ್ನೂ ಅರಿಯಬೇಕು. ಈಗ ವಿಜ್ಞಾನವನ್ನು ಬದಿಗಿರಿಸಿ, ವ್ಯಾವಹಾರಿಕವಾಗಿ ಮರಣ ಕುರಿತು ಆಲೋಚಿಸೋಣ.

ಜೀವಿಸುವಿಕೆ ಎಂದರೇನು? ರಾಸಾಯನಿಕಗಳ ಮೊತ್ತವಾದ ದೇಹವೊಂದು ಆ ದೇಹದ ಘಟಕಗಳು ವಿಘಟನೀಯವಾದರೂ ಸ್ಥೂಲವಾಗಿ ತಮ್ಮ ರೂಪ, ಗುಣ ಹಾಗೂ ಕ್ರಿಯೆಗಳನ್ನು ಜೀವಿತಾವಧಿಯಲ್ಲಿ ಕಾಯ್ದುಕೊಳ್ಳುವ ಕ್ರಿಯೆ ವಿಚಿತ್ರ. ವ್ಯಕ್ತಿಯೊಬ್ಬನ ಹೆಸರು ಅದೇ ಇದ್ದರೂ ಆತನ ರೂಪ, ಗುಣ ಹಾಗೂ ಕ್ರಿಯೆಗಳು ಬದಲಾಗುತ್ತವೆಯಾದರೂ ಕ್ರಮೇಣ ಆಗುವುದರಿಂದ ನಿರಂತರತೆಯ ಭ್ರಮೆ ಮೂಡಿಸುತ್ತವೆ. ಜೀವಿಸುವಿಕೆ ಭೌತಿಕ ಬದಲಾವಣೆಯೋ ಅಥವಾ ರಾಸಾಯನಿಕ ಬದಲಾವಣೆಯೋ? ವಾಸ್ತವವೆಂದರೆ ಈ ಎರಡು ಬದಲಾವಣೆಗೆ ಪರಸ್ಪರ ಸಂಬಂಧಿ ಜಾಲ. ಈ ಜಾಲದ ಘಟಕಗಳ ನಡುವೆ ಒಂದು ಸಮಸ್ಥಿತಿ ಏರ್ಪಟ್ಟಿರುತ್ತದೆ. ಈ ಸಮಸ್ಥಿತಿ ಏನಾದರೂ ಮುರಿದುಬಿದ್ದರೆ ದೇಹದ ಘಟಕಗಳು ತಂತಮ್ಮ ಮೂಲ ಲಕ್ಷಣಗಳಿಗೆ ಬದ್ಧವಾಗಿ ವಿಘಟನೆ ಆಗತೊಡಗುತ್ತವೆ.

ಹುಟ್ಟು ಎನ್ನುವುದು ಈ ಸಮಸ್ಥಿತಿ ಜಾಲದ ರೂಪುಗೊಳ್ಳುವಿಕೆ ಹಾಗೂ ಸಾವು ಎನ್ನುವುದು ಈ ಸಮಸ್ಥಿತಿ ಜಾಲ ಕುಸಿದುಬೀಳುವಿಕೆ. ಈ ಸಮಸ್ಥಿತಿ ಜಾಲಗಳು ಭೌತಿಕ ಹಾಗೂ ರಾಸಾಯನಿಕ ಬದಲಾವಣೆಗಳಿಂದ ಕೂಡಿರುವ ಕಾರಣ ನಿರ್ಜೀವದಿಂದ ಜೀವಕ್ಕೆ, ಜೀವದಿಂದ ನಿರ್ಜೀವಕ್ಕೆ ಆಗುವ ಸಂಕ್ರಮಣವೂ ಭೌತಿಕ ಹಾಗೂ ರಾಸಾಯನಿಕ ಬದಲಾವಣೆಗಳ ಸಂಕೀರ್ಣಗೊಂಚಲು. ಜಗತ್ತಿನಲ್ಲಿ ಇರುವ ಬದಲಾವಣೆ ಎರಡೇ ಆಗಿರುವ ಕಾರಣ, ಸಾವು ಹುಟ್ಟುಗಳೂ ಈ ಎರಡೂ ಬದಲಾವಣೆಗಳ ಜಟಿಲ ಮಿಶ್ರಣ!

ಹೀಗಾಗಿಯೇ ಭೌತಿಕ ಬದಲಾವಣೆಗೂ, ರಾಸಾಯನಿಕ ಬದಲಾವಣೆಗಳಿಗೂ ಸಾವು ಹಾಗೂ ಹುಟ್ಟಿನ ಲಕ್ಷಣಗಳಿವೆ. ಭೌತಿಕ ಹಾಗೂ ರಾಸಾಯನಿಕ ಬದಲಾವಣೆ ಸಂದರ್ಭದಲ್ಲಿ ನಷ್ಟವಾಗದ ಮೂಲ ಘಟಕಗಳೂ ಇವೆ. ಅವೆಂದರೆ ಈ ಗುಣಗಳ ಪ್ರದರ್ಶನಕ್ಕೆ ಕಾರಣವಾದ ದ್ರವ್ಯ ಮತ್ತು ಚೈತನ್ಯ! ಅವಕ್ಕೆ ಸಾವಿಲ್ಲ. ಕೇವಲ ಬದಲಾಗುವುದು ಅವುಗಳ ಮಿಶ್ರಣದ ರಚನೆ ಹಾಗೂ ವಿನ್ಯಾಸದ ಏರುಪೇರು ಮಾತ್ರ. ಇದನ್ನೇ ದ್ರವ್ಯ-ಶಕ್ತಿ ಸಂರಕ್ಷಣಾ ತತ್ತ್ವ ಪ್ರತಿಪಾದಿಸುತ್ತದೆ. ದುರಂತವೆಂದರೆ, ನಮ್ಮ ಜ್ಞಾನೇಂದ್ರಿಯಗಳು ದಾಖಲಿಸುವುದು ಸಹಜವಾಗಿಯೇ ಬದಲಾಗುವ ಈ ರೂಪಗುಣ ಕ್ರಿಯೆಗಳನ್ನುಳ್ಳ ಸ್ಥಿತಿಯನ್ನು ಮಾತ್ರ. ಆದರೆ ಕಾರಣತತ್ತ್ವವಾದ ದ್ರವ್ಯ ಕಣ್ಮರೆಯಾಗಿಯೇ ಉಳಿಯುತ್ತದೆ! ನಮ್ಮ ಅನುಭವ, ಸ್ವಭಾವಗಳಿಗೆ ಕಾರಣವಾದ ದ್ರವ್ಯ ಮತ್ತು ಚೈತನ್ಯವೇ ನಾವೆಂದು ಗುರುತಿಸಿಕೊಂಡರೆ – ನಾವೆಲ್ಲರೂ 'ಅಮೃತಸ್ಯ ಪುತ್ರ'ರು. ಅಂತೂ ಸ್ಥಿರತತ್ತ್ವಗಳನ್ನೂ ಬದಲಾಗುವ ಲಕ್ಷಣಗಳನ್ನೂ ಹೆಣೆದು ನಿಸರ್ಗವು ಬದುಕೆಂಬ ನಿಗೂಢವನ್ನು ರಚಿಸಿದೆ. ಸಾವು ಅದರೊಂದಿಗೆ ಹುಟ್ಟು ಅರ್ಥಾತ್ ಭೌತಿಕ ಹಾಗೂ ರಾಸಾಯನಿಕ ಬದಲಾವಣೆಗಳು ನಿರಂತರ ಸಾಗಿಯೇ ಜೀವದ ಸೃಷ್ಟಿ ಜೀವಿಯ ಮೃತಿಗೆ ಕಾರಣವಾಗಿವೆ. ಸೂಕ್ಷ್ಮ ರೂಪದ ಈ ಸಾವು ಹುಟ್ಟುಗಳನ್ನು ಉಪೇಕ್ಷಿಸಿ ಜೀವಿ-ಅಜೀವಿಯಾದುದನ್ನು ಬೇರೆಗೆಂದು ಹೇಳುತ್ತೇವಲ್ಲವೆ? ಜೀವಿಗಳಿಗೆ ಆಕಸ್ಮಾತ್ ದೊರೆತ ಸ್ವಪ್ರಜ್ಞೆ ಹಾಗೂ ಪರಿಸರ ಪ್ರಜ್ಞೆಯಿಂದಾಗಿ ಜಡವಸ್ತುಗಳನ್ನು ಕಡೆಗಣಿಸುವ ಧಿಮಾಕು ಬಹಳ. ಇದನ್ನು ತಗ್ಗಿಸಲು ದಾರ್ಶನಿಕರು ವಿಶೇಷವಾಗಿ ಪ್ರಯತ್ನಿಸಿದ್ದಾರೆ. ಆ ಪೈಕಿ 'ಉಮರನ ಒಸಗೆ'ಯೂ ಒಂದು. ಆ ಪದ್ಯಗಳ ಕನ್ನಡಾವತರಣಿಕೆಯಲ್ಲಿ ಎರಡು ಪದ್ಯಗಳು:

ಒಂದು ದಿನ ಸಂಜೆ ನಾಂ ಪೇಟೆ ಚೌಕದೊಳಿರಲು
ಕುಂಬಾರನು ಗುದ್ದುತಿದ್ದನು ಹಸಿಯ ಮಣ್ಣ
ನಾಲಗೆಯನದುಮಿಸಿ ಕೊಳುತ್ತೆಂದಿತಾ ಮುದ್ದೆ
''ನಾನಿರ್ದೆನಿನ್ನವೊಲೆ; ಮೆಲ್ಲನೆ ಮುಟ್ಟಣ್ಣ'' (೩೭)

ಎನ್ನಕಳ್ ಕುಡಿಕೆಯನು ನೆನ್ನೆಬಡಿದೆನು ಕಲ್ಗೆ
ಆ ತಪ್ಪ ನಾಂ ಮತ್ತಿನಿಂ ಗೆಯ್ದೆನೇನೋ!
ಆಗಳಾಕುಡಿಕೆ ಯವನಗಿಂತುಸಿರಿದಂತಾಯ್ತು
ನಿನ್ನವೋಲ್ ನಾನಿದ್ದೆ; ನೀನೆನ್ನವೋಲಹೆ (೧೬೬)

**ಪ್ರೊ|| ಎಮ್. ಆರ್. ನಾಗರಾಜು,**
ಎಫ್-೩, ಎಸ್.ಎಫ್.ಎಸ್ ನಿವಾಸಿಗಳು, ೭ನೇ ಅಡ್ಡರಸ್ತೆ
ಯಲಹಂಕ ಉಪನಗರ, ಬೆಂಗಳೂರು - ೫೬೦ ೧೦೬



'ಸ್ಟ್ರೆಟ್' ತೈಲವರ್ಣ



'ಗ್ರೋತ್' ತೈಲವರ್ಣ





'ಲವ್ ಎಟ್ ಫಸ್ಟ್ ಸೈಟ್' ತೈಲವರ್ಣ

# ಕುಂಚಲೋಕದ ಬಸವರಾಜ ಎಲ್. ಜಾನೆ

ಬಸವರಾಜ ಎಲ್. ಜಾನೆ ಅವರು ಗುಲಬರ್ಗಾದ ಐಡಿಯಲ್ ಫೈನ್ ಆರ್ಟ್ಸ್ ಸಂಸ್ಥೆಯ ಪ್ರಾಂಶುಪಾಲರು.

ಜಲವರ್ಣದಲ್ಲಿ ನೂರಾರು ಪ್ರಕೃತಿ ಚಿತ್ರಗಳನ್ನು ರಚಿಸಿದ್ದಾರೆ. ಜಲವರ್ಣ ಹಾಗೂ ತೈಲವರ್ಣಗಳೆರಡರಲ್ಲೂ ಅವರದು ಎತ್ತಿದ ಕೈ. ಚಿತ್ರಕಲಾ ಶಿಬಿರಗಳನ್ನು ಸಂಘಟಿಸಿದುದಲ್ಲದೆ ಅವರು ಸಮೂಹ ಕಲಾ ಪ್ರದರ್ಶನಗಳನ್ನು ಹಾಗೂ ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನಗಳನ್ನು ಏರ್ಪಡಿಸಿದ್ದಾರೆ.

ಜಾನೆ ಅವರ ಅನೇಕ ಶಿಷ್ಯರು ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಸಾಧನೆ ಮಾಡಿದ್ದಾರೆ.

**ನಾರಾಯಣ ಎಂ. ಜೋಶಿ**
ಕಲಾವಿದರು, ಛಾಯಾಚಿತ್ರಕಾರರು, ಅಂಕಣಕಾರರು
ಮನೆ ನಂ ೨-೮೨೬, ಎಂ.ಆರ್.ಎಂ.ಸಿ. ಎದುರುಗಡೆ, ಸೇಡಂ ರಸ್ತೆ, ಗುಲಬರ್ಗಾ - ೫೮೫ ೧೦೫



'ಚಾಯ್ಸ್' ತೈಲವರ್ಣ



'ಡಿಕ್ಟೇಟರ್' ತೈಲವರ್ಣ



'ಪ್ರಿಸನರ್' ತೈಲವರ್ಣ

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / OCTOBER 2011 / Rs. 12
RNI Regd. KARKAN / 1999 / 614. Karnataka Regd. KRNA/BGE/7/2009-11
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)

# ಯೌವ್ವನಭರಿತ ತ್ವಚೆಗಾಗಿ ಕೋಮಲ ಮೊಯಿಶ್ಚರೈಸಿಂಗ್.




ಅತ್ಯಂತ ಪಾರದರ್ಶಕ ಹೊಸ ಸಂತೂರ್ ಗ್ಲಿಸರಿನ್‌ನ್ನು ಆವಿಷ್ಕರಿಸಿನೋಡಿ. ಇದು ಗ್ಲಿಸರಿನ್‌ನ ಸೌಮ್ಯ ಮೊಯಿಶ್ಚರೈಸಿಂಗ್ ಮತ್ತು ವಿಟಮಿನ್ ಇ-ಯ ಹೆಚ್ಚುವರಿ ಪೋಷಣೆಯ ಆರೈಕೆ ಹೊಂದಿದೆ. ಸಂಪೂರ್ಣ ಹೊಸ ಅನುಭೂತಿಯೊಂದನ್ನು ಆವಿಷ್ಕರಿಸಿ. ಇಂದೇ.





DRAFTFCB + ULKA 050008